# ಹೊಸತು

ನೆಮ್ಮದಿಯ ನಾಳೆ ನಮ್ಮದು

## ಒಳಗೇನಿದೆ ...



ಚಿತ್ರಗಳು : ಗೋಪಿ, ನಾಮದೇವ, ಸಂಕೇತ್, ಶ್ರೀಹರಿ, ಕಮಲಂ ಅರಸು

ಮುಖಚಿತ್ರ : ಸಲೀಮ ಬಳಬಟ್ಟಿ

ವಿನ್ಯಾಸ : ನವಕರ್ನಾಟಕ ವಿನ್ಯಾಸ

ಕಚೇರಿ ಸಹಕಾರ : ಜಿ. ವಿ. ತೇಜೋವತಿ

## ಈ ತಿಂಗಳು

ಜನವರಿಯಲ್ಲಿ ಎರಡು ಕಮ್ಯುನಿಸ್ಟ್ ಪಕ್ಷಗಳು ತಮ್ಮ ರಾಜ್ಯ ಸಮ್ಮೇಳನಗಳನ್ನು ಬೆಂಗಳೂರು ಮತ್ತು ಚಿಕ್ಕಬಳ್ಳಾಪುರದಲ್ಲಿ ನಡೆಸಿವೆ. ಎರಡೂ ಪಕ್ಷಗಳು ತಮ್ಮ ರಾಷ್ಟ್ರೀಯ ಸಮ್ಮೇಳನಗಳನ್ನು ಸದ್ಯದಲ್ಲೇ ಜರುಗಿಸಲಿವೆ. ಪಶ್ಚಿಮ ಬಂಗಾಳದಲ್ಲಿ ಎಡಪಕ್ಷಗಳ ಭಾರಿ ಪರಾಭವ, ಉತ್ತರ ಪ್ರದೇಶದಲ್ಲಿ ಚುನಾವಣಾಪೂರ್ವ ಪಕ್ಷಾಂತರಗಳು, ರಾಜ್ಯದಲ್ಲಿ ಮತೀಯ ದುಷ್ಟಶಕ್ತಿಗಳ ಗಾಢ ಪರಿಣಾಮ, ಸಾರ್ವಜನಿಕ ಸಂಪತ್ತಿನ ಎಗ್ಗಿಲ್ಲದ ಲೂಟಿ, ವಾಲ್‌ಮಾರ್ಟ್‌ನಂಥ ವಿದೇಶಿ ಕಂಪನಿಗಳ ನಿರೀಕ್ಷಿತ ಧಾಳಿ, ವಿದೇಶಿ ವಿನಿಮಯದಲ್ಲಿ ರೂಪಾಯಿನ ಕುಸಿತ, ರಾಜ್ಯದಲ್ಲಿ ಭ್ರಷ್ಟಾಚಾರದ ತಾಂಡವ, ಕೃಷಿಕ್ಷೇತ್ರದ ಬಿಕ್ಕಟ್ಟು, ಇತ್ಯಾದಿಗಳ ಹಿನ್ನೆಲೆಯಲ್ಲಿ ಸಮ್ಮೇಳನಗಳು ನಡೆದಿವೆ ಮತ್ತು ನಡೆಯಲಿವೆ. ಈ ಎಲ್ಲ ಸವಾಲುಗಳನ್ನೆದುರಿಸಲು ಸಂಘಟಿತ ಜಂಟಿ ಹೋರಾಟಗಳು ಹಿಂದೆಂದಿಗಿಂತಲೂ ಇಂದು ಹೆಚ್ಚು ಅನಿವಾರ್ಯವೆಂಬ ಸಂದರ್ಭ ನಮ್ಮದು. ಹತ್ತು ಲಕ್ಷಕ್ಕೂ ಹೆಚ್ಚು ಜನರನ್ನು ಇರಾಕ್ ಒಂದರಲ್ಲೇ ಕೊಂದಿರುವ ಅಮೆರಿಕಾದೊಂದಿಗೆ ಸಖ್ಯವು ಧೃತರಾಷ್ಟ್ರಾಲಿಂಗನವಾಗುವುದು ಖಚಿತವೆಂಬ ಪ್ರಾಥಮಿಕ ತಿಳಿವಿಲ್ಲದ ಮನಮೋಹನ ಸಿಂಗ್ ಸರ್ಕಾರವು ದೇಶವನ್ನು ಪರಾವಲಂಬನೆಯತ್ತ ದೂಡುತ್ತಿದೆ. ನಿರ್ದಿಷ್ಟ ಘೋಷಿತ ಕಾರ್ಯಕ್ರಮಗಳನ್ನಾಧರಿಸಿದ ಸಂಘಟಿತ ಹೋರಾಟಗಳನ್ನು ರೂಪಿಸಲು ಕಮ್ಯುನಿಸ್ಟ್ ಪಕ್ಷಗಳು ಇನ್ನಾದರೂ ಕಾರ್ಯಪ್ರವೃತ್ತರಾಗುತ್ತವೆಂಬ ನಿರೀಕ್ಷೆ ಇದೆ. ರೈತ ಸಂಘಗಳು ಹಾಗೂ ದಲಿತ ಸಂಘರ್ಷ ಸಮಿತಿಗಳು ಈ ಜಂಟಿ ಹೋರಾಟದಲ್ಲಿ ಸೇರ್ಪಡೆಗೊಳ್ಳುವಂತೆ ಅವನ್ನು ಆಹ್ವಾನಿಸಬೇಕು. ಶತ್ರು ಪಾಳೆಯದ ಕಾಂಗ್ರೆಸ್ ಮತ್ತು ಭಾರತೀಯ ಜನತಾ ಪಕ್ಷ ಪ್ರತ್ಯೇಕವಾಗಿದ್ದರೂ ಧೋರಣೆ ಮತ್ತು ನೀತಿಯಲ್ಲಿ ಸಮಾನಮನಸ್ಕವಾದವು. ಎರಡೂ ಬಹುರಾಷ್ಟ್ರೀಯ ಕಂಪನಿಗಳ, ಅಮೆರಿಕಾದ, ಬಂಡವಾಳಶಾಹಿಯ, ಸಮರ್ಥನೆ ಮಾಡುವಂಥವು; ಎರಡೂ ಆಳುವ ವರ್ಗದ ವಿಭಾಗಗಳು. ಜನಪರ ನೀತಿಗಳನ್ನು ಘೋಷಿಸುವ ಪಕ್ಷಗಳಲ್ಲಿ ಐಕ್ಯತೆಗಾಗಿ ಧಾವಂತವಿಲ್ಲದಿದ್ದರೆ ಅವುಗಳ ಘೋಷಣೆ ಹುಸಿಯಾಗುತ್ತದೆ, ಅರ್ಥಹೀನವಾಗುತ್ತದೆ.

೧೯೩೦ರ ದಶಕದಲ್ಲಿ ಹಿಟ್ಲರನ ಬಲಗೈಭಂಟ ಗೋರಿಂಗ್ ತನ್ನ ಜರ್ಮನಿ ದೇಶದ ಪಾರ್ಲಿಮೆಂಟಿಗೆ (ರೈಗ್‌ಸ್ಟಾಗ್) ಬೆಂಕಿಯಿಕ್ಕಿ ಅದನ್ನು ಕಮ್ಯುನಿಸ್ಟರು ಮಾಡಿದ್ದೆಂದು ಅಬ್ಬರಿಸಿದ, ಡಿಮೆಟ್ರೋವನನ್ನು ಬಂಧಿಸಿ ಆರೋಪಿಯನ್ನಾಗಿಸಿದ. ಅವನ ಫ್ಯಾಸಿಸ್ಟ್ ಕಾರ್ಯಕ್ರಮವು ಬಹಿರಂಗವಾದಾಗಲೂ ಅಮೆರಿಕಾದಂತಹ ದೇಶಗಳು ಎಚ್ಚರಗೊಳ್ಳಲಿಲ್ಲ. ಮುಂದಿನ ಕತೆ ಗೊತ್ತೇ ಇದೆ. ಆ ಕತೆಯ ಮೊದಲ ಭಾಗ ನಮ್ಮ ರಾಜ್ಯದ ಬಿಜಾಪುರದಲ್ಲಿ ಈಗ ಬಹಿರಂಗಗೊಂಡಿದೆ. ಪಾಕಿಸ್ತಾನದ ಧ್ವಜ ಮುಟ್ಟಿದರೆ ಕೈ ಕತ್ತರಿಸಬೇಕೆಂದು ಅರಚುವ ಆರೆಸ್ಸೆಸ್- ಶ್ರೀರಾಮಸೇನೆ (ಶ್ರೀರಾಮನ ಮುಖಕ್ಕೆ ಸಗಣಿ ಎರಚಲು ಇವು ಸಾಕಲ್ಲ!) ಬಿಜಾಪುರದಲ್ಲಿ ಪಾಕಿಸ್ತಾನದ ಧ್ವಜವನ್ನು ಸರ್ಕಾರಿ ಕಚೇರಿಯ ಮೇಲೆ ಹಾರಿಸಿವೆ. ಉದ್ದೇಶ ಸ್ಪಷ್ಟವಿದೆ : ಕರ್ನಾಟಕವನ್ನು ಗುಜರಾತ್ ಮಾಡುವುದು. ಮುಸಲ್ಮಾನರು ಧ್ವಜ ಹಾರಿಸಿದರೆಂದು ಗುಲ್ಲೆಬ್ಬಿಸಿ ಮತೀಯ ಸಂಘರ್ಷಕ್ಕೆ ಚಿತಾವಣೆ, ಆಮೇಲೆ ಅಲ್ಪಸಂಖ್ಯಾತರ ರುಂಡಗಳ ಚೆಂಡಾಟ. ಇದು ಈ ಸಂಘಟನೆಗಳ ನಿಕೃಷ್ಟ ಸಂಸ್ಕೃತಿ. ಅದನ್ನೇ ''ಭಾರತೀಯ ಸಂಸ್ಕೃತಿ'' ಎಂದು ಹೇಳಿಕೊಳ್ಳುವ ಅಸಭ್ಯತೆ ಮತ್ತು ಮೊಂಡು ಧೈರ್ಯ ಬೇರೆ. ಶ್ರೀ. ಸದಾನಂದಗೌಡರ ಭಾಜಪವೇ ಅಧಿಕಾರದಲ್ಲಿದ್ದಾಗ್ಯೂ ಬಿಜಾಪುರದ ಪೊಲೀಸರು ಅಪರಾಧಿಗಳನ್ನು ಗುರುತಿಸಿ ಅವರನ್ನು ಹೆಸರಿಸಿರುವುದು ಶ್ಲಾಘನೀಯ, ಅಭಿನಂದನಾರ್ಹ. ಫ್ಯಾಸಿಸ್ಟರು ಎಷ್ಟೆಷ್ಟು ಮುಖವಾಡಗಳನ್ನು ಧರಿಸಿದರೂ ಅವರು ಫ್ಯಾಸಿಸ್ಟರೇ ಆಗಿರುತ್ತಾರೆ. ಇದನ್ನು ನೋಡಿಯೂ ವಿಚಲಿತವಾಗದೆ ಉಳಿಯುವ ಕೆಲವು ರಾಜಕೀಯ ಪಕ್ಷಗಳಿರುವುದು ನಮ್ಮ ದೇಶದ ದುರಂತ. ಅವಕ್ಕೆ ಗಣಿಗಳ ಲೂಟಿ, ಸಾರ್ವಜನಿಕ ಸಂಪತ್ತನ್ನು ಲಪಟಾಯಿಸುವುದು, ಪರಸ್ಪರ ಬೈದಾಟ, ಮಂಗಗಳಂತೆ ಪಕ್ಷಗಳಿಗೆ ಹಾರುವುದು, ಇವೇ ಪ್ರಮುಖ ಕಾರ್ಯಸೂಚಿ. ಇದೆಲ್ಲವನ್ನು ಹಿಮ್ಮೆಟ್ಟಿಸಲು ಕಮ್ಯುನಿಸ್ಟ್ ಪಕ್ಷಗಳು ಸಂಘಟಿತ ಐಕ್ಯ ಹೋರಾಟಗಳ ಮುಂಚೂಣಿಯಲ್ಲಿ ನಿಲ್ಲುತ್ತವೆಯೇ ಎಂದು ಕಾತುರದಿಂದ ಜನ ಎದುರುನೋಡುತ್ತಾರೆ.

* * *

''ಸಾಹಿತಿ, ಚಿಂತಕ, ತತ್ತ್ವಶಾಸ್ತ್ರವೇತ್ತ'' ಡಾ|| ಎಸ್. ಎಲ್. ಭೈರಪ್ಪನವರು ಇತಿಹಾಸದ ''ಆವರಣ''ವನ್ನು ಕೇವಲ ಪ್ರವೇಶಿಸಿಲ್ಲ, ಆಕ್ರಮಿಸಿಯೂ ಇದ್ದಾರೆ. ವಿದ್ಯಾರ್ಥಿದೆಸೆಯಿಂದಲೂ ಅವರು ವಿಚಿತ್ರವಾದ ಚರಿತ್ರೆಯಲ್ಲಿ ಆಸಕ್ತಿ ಉಳಿಸಿಕೊಂಡಿರುವವರೇ ಆಗಿದ್ದಾರೆ. ೧೯೫೦ರ ದಶಕದಲ್ಲಿ ಊಟ ಮಾಡುವಾಗೆಲ್ಲಾ ಅವರು ಉತ್ಖನನಶಾಸ್ತ್ರದ ಚರ್ಚೆ ನಡೆಸಿ ''ಸಹ-ಭೋಜ''ಕರನ್ನು ದಂಗುಪಡಿಸುತ್ತಿದ್ದವರಲ್ಲವೆ ! ಸಮಾಜದ ಇತಿಹಾಸದ ಬಗ್ಗೆ ಅವರಿಗೆ ಅನನ್ಯವಾದ ಎಳಸುತನದ ಪ್ರಜ್ಞೆ ಇದೆ. ಅದು ಅವರ ಕಾದಂಬರಿಗಳಲ್ಲಿ ಪ್ರದರ್ಶನಕ್ಕಿಡಲ್ಪಟ್ಟಿದೆ. ಅವರು ಎನ್.ಸಿ.ಇ.ಆರ್.ಟಿ.ಯಲ್ಲಿ ನೌಕರಿಯಲ್ಲಿದ್ದಾಗ ಅವರ ಸಹೋದ್ಯೋಗಿಗಳಲ್ಲಿ

*(೬ನೇ ಪುಟಕ್ಕೆ)*



ತಿಂಗಳ ಪತ್ರಿಕೆ

# ಹೊಸತು

ವೈಜ್ಞಾನಿಕ ವಿಚಾರ ಸಮೃದ್ಧ

ನವಕರ್ನಾಟಕ ಪ್ರಕಾಶನ

ಸಂಪುಟ-೧೩ ಸಂಚಿಕೆ-೭ ಫೆಬ್ರವರಿ ೨೦೧೨

**ಸಂಪಾದಕ**

ಜಿ. ರಾಮಕೃಷ್ಣ

**ಸಹಸಂಪಾದಕರು**

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಲ್. ಗೋಪಾಲಕೃಷ್ಣಯ್ಯ
ಕೆ. ಎಸ್. ಪಾರ್ಥಸಾರಥಿ
ಕೆ. ಪಿ. ಸ್ವಾಮಿ
ಎಸ್. ಸುರೇಂದ್ರ

**ವ್ಯವಸ್ಥಾಪಕ**

ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ: ೨೮೩೯೭೪೨೬

**ಹೊಸತು ಕಚೇರಿಯ ವಿಳಾಸ**



**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೧೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ : ೩೦೫೭೮೦೨೯, ೨೨೨೦೩೫೮೦
ಫ್ಯಾಕ್ಸ್: ೩೦೫೭೮೦೨೩
e-mail : navakarnataka@gmail.com
hosathu@gmail.com
URL : www.navakarnataka.com
http : //navakarnataka.blogspot.com
http : //hosathu.blogspot.com





## ಭಾಜಪದ ಅವಕಾಶವಾದಿ ರಾಜಕಾರಣ

ಆರೆಸ್ಸೆಸ್ ಮಧ್ಯಪ್ರವೇಶದಿಂದ ಕರ್ನಾಟಕದಲ್ಲಿ ಭಾರತೀಯ ಜನತಾ ಪಕ್ಷದ ಬಣಗಳ ಮಧ್ಯೆ ಕೆಸರೆರೆಚಾಟ ಸದ್ಯಕ್ಕೆ ತಣ್ಣಗಾಗಿರುವಂತೆ ಕಾಣುತ್ತಿದೆ. ಆದರೆ ಒಳಗೊಳಗೇ ಅತೃಪ್ತಿಯ ಹೊಗೆಯಾಡುತ್ತಿದೆ. ಯಾವಾಗ ಅದು ಸ್ಫೋಟ ವಾಗುತ್ತದೋ ನೋಡಬೇಕು. ಮಾಜಿ ಮುಖ್ಯಮಂತ್ರಿ ಯಡಿಯೂರಪ್ಪ ತಮ್ಮ ಶಕ್ತಿ ಪ್ರದರ್ಶನವನ್ನು ಮುಂದುವರಿಸಿದ್ದಾರೆ. ಅವರ ನಿಕಟವರ್ತಿಗಳಾದ ಕೆಲ ಸಚಿವರು ಈಗಲೂ ಅವಕಾಶ ಸಿಕ್ಕಾಗಲೆಲ್ಲ ಯಡಿಯೂರಪ್ಪನವರಿಗೆ ಸೂಕ್ತ ಸ್ಥಾನಮಾನ ದೊರಕಬೇಕು ಎಂದು ಹೇಳುತ್ತಿದ್ದಾರೆ. ಇವರಲ್ಲಿ ಮಂಚೂಣಿಯಲ್ಲಿರುವುದು ಸಚಿವ ರೇಣುಕಾಚಾರ್ಯ. ಇನ್ನು ಯಡಿಯೂರಪ್ಪ ಭಾಜಪ ಕೇಂದ್ರ ನಾಯಕತ್ವ ತಮಗೆ ಅನ್ಯಾಯ ಎಸಗಿದೆ, ತನ್ನನ್ನು ಬಲಿಪಶುವಾಗಿ ಮಾಡಿದೆ ಎಂದು ಟೀಕಿಸುತ್ತಲೇ ಬಂದಿದ್ದಾರೆ. ಆದರೆ ಭಾಜಪ ನಾಯಕತ್ವ ಮಾತ್ರ ಯಾವುದೇ ಕ್ರಮ ಕೈಗೊಳ್ಳದೆ ಇದೆ. ದೆಹಲಿಗೇ ಹೋಗಿ ಬಿಎಸ್‌ವೈ ಲಾಬಿ ನಡೆಸಿದರೂ ಪ್ರಯೋಜನವಾಗಿಲ್ಲ. ಶಿಸ್ತಿನ ಪಕ್ಷ ತಮ್ಮದೆಂದು ಹೇಳಿಕೊಳ್ಳುವ ಭಾಜಪ ನಡವಳಿಕೆಯಲ್ಲಿ ನಡೆದುಕೊಳ್ಳುವ ರೀತಿಯೇ ಬೇರೆ. ಅಧಿಕಾರದಲ್ಲಿ ಉಳಿದುಕೊಳ್ಳಲು ಏನು ಬೇಕಾದರೂ ಸರಿ ಮಾಡಲು ಸಿದ್ಧ ಎನ್ನುವುದನ್ನು ಎನ್‌ಡಿಎ ಅಧಿಕಾರದ ದಿನಗಳಲ್ಲೇ ತೋರ್ಪಡಿಸಿಕೊಂಡಿದ್ದರು. ಕರ್ನಾಟಕದ ವಿಷಯದಲ್ಲಿ ನಡೆದುಕೊಂಡಿರುವ ರೀತಿ ಅದನ್ನು ಇನ್ನಷ್ಟು ದೃಢಪಡಿಸಿದೆ. ಭ್ರಷ್ಟಾಚಾರ, ಸ್ವಜನ ಪಕ್ಷಪಾತದ ಆರೋಪದ ಮೇಲೆ, ಭೂಕಬಳಿಕೆ ಆಪಾದನೆಯ ಮೇಲೆ ಜೈಲಿಗೆ ಹೋಗಿ ಬಂದಿರುವ ಸಚಿವರುಗಳು, ಶಾಸಕರ ಮೇಲೆ ಯಾವುದೇ ಕ್ರಮವನ್ನು ಪಕ್ಷ ಇದುವರೆಗೆ ಕೈಗೊಂಡಿಲ್ಲ. ಅಕ್ರಮ ಗಣಿಗಾರಿಕೆಯಲ್ಲಿ ಸಿಕ್ಕಿಕೊಂಡು ಹೈದರಾಬಾದ್ ಕಾರಾಗೃಹದಲ್ಲಿರುವ ಮಾಜಿ ಸಚಿವ ಜನಾರ್ದನ ರೆಡ್ಡಿ ಇನ್ನೂ ಭಾಜಪ ಸದಸ್ಯ! ಬಳ್ಳಾರಿ ಉಪ ಚುನಾವಣೆಯಲ್ಲಿ ಬಂಡೆದ್ದು ಭಾಜಪ ತೊರೆದು ಸ್ವತಂತ್ರ ಅಭ್ಯರ್ಥಿಯಾಗಿ ಗೆದ್ದುಬಂದಿರುವ ಮಾಜಿ ಸಚಿವ ಶ್ರೀರಾಮುಲು ಮತ್ತೆ ಪಕ್ಷಕ್ಕೆ ಹಿಂದಿರುಗಿದರೆ ಅಚ್ಚರಿಪಡಬೇಕಾಗಿಲ್ಲ. ಚುನಾವಣೆಯಲ್ಲಿ ಅವರಿಗೆ ಬೆಂಬಲ ನೀಡಿ ಪ್ರಚಾರ ನಡೆಸಿದ್ದ ಶಾಸಕರು ಮತ್ತು ಪಾರ್ಲಿಮೆಂಟ್ ಸದಸ್ಯರ ಅಮಾನತನ್ನು ವಿಧಾನ ಪರಿಷತ್ ಚುನಾವಣೆ ಸಮಯದಲ್ಲಿ ಹಿಂತೆಗೆದುಕೊಂಡದ್ದು ಭಾಜಪದ ಸಂದರ್ಭ ಸಾಧಕತನವನ್ನು ಎತ್ತಿ ತೋರಿಸಿದೆ. ಹೇಗಾದರೂ ಕರ್ನಾಟಕದಲ್ಲಿ ಉಳಿದ ಹದಿನೆಂಟು ತಿಂಗಳು ಅಧಿಕಾರಕ್ಕಂಟಿ ಕೊಂಡಿರುವುದು ಭಾಜಪಗೆ ಮುಖ್ಯ. ಇಕ್ಕಟ್ಟಿನಲ್ಲಿರುವ ಮುಖ್ಯಮಂತ್ರಿ ಸದಾನಂದ ಗೌಡರ ದಾರಿ ಸುಗಮವಾಗೇನಿಲ್ಲ. ಸಂಪುಟ ವಿಸ್ತರಣೆ ಕಸರತ್ತು ಇರುವೆ ಹುತ್ತಕ್ಕೆ ಕೈ ಇಟ್ಟಂತೆ ಆದೀತು. ಇವರು ಅಧಿಕಾರದಲ್ಲಿ ಮುಂದುವರಿಯಲು ಯಡಿಯೂರಪ್ಪ ಮತ್ತವರ ಬೆಂಬಲಿಗರು ಬಿಡುವರೇ ? ಇದಕ್ಕೆ ನೇರವಾದ ಉತ್ತರ ಕಷ್ಟ, ಸದ್ಯದಲ್ಲಿ. ಅಧಿಕಾರದ ಮೇಲೆ, ಸಚಿವರುಗಳ ಮೇಲೆ ಹಿಡಿತವೇ ಇಲ್ಲದ ಮುಖ್ಯಮಂತ್ರಿ ದಿನ ನೂಕುತ್ತಿದ್ದಾರೆ. ವಿಧಾನಸೌಧದಲ್ಲಿ ಸಚಿವರುಗಳು ಯಾವಾಗಲೂ ನಾಪತ್ತೆ. ಇಂಥ ಶಿಥಿಲವಾದ, ಭ್ರಷ್ಟವಾದ ಆಡಳಿತವನ್ನು ಕರ್ನಾಟಕಕ್ಕೆ ನೀಡಿರುವ 'ಕೀರ್ತಿ' ಭಾಜಪಗೆ ಸಲ್ಲುತ್ತದೆ. ಅಧಿಕಾರಕ್ಕೆ ಬಂದ ದಿನದಿಂದ ಆಪರೇಷನ್ ಕಮಲದಂಥ ಕೀಳು ರಾಜಕಾರಣದಲ್ಲಿ ಮೆರೆದ ಭಾಜಪದ ಅವಕಾಶವಾದಿ ರಾಜಕಾರಣವನ್ನು ಕರ್ನಾಟಕದ ಜನ ಇನ್ನೆಷ್ಟು ದಿನ ಅನುಭವಿಸಬೇಕೋ.

ಇಷ್ಟೆಲ್ಲ ಅನಾಹುತಗಳಿಗೆ ಮೂಲ ಕಾರಣ ಭಾಜಪದ ಹೈಕಮಾಂಡ್. ಒಡೆದ ಮನೆಯಾಗಿರುವ ಭಾಜಪ ಕೇಂದ್ರದ ನಾಯಕರುಗಳು ಪಕ್ಷವನ್ನು ಎಳೆದಾಡುತ್ತಿದ್ದಾರೆ. ಹಲವು ನಾಯಕ ಮಣಿಗಳನ್ನು ಹೊಂದಿರುವ ಪಕ್ಷದ ಕಣ್ಣು ಮುಂದಿನ ಮಹಾಚುನಾವಣೆಗಳ ಮೇಲೆ. ಪ್ರಧಾನಿ ಪಟ್ಟಕ್ಕಾಗಿ ಈಗಲೇ ಪೈಪೋಟಿ ಪ್ರಾರಂಭವಾಗಿದೆ. ಒಮ್ಮೆಯಾದರೂ ಪ್ರಧಾನಿಯಾಗಲು ತವಕದಿಂದ ಕಾಯುತ್ತಿರುವ ಭೀಷ್ಮ ಲಾಲಕೃಷ್ಣ ಅದ್ವಾನಿ ಈಚೆಗೆ ನಡೆಸಿದ ಮೂರನೆ ರಥಯಾತ್ರೆ ನಿರೀಕ್ಷಿತ ಫಲ ನೀಡಲಿಲ್ಲ. ಭ್ರಷ್ಟಾಚಾರಕ್ಕೆ ಇನ್ನೊಂದು ಹೆಸರಾದ ಭಾಜಪ ಪಕ್ಷ ಆಡಳಿತದಲ್ಲಿರುವ ರಾಜ್ಯಗಳಲ್ಲಿ ತಾಂಡವವಾಡುತ್ತಿರುವ ಭ್ರಷ್ಟಾಚಾರವೇ ಅದಕ್ಕೆ ಸಾಕ್ಷಿ. ಲೋಕಪಾಲ ಮಸೂದೆ ವಿಚಾರದಲ್ಲಿ ಭಾಜಪ ತಳೆದ ದ್ವಿಮುಖ ಧೋರಣೆ ಸರ್ವವಿದಿತ. ಕಾಂಗ್ರೆಸ್ಸಿಗಾಗಲಿ ಭಾಜಪಗಾಗಲಿ ಬಲವಾದ ಲೋಕಪಾಲ ಕಾಯಿದೆಯಲ್ಲಿ ಆಸಕ್ತಿಯಿಲ್ಲ. ಬೂರ್ಷ್ವಾ ಪಾರ್ಟಿ ಹಣೆಬರಹವೇ ಅಷ್ಟು, ಅಧಿಕಾರದಲ್ಲಿದ್ದಾಗ ಒಂದು, ಇಲ್ಲದಾಗ ಒಂದು. ಐದು ರಾಜ್ಯಗಳಲ್ಲಿ ನಡೆಯುವ ಚುನಾವಣೆಯ ಸಂದರ್ಭದಲ್ಲಿ ಈ ಪಕ್ಷಗಳು ನಡೆದುಕೊಳ್ಳುತ್ತಿರುವ ರೀತಿ ಅವುಗಳ ಅವಕಾಶವಾದಿ ರಾಜಕಾರಣವನ್ನು ಸ್ಪಷ್ಟವಾಗಿ ಹೊರಗೆಡಹಿದೆ. ಉತ್ತರಪ್ರದೇಶದ ಚುನಾವಣೆ ಘೋಷಣೆಯಾದ ಮೇಲೆ ಭ್ರಷ್ಟಚಾರದ ಆಪಾದನೆಯ ಮೇಲೆ ಮಾಯಾವತಿ ಸರಕಾರದ ಸಚಿವ ಬಾಬುಸಿಂಗ್ ಕುಶ್ವಾಹ ಎಂಬಾತನನ್ನು ಭಾಜಪಗೆ ಸೇರಿಸಿಕೊಂಡಿದ್ದು ಪಕ್ಷದಲ್ಲಿ ದೊಡ್ಡ ಅವಾಂತರವನ್ನೇ ಸೃಷ್ಟಿಸಿತು. ನಾಯಕರ ನಡುವೆ ಇರುವ ಭಿನ್ನಾಭಿಪ್ರಾಯಗಳನ್ನು ಬೀದಿಗೆ ತಂದಿತು. ಅಧ್ಯಕ್ಷ ನಿತೀನ್ ಗಡ್ಕರಿ ಕೊನೆಗೆ ಹಿಂದೆ ಸರಿಯಬೇಕಾಯಿತು. ಆತನ ಸದಸ್ಯತ್ವವನ್ನು ಅಮಾನತಿನಲ್ಲಿರಿಸಲಾಯಿತು. ಆತನ ಕೋರಿಕೆಯ ಮೇರೆಗೆ! ಈ ಇಡೀ ಪ್ರಕರಣದ ಸಂದರ್ಭದಲ್ಲಿ ಭಾಜಪ ನಾಯಕರು ನಡೆದುಕೊಂಡ ರೀತಿ ಅಸಹ್ಯಕರವಾಗಿತ್ತು. ಈತ ಪಕ್ಷಕ್ಕೆ ಸೇರಲು ಕೋಟಿಗಟ್ಟಲೆ ಹಣವನ್ನು ನೀಡಿದ್ದಾನೆಂದು ವದಂತಿ. ಈತ ಹಿಂದುಳಿದ ಜನಾಂಗದ ಪ್ರತಿನಿಧಿಯಾಗಿರುವುದರಿಂದ ಅವರ ಮತಗಳನ್ನು ಪಡೆಯಬಹುದೆಂಬುದೇ ಲೆಕ್ಕಾಚಾರ. ಇದು ಭಾಜಪಗೆ ಹೊಸದೇನಲ್ಲ. ಪಕ್ಷ ಬಿಟ್ಟು ಹೋಗುವವರು ಮತ್ತೆ ಹಿಂದಿರುಗುವವರು ಯಾವತ್ತೂ ಇದ್ದಾರೆ. ಉಮಾಭಾರತಿ, ಕಲ್ಯಾಣ ಸಿಂಗ್, ಜಸ್ವಂತ್ ಸಿಂಗ್ ಮೊದಲಾದವರ ಪ್ರಕರಣಗಳನ್ನು ನೆನಪಿಸಿಕೊಳ್ಳಬಹುದು. ಪಕ್ಷದೊಳಗೆ ಕಚ್ಚಾಟ ಶುರುವಾದರೆ ಆರೆಸ್ಸೆಸ್ ನಾಯಕರುಗಳು ಬರುತ್ತಾರೆ, ಬಂದು ಒಂದು ರೀತಿಯ ತೇಪೆ ಹಾಕುತ್ತಾರೆ. ನಿತೀನ್ ಗಡ್ಕರಿ ಪಕ್ಷದ ಅಧ್ಯಕ್ಷ ಪೀಠಕ್ಕೆ ಬಂದದ್ದೇ ಆರೆಸ್ಸೆಸ್ ಕೃಪೆಯಿಂದ : ಕರ್ನಾಟಕದಲ್ಲೂ ಈಗ ಅದೇ ಗೋಳು.

# ದುರುದ್ದೇಶದ ಬಾಲಿಶ ಅಕ್ರಮ

ಕೇಂದ್ರ ಚುನಾವಣಾ ಆಯೋಗವು ತನ್ನ ಹಕ್ಕುಗಳನ್ನು ಚಲಾಯಿಸಬೇಕಾದ್ದು, ವಸ್ತುನಿಷ್ಠವಾಗಿ ಚುನಾವಣೆಗಳನ್ನು ಆಯೋಜಿಸಲು ಎಂಬುದು ಸಾಮಾನ್ಯ ತಿಳಿವಳಿಕೆ. ಅನೇಕ ಬಾರಿ ಆಯೋಗದ ಕಾರ್ಯವೈಖರಿ ಮತ್ತು ಆದೇಶಗಳು ತಮಾಷೆಯ ಪ್ರಹಸನಗಳಂತೆ ರಂಜಿಸುತ್ತವೆ ಮತ್ತು ಕೆಲವೊಮ್ಮೆ ತೀರಾ ಬಾಲಿಶವಾದ, ಆದರೆ ಸ್ಪಷ್ಟ ದುರುದ್ದೇಶದಿಂದ ಕೂಡಿದ, ಪ್ರಶ್ನಾರ್ಹ ನಡವಳಿಕೆಗಳಾಗಿ ರೇಗಿಸುತ್ತವೆ. ನ್ಯಾಯಾಲಯಕ್ಕಿರುವ ಸ್ಥಾನ ಚುನಾವಣಾ ಆಯೋಗದ್ದು ಸಹ. ಆದ್ದರಿಂದ ಎರಡೂ ಸಂಸ್ಥೆಗಳು ಎಚ್ಚರದಿಂದ ನಡೆದುಕೊಳ್ಳಬೇಕೆಂಬ ನಿರೀಕ್ಷೆ ಇದೆ. ಆ ಸಂಸ್ಥೆಗಳದ್ದೇ ಅಂತಿಮ ತೀರ್ಮಾನಗಳಾಗುತ್ತವಾದ್ದರಿಂದ ವಿವೇಚನೆಯನ್ನು ವಿಪುಲವಾಗಿ ಬೆಳೆಸಿಕೊಳ್ಳಬೇಕಾದ್ದು ಆ ಎರಡೂ ಸಂಸ್ಥೆಗಳ ಜವಾಬ್ದಾರಿ. ಸರ್ವೋಚ್ಚ ನ್ಯಾಯಾಲಯದಲ್ಲಿ ಜನವರಿ ೧೬ರಂದು ಒಬ್ಬ ನ್ಯಾಯಮೂರ್ತಿ ಅಯೋಧ್ಯೆಯ ಮಸೀದಿಯನ್ನು ಭಗ್ನಗೊಳಿಸಿದ್ದು ಕೇವಲ ''ಒಂದು ಪ್ರಸಂಗ''ವೇ ವಿನಾ ಅದೇನೂ ಮಹತ್ವದ ಘಟನೆಯಲ್ಲ ಎಂದಿದ್ದಾರೆ. ಮಸೀದಿ ಉರುಳಿಸಿದವರು ಸಮಾಧಾನ ತಂದುಕೊಳ್ಳಬಹುದೇನೊ, ಆದರೆ ದೇಶವು ಅನುಭವಿಸಿದ ತಲ್ಲಣಗಳ ಪಟ್ಟಿ ಬಹಳ ದೀರ್ಘವಾಗಿದೆ. ಪಾರ್ಲಿಮೆಂಟಿನ ಮೇಲೆ ಬಾಂಬು ಒಗೆದದ್ದು ಸಹ ಕೇವಲ ಒಂದು ಪ್ರಸಂಗ ಎಂದುಬಿಟ್ಟರೆ ಮುಂದೇನು ? ಮಸೀದಿಯನ್ನು ಉರುಳಿಸಿದ್ದು ಮತ್ತು ಪಾರ್ಲಿಮೆಂಟಿನ ಮೇಲೆ ಬಾಂಬು ಎಸೆದಿದ್ದು ಕೇವಲ ಪ್ರಸಂಗಗಳಲ್ಲ, ಅವು ಘೋರ ಪಾತಕಗಳು. ಆ ಕ್ರಿಯೆಗಳ ಪರಿಣಾಮ ಭೀಕರವಾದ್ದು, ಸಮಾಜವನ್ನು ಕಲಕುವಂಥದು.

ಚುನಾವಣೆ ಬಂದಾಗಲೆಲ್ಲ ದಿನನಿತ್ಯದ ಕಾರ್ಯಕ್ರಮಗಳನ್ನು ಸ್ಥಗಿತಗೊಳಿಸಬೇಕೆಂಬ ಚುನಾವಣಾ ಆಯೋಗದ ಆದೇಶಗಳು ಪ್ರಜಾಪ್ರಭುತ್ವಕ್ಕೆ ಮಾರಕವಾದವು, ಪ್ರಜೆಗಳನ್ನು ಹೀಯಾಳಿಸುವಂಥವು. ಯಾವುದೋ ಪಕ್ಷವು ಎಂಥದೋ ಆಶ್ವಾಸನೆ ನೀಡಿಬಿಟ್ಟರೆ ಮತದಾರರೆಲ್ಲಾ ಮೂರ್ಖರಂತೆ ಮೋಡಿಗೊಳಗಾಗಿಬಿಡುತ್ತಾರೆಂಬ ಕಲ್ಪನೆಯ ಅವಾಸ್ತವವು ನಮ್ಮ ಗಣರಾಜ್ಯಕ್ಕೆ ೬೦ ವರ್ಷ ವಯಸ್ಸಾದರೂ ಗೋಚರಿಸದಿರುವುದು ಅಚ್ಚರಿ ತರುತ್ತದೆ. ತಿಂಗಳುಗಟ್ಟಲೆ ಚುನಾವಣಾ ಪ್ರಕ್ರಿಯೆ ಜಾರಿಯಲ್ಲಿದ್ದರೆ ಕಾರ್ಯಕ್ರಮಗಳನ್ನು ಸಂಪೂರ್ಣ ಸ್ಥಗಿತಗೊಳಿಸುವುದು ಎಂತಹ ಜಾಣತನವೋ ತಿಳಿಯುವುದಿಲ್ಲ. ರಸ್ತೆ ರಿಪೇರಿ ಮಾಡಕೂಡದು, ಮಾರುಕಟ್ಟೆಯಲ್ಲಿ ಬೆಲೆ ತಡೆಗಟ್ಟಲು ಸರ್ಕಾರ ಮಧ್ಯ ಪ್ರವೇಶ ಮಾಡಕೂಡದು, ಹೊಸ ಯೋಜನೆಗಳನ್ನು ಕೈಗೊಳ್ಳಬಾರದು, ಇತ್ಯಾದಿ ಋಣಾತ್ಮಕ ನಿರ್ಬಂಧಗಳು ಸರ್ವಥಾ ಸರಿಯಲ್ಲ. ನಮ್ಮ ದೇಶದ ಮತದಾರರ ಬುದ್ಧಿಮತ್ತೆಗೆ ಬೆಲೆ ಕಟ್ಟದಿರುವುದು ಅವರನ್ನು ಅಪಮಾನಗೊಳಿಸಿದಂತೆ. ಇಷ್ಟಾದ ಮೇಲೂ ಹಣ-ಹೆಂಡ ಇವುಗಳನ್ನು ಚುನಾವಣಾ ಆಯೋಗವು ಪ್ರಾಯೋಗಿಕವಾಗಿ ತಡೆಯುವುದು ಅಷ್ಟರಲ್ಲೇ ಇದೆ. ಹಣ ಪಡೆದವರೆಲ್ಲಾ ಋಣ ತೀರಿಸಲು ಹಣ ಕೊಟ್ಟವರಿಗೇ ಮತ ನೀಡಿದ್ದಾರೆಂಬುದಕ್ಕೆ ವಿಶ್ವಾಸಾರ್ಹ ಪುರಾವೆ ಸಹ ಇಲ್ಲ.

ಉತ್ತರ ಪ್ರದೇಶದಲ್ಲಿ ಈ ಬಾರಿ ಚುನಾವಣಾ ಆಯೋಗವು ವಿಧಿಸಿರುವ ಕ್ರಮಗಳು ಅನುಚಿತ ಮಾತ್ರವಲ್ಲ, ಅಪ್ರಯೋಜಕ ಕೂಡ. ಅದರ ಹಿಂದೆ ಇರಬಹುದಾದ ಉದ್ದೇಶವನ್ನು ನಗಣ್ಯವೆನ್ನಬಹುದಾಗಿದ್ದರೆ ಸುಮ್ಮನೆ ನಕ್ಕು ಕೈ ಚೆಲ್ಲಬಹುದಿತ್ತು. ಆದರೆ ಸಂದರ್ಭ ಹಾಗಿಲ್ಲ. ಮುಖ್ಯಮಂತ್ರಿ ಮಾಯಾವತಿಯವರ ನೀತಿಗಳು, ಕಾರ್ಯಶೈಲಿ, ಆಡಳಿತ ವೈಫಲ್ಯ, ಮುಂತಾಗಿ ಯಾವುದೇ ಟೀಕೆ ಇದ್ದರೂ ಅದನ್ನು ಚುನಾವಣಾ ಪ್ರಕ್ರಿಯೆಯ ಜೊತೆ ತಳಕುಹಾಕುವುದು ಸಂವಿಧಾನದ ನಿಟ್ಟಿನಲ್ಲಿ ಸ್ವೀಕಾರಾರ್ಹವಲ್ಲ. ಚಿದಂಬರಂ ಆಗಾಗ್ಗೆ ದೇಶದ ಆರ್ಥಿಕ ನೀತಿಯ ಸಮರ್ಥನೆಯಾಗಿ ಹೇಳುವುದೇನು ? ''ನಮಗೆ ಮತದಾರರು ಅಧಿಕಾರ ನೀಡಿದ್ದಾರೆ, ಈ ನೀತಿಗಳನ್ನನುಸರಿಸಲು ಪ್ರಜೆಗಳು ನಿರ್ದೇಶನ ನೀಡಿದ್ದಾರೆ; ನಿಮಗೆ ಅವು ಬೇಡವೆನಿಸಿದರೆ ಚುನಾವಣೆಯಲ್ಲಿ ಗೆದ್ದು ಬನ್ನಿ, ನಿಮಗೆ ಸರಿಯೆನಿಸಿದ್ದನ್ನು ಜಾರಿಗೆ ತನ್ನಿ.'' ಹೀಗೆನ್ನುವ ಚಿದಂಬರಂ ಮತ್ತು ಅವರ ಸಹೋದ್ಯೋಗಿ ಸಚಿವರು ಅಮೆರಿಕಾಕ್ಕೆ ದೇಶವನ್ನು ಮಾರುತ್ತಾರೆ, ಪೋಸ್ಕೋಗಾಗಿ ಭೂಮಿ ವಶಪಡಿಸಿಕೊಳ್ಳುತ್ತಾರೆ, ವಿರೋಧಿಸಿದವರನ್ನು ಸದೆಬಡಿಯುತ್ತಾರೆ, ನಕ್ಸಲೀಯರನ್ನು ಹೇಗೆ ಬೇಕಾದರೂ ಕೊಲ್ಲಬಹುದು ಎನ್ನುತ್ತಾರೆ. ಮಾಯಾವತಿಯವರು ಅಂಬೇಡ್ಕರ್ ಉದ್ಯಾನ ನಿರ್ಮಿಸಿದರೆ, ಆನೆಗಳನ್ನು ನಿಲ್ಲಿಸಿದರೆ, ಇದೇ ವಾದ ಏಕೆ ಅಪಥ್ಯವಾಗುತ್ತದೆ ? ರಾಜಕೀಯವಾಗಿ ಅವರ ಪಕ್ಷವನ್ನೆದುರಿಸುವುದರ ಬದಲು ಅವರಿಗೆ ಕಿರುಕುಳ ಕೊಡುವುದು ಖಂಡನೀಯ.

ಆನೆಗಳಿಗೆ, ಮಾಯಾವತಿ ಪುತ್ಥಳಿಗಳಿಗೆ ಮುಸುಕು ಹೊದಿಸಲು ಕೋಟಿಗಟ್ಟಲೆ ಹಣವನ್ನು ವೃಥಾ ಹಾಳುಮಾಡುವುದು ಯಾವ ಪುರುಷಾರ್ಥಕ್ಕೆ ? ಉತ್ತರ ಪ್ರದೇಶದಲ್ಲೆಲ್ಲೂ ಜೀವಂತ ಆನೆಗಳಿಲ್ಲವೇನು ? ಅವಕ್ಕೂ ಮುಸುಕು ಹಾಕಿಸಬೇಕೆ ? ಹಸ್ತ, ಬೈಸಿಕಲ್ಲು, ಲಾಟೀನು, ಕುಡುಗೋಲು, ಗುಡಿಸಲು, ಟೆಲಿಫೋನು, ಮುಂತಾದ ನೂರಾರು ಬೇರೆ ಚುನಾವಣಾ ಚಿಹ್ನೆಗಳಿವೆ. ಅವೆಲ್ಲಕ್ಕೂ ಗವಸು ಹೊದಿಸುತ್ತಾರೇನು ? ಅವಾವುದಕ್ಕೂ ಇಲ್ಲದ ಶಿಕ್ಷೆ ಆನೆಗೆ ಮಾತ್ರ ಏಕೆ ? ಇದು ಚುನಾವಣಾ ಸಂಹಿತೆಗೆ ಗೌರವ ತರುವಂಥದಲ್ಲ. ಮಾಯಾವತಿಯವರ ಮೇಲಿನ ಕೋಪವನ್ನು ಹತಾಶೆಯಿಂದ ಈ ರೀತಿ ಪ್ರಕಟಿಸುವುದು ಪ್ರಜಾಪ್ರಭುತ್ವದ ವಂಚನೆ. ಈ ಕ್ರಮದಿಂದ ''ಸಮತಟ್ಟಾದ ನೆಲೆ'' ನಿರ್ಮಾಣವಾಗುತ್ತದೆಂದು ಚುನಾವಣಾ ಆಯೋಗ ಹೇಳಿದೆ. ಅದಕ್ಕಿಂತಲೂ ದೊಡ್ಡ ಸುಳ್ಳು ಬೇರೊಂದಿಲ್ಲ. ''ಹಸ್ತ''ಕ್ಕೆ ಇಲ್ಲದ ಶಿಕ್ಷೆ ''ಆನೆ''ಗೆ ಎಂದಾದಾಗ ಸಮತಟ್ಟಿಗೆ ಅರ್ಥವೇನಿದೆ ? ಆಯೋಗದ ದುಷ್ಟ ತೀರ್ಮಾನವನ್ನು ವಿರೋಧಿಸುವ ಬದಲು ಅನೇಕ ರಾಜಕೀಯ ಪಕ್ಷಗಳು ಅವನ್ನು ಸ್ವಾಗತಿಸಿವೆ. ಮಾಯಾವತಿಯವರೆಂದರೆ ಇವರ ಜಂಘಾಬಲ ಉಡುಗಿಹೋಗುತ್ತದೆಂಬುದರ ಸೂಚನೆ ಇದು, ಅಷ್ಟೇ. ಆಕೆಯನ್ನು ವಿರೋಧಿಸುವವರು ಕೂಡ ಆಯೋಗದ ಪ್ರಶ್ನಾರ್ಹ ಆದೇಶಗಳನ್ನು ವಿರೋಧಿಸಬೇಕಿತ್ತು. ಆದರೆ ಸೀತಾರಾಂ ಯೆಚೂರಿ ಸಹ ಆಯೋಗದ ಬಾಲಿಶ ಆದೇಶದೊಂದಿಗೆ ಸಹಮತ ವ್ಯಕ್ತಪಡಿಸಿದ್ದಾರೆಂದರೆ ಏನೆನ್ನಬೇಕು ?

ಚುನಾವಣೆಯು ಪ್ರಜಾಪ್ರಭುತ್ವದ ಆಚರಣೆಗಾಗಿ ಇರುವ ಒಂದು ಅಂಗ, ಅದೇ ಸರ್ವಸ್ವವಲ್ಲ. ಚುನಾವಣೆ ನಡೆಸುವಾಗ ದುರುದ್ದೇಶದಿಂದ ಬಾಲಿಶವಾದ ಆದೇಶಗಳನ್ನು ನೀಡುವತ್ತ ಆಯೋಗ ಸಾಗಿದರೆ ಅದನ್ನು ಪ್ರಶ್ನಿಸುವುದು ಕೂಡ ಪ್ರಜಾಪ್ರಭುತ್ವದ ಒಂದು ಭಾಗವೇ ಆಗಿರುತ್ತದೆ.

[signature]


ತಿಂಗಳ ಪತ್ರಿಕೆ

**ಹೊಸತು**

ನೆಮ್ಮದಿಯ ನಾಳೆ ನಮ್ಮದು



ನವಕರ್ನಾಟಕ ಪ್ರಕಾಶನ

**ಸಮಾಲೋಚಕ ಮಂಡಲಿ**

ಟಿ. ಆರ್. ಅನಂತರಾಮು
ಸಿ. ಆರ್. ಚಂದ್ರಶೇಖರ್
ವಿ. ಚಂದ್ರಶೇಖರ ನಂಗಲಿ
ಕೆ. ಎಲ್. ಗೋಪಾಲಕೃಷ್ಣ ರಾವ್
ಎಚ್. ಎಸ್. ಗೋಪಾಲ ರಾವ್
ಜಿ. ಕೆ. ಗೋವಿಂದ ರಾವ್
ಮುರಳೀಧರ್
ಎಂ. ಸಿ. ನರಸಿಂಹನ್
ನೇಮಿಚಂದ್ರ
ಪ್ರಕಾಶ್ ಸಿ. ರಾವ್
ಬರಗೂರು ರಾಮಚಂದ್ರಪ್ಪ
ಕೆ. ಮರುಳಸಿದ್ದಪ್ಪ
ಮಹಾಬಲೇಶ್ವರ ರಾವ್
ವಿಜಯಾ
ಬಿ. ವಿ. ವೀರಭದ್ರಪ್ಪ
ಟಿ. ವೆಂಕಟೇಶ ಮೂರ್ತಿ
ಯು. ಎಸ್. ಶ್ರೀನಿವಾಸನ್
ಸಿದ್ದನಗೌಡ ಪಾಟೀಲ
ಎಲ್. ಹನುಮಂತಯ್ಯ

**ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ರೂ. ೧೨/- |
| ವಾರ್ಷಿಕ ಚಂದಾ | ರೂ. ೧೫೦/- |
| ಮೂರು ವರ್ಷಕ್ಕೆ | ರೂ. ೩೫೦/- |

**ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು - ೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
✆ : ೦೮೨೪-೨೪೪೧೦೧೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
✆ : ೦೮೨೧-೨೪೨೪೦೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
✆ : ೦೮೪೭೨-೨೨೪೩೦೨

*ಈ ತಿಂಗಳು (೩ನೇ ಪುಟದಿಂದ)*

ಕೆಲವರು ''ಅದೇಕೋ ನಿಮ್ಮ ಭೈರಪ್ಪ ಫ್ಯಾಸಿಸ್ಟ್ ಸ್ವಭಾವ ಹೊಂದಿದ್ದಾರೆ'' ಎಂದು ಅವರ ಬಗ್ಗೆ ಹೇಳುತ್ತಿದ್ದಿದುಂಟು. ಅವರ ಅತಿನೂತನ ಸಂಶೋಧನೆಯು ಭಾರತದ ಸ್ವಾತಂತ್ರ್ಯ ಗಳಿಕೆಗೆ ಸಂಬಂಧಿಸಿದ್ದು. ದೊಡ್ಡ ನೇತಾರರಾದ ನೇತಾಜಿ ಸುಭಾಷ್ ಚಂದ್ರ ಬೋಸರ ಹೆಸರನ್ನು ತೆಗೆದುಕೊಂಡರೆ ಅವರ ವಿರುದ್ಧ ಯಾರೂ ಸೊಲ್ಲೆತ್ತುವುದಿಲ್ಲವೆಂಬ ಖಾತ್ರಿಯಿಂದ ಭೈರಪ್ಪನವರು ಯಥಾಪ್ರಕಾರ ಚರಿತ್ರೆಯ ವಿಕೃತಿಗೆ ಮನಸೋತಿದ್ದಾರೆ. ಬೋಸ್ ಅವರ ಖ್ಯಾತಿ ಮತ್ತು ಖ್ಯಾತಿ ಅಪ್ರತಿಮವಾದ್ದು. ಎರಡನೆ ಪ್ರಪಂಚ ಯುದ್ಧದ ಸಮಯದಲ್ಲಿ ಜಪಾನಿನ ಟೋಕಿಯೊ ವಿಶ್ವವಿದ್ಯಾನಿಲಯದಲ್ಲಿ ವಿದ್ಯಾರ್ಥಿ-ಅಧ್ಯಾಪಕರನ್ನು ಉದ್ದೇಶಿಸಿ ಮಾತನಾಡುತ್ತಾ ಯಾವ ಮುಲಾಜೂ ಇಲ್ಲದೆ ಫ್ಯಾಸಿಸ್ಟ್ ದುರಾಲೋಚನೆಯನ್ನು ಖಂಡಿಸಿದ್ದವರು ಅವರು. ಅವರ ಕಾಣಿಕೆಯ ಮಹತ್ವವನ್ನು ಪ್ರಶ್ನಿಸುವವರು ವಿರಳ. ಅವರಿಗೆ ಎರಡು ಬಗೆದ ಗಾಂಧೀಜಿ ಸಹ ಬೋಸರ ಬಗ್ಗೆ ಅಪಾರ ಗೌರವ ಇರಿಸಿಕೊಂಡಿದ್ದುದಾಗಿ ಹೇಳಿದ್ದಾರೆ. ಬೋಸ್ ಉಗ್ರ ಸ್ವಾತಂತ್ರ್ಯಯೋಧರು, ಆದರೆ ಭಾರತದ ೧೯೪೭ರ ಸ್ವಾತಂತ್ರ್ಯವು ಅವರಿಂದಾಗಿಯೇ ಫಲಿಸಿತೆಂದು ಹೇಳಿದರೆ ಅದು ಅತಿಶಯೋಕ್ತಿಯಲ್ಲ, ಅಸತ್ಯವೂ ಆಗುತ್ತದೆ. ಅವರು ಕಟ್ಟಿದ ಇಂಡಿಯನ್ ನ್ಯಾಷನಲ್ ಆರ್ಮಿಯ ದಿಟ್ಟತನವನ್ನು ಮೆಚ್ಚುತ್ತಲೇ ಬೋಸರು ಬ್ರಿಟಿಷರನ್ನು ಕಂಬಿಕೀಳುವಂತೆ ಮಾಡಿದರೆಂಬ ಭೈರಪ್ಪನವರ ಸಂ-ಶೋಧನೆಯನ್ನು ಪ್ರಶ್ನಿಸಬೇಕಾಗುತ್ತದೆ. ಬೋಸರಿಗೆ ಬೆದರಿ ಬ್ರಿಟಿಷರು ಭಾರತದಿಂದ ತೊಲಗಬೇಕಾಯಿತೆಂದು ಯಾವನೋ ಬ್ರಿಟಿಷ್ ಸೈನ್ಯಾಧಿಕಾರಿ ಹೇಳಿದ್ದನೆಂಬುದು ಭೈರಪ್ಪನವರು ನೀಡಿರುವ ಪುರಾವೆ. ಗಾಂಧಿ, ಭಗತ್ ಸಿಂಗ್, ರಾಯಲ್ ಇಂಡಿಯನ್ ನೇವಿಯ ನೌಕಾದಳದ ಸೈನಿಕರು, ರೈತ-ಕಾರ್ಮಿಕರು, ಮಹಿಳೆಯರು, ವಿದ್ಯಾರ್ಥಿಗಳು, ಕಮ್ಯುನಿಸ್ಟರು, ಯಾರೂ ಲೆಕ್ಕಕ್ಕಿಲ್ಲ. ಭೈರಪ್ಪನವರ ಪ್ರಕಾರ ನೇತಾಜಿ ಒಬ್ಬರೇ ಸ್ವಾತಂತ್ರ್ಯ ದಕ್ಕಿಸಿಕೊಟ್ಟರು. ಸ್ವತಃ ನೇತಾಜಿ ಅಂತಹ ಅಪ್ರಬುದ್ಧ ಹೇಳಿಕೆಯನ್ನು ಒಪ್ಪುತ್ತಿರಲಿಲ್ಲವೆಂಬುದು ಶತಸ್ಸಿದ್ಧ. ಭಗತ್ ಸಿಂಗ್‌ನನ್ನು ನೇಣುಗಂಭಕ್ಕೇರಿಸಿದಾಗ, ಅದಕ್ಕೆ ಮುನ್ನ ಜತೀನ್ ದಾಸ್ ಜೈಲಿನಲ್ಲಿ ಅಸುನೀಗಿದಾಗ ಬೋಸ್ ಹೇಗೆ ಪ್ರತಿಕ್ರಿಯಿಸಿ ಜನರನ್ನು ಸಂಘಟಿಸಿದರೆಂಬುದು ಬಹುಶಃ ಭೈರಪ್ಪನವರು ತಿಳಿದಿಲ್ಲ ಅಥವಾ ತಿಳಿಯಲು ಇಷ್ಟಪಡುವುದಿಲ್ಲ. ಏನೇ ಇರಲಿ, ಇತಿಹಾಸದ ನಿರ್ಮಾಪಕರು ಅವತಾರ ಪುರುಷರಲ್ಲ; ಇತಿಹಾಸದ ಗತಿಯನ್ನು ಜನತೆ ನಿರ್ಧರಿಸುತ್ತದೆ. ಅದೆಲ್ಲಾ ಸರಿ, ಭೈರಪ್ಪನವರು ಈಗೇಕೆ ಬೋಸರ ಪರವಾಗಿ ಸಂ-ಶೋಧನೆ ಆರಂಭಿಸಿದ್ದಾರೆ? ಕಾಂಗ್ರೆಸ್, ಕಮ್ಯುನಿಸ್ಟ್ ಪಕ್ಷಗಳನ್ನು ತೆಗಳಲು ಮತ್ತು ನೆಹರು ಮುಂತಾದವರನ್ನು ಅಪಮೌಲ್ಯಗೊಳಿಸಲು. ಬುದ್ಧನು ಜನವಿರೋಧಿ ತತ್ವ ಬೋಧಿಸಿದ್ದನೆಂಬ ಅಮೋಘ ಸಂಶೋಧನೆ ನಡೆಸಿದ್ದರು ಮಾನ್ಯ ಭೈರಪ್ಪನವರು; ಸರಸ್ವತಿ ಸಮ್ಮಾನ ದೊರೆತನಂತರದ ಈಗಿನ ಬೋಸ್ ಬಗೆಗಿನ ಸಂಶೋಧನೆಯನ್ನು ಗಮನಿಸಿ ಭಾರತೀಯ ಇತಿಹಾಸ ಸಂಶೋಧನಾ ಮಂಡಲಿಯು ಶ್ರೀಯುತರಿಗೆ ಇನ್ನೆಂತಹ ಪುರಸ್ಕಾರ ನೀಡುತ್ತದೋ ಕಾದು ನೋಡಬೇಕು.

* * *

ಇತ್ತೀಚಿನ ಒಂದು ಸುದ್ದಿ ಹೀಗಿದೆ : ಕೊಲ್ಲಿ ರಾಷ್ಟ್ರಗಳಲ್ಲಿ ಒಂದಾದ ಯುನೈಟೆಡ್ ಆರಬ್ ಎಮಿರೇಟ್ಸ್‌ಗೆ ಅಮೆರಿಕಾ ೪.೩೮ ಬಿಲಿಯನ್ ಡಾಲರು ಬೆಲೆಯ ಶಸ್ತ್ರಾಸ್ತ್ರ ಸರಬರಾಜು ಮಾಡಲಿದೆ. ರೂಪಾಯಿಗಳಲ್ಲಿ ಅದು ಅಸಂಖ್ಯ ಕೋಟಿಗಳ ಮೊತ್ತ. ಅಮೆರಿಕಾದ ಆರ್ಥಿಕ ಹಿಂಜರಿತಕ್ಕೆ ಸ್ವಲ್ಪ ಉಸಿರು ತುಂಬುವ ವ್ಯಾಪಾರ ಇದು. ಆದರೆ ಈ ಚಿಕ್ಕ ದೇಶಕ್ಕೆ ಅಷ್ಟು ಶಸ್ತ್ರಾಸ್ತ್ರ ಏಕೆ ಬೇಕು, ಯಾರಿಂದ ಆ ದೇಶಕ್ಕೆ ಭಯ ? ಇರಾನಿನ ಮೇಲೆ ನಾಳೆ ಅಮೆರಿಕಾ ಧಾಳಿ ನಡೆಸಲು ಇದು ತಯಾರಿ. ಎರಡು ಉದ್ದೇಶಗಳ ಸಾಧನೆ ಒಂದೇ ವ್ಯವಹಾರದಿಂದ ದಕ್ಕಿದಂತಾಯಿತು. ಅಮೆರಿಕಾದ ರಕ್ಷಣಾ ಇಲಾಖೆಯ ಕೇಂದ್ರವಾದ ಪೆಂಟಗನ್‌ನ ಜಾರ್ಜ್ ಲಿಟಲ್ ಪ್ರಕಾರ ಈ ಶಸ್ತ್ರಾಸ್ತ್ರಗಳು ''ಪ್ರಾದೇಶಿಕ ಸುಭದ್ರತೆಗೆ ಅಗತ್ಯ.'' ಅಭದ್ರತೆಯೇ ಇಲ್ಲದೆಡೆ ಅಮೆರಿಕಾ ಸುಭದ್ರತೆಯ ಮಾತನಾಡುತ್ತಿದೆ. ಅಂದರೆ, ಅಭದ್ರತೆ ಸೃಷ್ಟಿಸಲು ಏರ್ಪಾಟು ನಡೆದಿದೆ. ಆದರೆ ಎಮಿರೇಟ್ಸ್ ಇದಕ್ಕೇಕೆ ಮಣಿಯಬೇಕು ? ''ನಿನ್ನ ಹಣ ಮತ್ತು ಪೆಟ್ರೋಲ್ ನಮಗೆ ಬೇಕು; ನೀನು ಶಸ್ತ್ರಾಸ್ತ್ರ ಕೊಳ್ಳಬೇಕು, ಇಲ್ಲದಿದ್ದರೆ ಇರಾನ್‌ಗೆ ಮೊದಲು ನಿನ್ನ ಮೇಲೆಯೇ ಧಾಳಿ ನಡೆದೀತು, ಜೋಕೆ '', ಎಂಬುದು ಅಮೆರಿಕಾದ ಎಚ್ಚರಿಕೆಯ ಮಾತು. ಭಯದಿಂದ ನಡುಗಿ ಅಮೆರಿಕಾದ ಆಜ್ಞಾನುವರ್ತಿಯಾಗಿ ಎಮಿರೇಟ್ಸ್ ನಡೆದುಕೊಳ್ಳುತ್ತದೆ. ಒಟ್ಟಿನಲ್ಲಿ, ಇರಾಕಿನಲ್ಲಿ ೧೦ ಲಕ್ಷ ಜನರನ್ನು ಕೊಂದಿರುವ ಅಮೆರಿಕಾ ಈಗ ಇರಾನಿನ ಜನರನ್ನು ಕೊಲ್ಲಲು ಸಿದ್ಧತೆ ನಡೆಸಿದೆ. ಅಂತಹ ದೇಶಕ್ಕೆ ಅಚ್ಚುಮೆಚ್ಚಾಗಿರುವ ನಮ್ಮ ಪ್ರಧಾನಿ, ದೇಶವನ್ನು ಎತ್ತ ಕೊಂಡೊಯ್ಯುತ್ತಿದ್ದಾರೆಂದು ಊಹಿಸಿ ಸ್ವಲ್ಪ ನಡುಕ ಬರಿಸಿಕೊಂಡು, ಆಮೇಲೆ ಇದಾಗದು ಎಂದು ಸ್ಥೈರ್ಯದಿಂದ ಹೇಳಬೇಕಾದ ಸಮಯ ಇದು.

* * *

ಆಯಾ ದೇಶಗಳ ಜನಸಂಖ್ಯೆಯ ಪ್ರಮಾಣದ ದೃಷ್ಟಿಯಿಂದ ನೋಡಿದಾಗ ಅಮೆರಿಕಾದ ಕಾರಾಗೃಹಗಳಲ್ಲಿರುವವರ ಶೇಕಡಾವಾರು ಪ್ರಮಾಣವು ಬೇರಾವುದೇ ದೇಶಕ್ಕಿಂತಲೂ ಹೆಚ್ಚಿನದು. ಇದೇನಿದು, ಅಷ್ಟು ಸಂಪದ್ಭರಿತವಾದ ದೇಶ, ಎಷ್ಟೋ ದೇಶಗಳನ್ನು ಕೊಳ್ಳೆಹೊಡೆಯುವ ದೇಶ, ಮಾನವ ಹಕ್ಕುಗಳ ಬಗ್ಗೆ ಸದಾ ಮಾತನಾಡುವ ದೇಶ, ಅಲ್ಲೇಕೆ ಹೀಗೆ ? ಟೆರಿ ಈಗಲ್‌ಟನ್ ಬರೆದಿರುವ ''ಮಾರ್ಕ್ಸ್ ಏಕೆ ಸರಿ ಗೊತ್ತೆ?'' ಎಂಬ ಈಚಿನ ಪುಸ್ತಕದಲ್ಲಿ ಅದಕ್ಕೆ ಉತ್ತರ ಸೂಚಿಸಿದ್ದಾನೆ :

''ಬಂಡವಾಳಶಾಹಿ ವ್ಯವಸ್ಥೆಯನ್ನು ಕಿತ್ತೊಗೆದಾದ ಮೇಲೆ ಆರ್ಥಿಕತೆಯು ಹೇಗಿರುತ್ತದೆ ಎಂಬುದರ ಬಗ್ಗೆ ಸಮಾಜವಾದಿಗಳು ತಮ್ಮ ವಾದಗಳನ್ನು ಮುಂದುವರಿಸುತ್ತಲೇ ಇರುತ್ತಾರೆ. ಸದ್ಯದಲ್ಲಿ ಸಂಪೂರ್ಣವಾಗಿ ದೋಷರಹಿತವಾದ ಮಾದರಿಯೊಂದು ಲಭ್ಯವಿಲ್ಲ. ಈ ಅಪರಿಪೂರ್ಣತೆಯನ್ನು ಬಂಡವಾಳಶಾಹಿ ಆರ್ಥಿಕತೆಯೊಡನೆ ಹೋಲಿಸಿದರೆ ಏನನ್ನಿಸೀತು ? ಪಾಪ, ಬಂಡವಾಳಶಾಹಿಯಲ್ಲಿ ಕಪ್ಪುಚುಕ್ಕೆಯೇ ಇಲ್ಲ, ಅಷ್ಟು ಚೆನ್ನ ಅದರ ಕಾರ್ಯವೈಖರಿ : ಅಲ್ಲಿ ಬಡತನದ ಹೆಸರಿಲ್ಲ, ದುರ್ಬಳಕೆಯಂತೂ ಇಲ್ಲವೇ ಇಲ್ಲ; ಹೀಗಿರುವಾಗ ಆರ್ಥಿಕ ಏರುಪೇರುಗಳಿಗೆ ಇನ್ನೆಲ್ಲಿಯ ಅವಕಾಶ. ಏನೋ ಕೆಲವೇಳೆ ಆ ವ್ಯವಸ್ಥೆಯಡಿ ನಿರುದ್ಯೋಗದ ದುಬಾರಿ ಪ್ರಮಾಣ ಕಾಣಬರಬಹುದು, ಆದರೆ ನೋಡಿ, ವಿಶ್ವದ ಬಂಡವಾಳಶಾಹಿ ಅಗ್ರೇಸರ ದೇಶವು ಈ ನ್ಯೂನತೆಗೆ ಅಸಾಧಾರಣ ಬುದ್ಧಿವಂತಿಕೆಯ ಪರಿಹಾರವನ್ನು ಕಂಡುಕೊಂಡಿದೆ. ಅಮೆರಿಕಾ ಸಂಯುಕ್ತ ಸಂಸ್ಥಾನದಲ್ಲಿ ಇಂದು ಹತ್ತು ಲಕ್ಷಕ್ಕೂ ಹೆಚ್ಚು ಮಂದಿ ಕೆಲಸವನ್ನು ಅರಸುತ್ತಿರಬೇಕಾಗಿತ್ತು, ಅವರು ಕಾರಾಗೃಹಗಳಿಗೆ ತಳ್ಳಲ್ಪಟ್ಟಿರದಿದ್ದರೆ.''

ಹೊರಗೆ ಉದ್ಯೋಗವಿಲ್ಲ, ಕಾರಾಗೃಹದಲ್ಲಿ ಕೆಲಸ ಮಾಡಿಸಿಕೊಂಡರೆ ಖಾಸಗಿ ಜೈಲು-ಮಾಲೀಕನಿಗೆ ಲಾಭವೋ ಲಾಭ ! ಅದು 'ಶ್ಲಾಘ್ಯ' ಬಂಡವಾಳಶಾಹಿ !

* * *

ನಮ್ಮ ಶ್ರೀಮಂತ ಕ್ರಿಕೆಟ್ ಧಾಂಡಿಗರು ಆಸ್ಟ್ರೇಲಿಯಾದ ಮಣ್ಣಿನ ರುಚಿಯನ್ನು ಸವಿಯಲು ಉತ್ಸುಕರಾಗಿ ಮಣ್ಣು ಮುಕ್ಕುತ್ತಾ ಬೇರೆಲ್ಲದನ್ನೂ ಮರೆತಿದ್ದಾರೆ. ನಡೆಯಲಿ, ಅವರ ಆರೋಗ್ಯಕ್ಕೆ ಆ ಮಣ್ಣು ಬಹಳ ಪ್ರಭಾವಿ ಮದ್ದಿರಬೇಕು. ನಲವತ್ತು-ಐವತ್ತು ವಯಸ್ಸಿನ ''ಯುವಕರು'' ತುಂಬಿರುವ ತಂಡವು ಒದೆತ ತಿಂದರೆ ಅಚ್ಚರಿಯೂ ಇಲ್ಲ, ಅಸಮಾಧಾನವೂ ಇಲ್ಲ. ಇವರೆಲ್ಲಾ ಎಷ್ಟು ಚುರುಕೆಂದರೆ ನಿಧಾನ ಆಟದ ಕಾರಣದಿಂದಾಗಿ ಶೇಕಡ ೫೦ರಷ್ಟು ಕೂಲಿಯ ಹಣ ಕಳೆದುಕೊಂಡಿದ್ದಾರೆ. ಆದರೂ ಈ ೩೫ ದಾಟಿದ ''ಯುವಕ''ರನ್ನು ತಂಡದಿಂದ ಹೊರಕ್ಕೆ ದಬ್ಬಿ ೧೫ ವರ್ಷಗಳಿಂದ ಕಾಯುತ್ತಾ ಕುಳಿತಿರುವ ನಿಜ ಯುವಕರನ್ನು ತಂಡಕ್ಕೆ ಸೇರಿಸಿಕೊಳ್ಳದ ಹಟಮಾರಿ ನಮ್ಮ ಕ್ರಿಕೆಟ್ ಮಂಡಲಿ. ತೆಂಡುಲ್ಕರ್ ನೂರು ಶತಕಗಳ ಧೀರನಾಗಬೇಕು, ರಾಹುಲ ದ್ರಾವಿಡ ಅದೆಷ್ಟೋ ಬಾರಿ ಚೆಂಡನ್ನು ಕ್ಯಾಚಿಸಿ ದಾಖಲೆ ಸ್ಥಾಪಿಸಬೇಕು, ಲಕ್ಷ್ಮಣನು ಊರ್ಮಿಳೆಯ ಯೋಚನೆ ಇಲ್ಲದೆ ಅಣ್ಣ ಸಚಿನ್ ಜೊತೆ ಉಳಿಯಬೇಕು, ಕ್ರಿಕೆಟ್ ಮಂಡಲಿ ಅದೆಷ್ಟೋ ಕೋಟಿಗಳನ್ನು ತುಂಬಿಕೊಳ್ಳಬೇಕು ಮತ್ತು ಕ್ರೀಡಾ ವರದಿಗಾರರು ಇನ್ನೂ ಸಾವಿರ ಪುಟಗಳ ಕ್ರಿಕೆಟ್ ರದ್ದಿಯನ್ನು ಪತ್ರಿಕೆಗಳ ಪುಟಗಳಿಗೆ ತುಂಬಬೇಕು – ಆವರೆಗೆ ಇಂದಿನ ಯುವಕರು ಚಾತಕ ಪಕ್ಷಿಗಳಂತೆ ಮುಗಿಲು ನೋಡುತ್ತಿರಬೇಕು. ನೀರಿನ ಹನಿ ಚಾತಕದ ನಾಲಿಗೆಗೆ ಬೀಳುವ ಮೊದಲೇ ಆ ಯುವಕರು ಮುದುಕರಾಗಿರುತ್ತಾರೆ ! ಅವರ ಜನ್ಮದಲ್ಲಿ ಅವರು ತಂಡದಲ್ಲಿ ಸ್ಥಾನ ಪಡೆಯುವುದಿಲ್ಲ. ಕ್ರೀಡೆಯ ವರ್ಧನೆಗೆ ಇದಲ್ಲವೆ ಮಾದರಿ. ''ಹಿರಿಯ'' ಆಟಗಾರರು ಕೂಡ ಈ ೪೦ ವಯಸ್ಸಿನ ''ಯುವಕರನ್ನು'' ಕುರಿತು ಗೆಟ್ ಔಟ್ ಎನ್ನುವುದಿಲ್ಲ. ಸೌಹಾರ್ದತೆ ಎಂದರೆ ಅದು !

* * *

ಉಪವಾಸ ವನವಾಸಗಳ ಬೆದರಿಕೆಗಳ ನಡುವೆ ಸದಾ ಹಲ್ಲು ಕಿರಿಯುತ್ತಿರುವ ಮುಖ್ಯಮಂತ್ರಿ ಸದಾನಂದ ಗೌಡರ 'ಯಶಸ್ವಿ' ಮಧ್ಯ ಪ್ರವೇಶದಿಂದ ಉಡುಪಿಯಲ್ಲಿ ಪರ್ಯಾಯ ಪೀಠಾರೋಹಣ ಸಮಾರಂಭ ಮುಗಿಯಿತು. ವಿಜೃಂಭಣೆಗೆ ಕೊರತೆ ಏನಿರಲಿಲ್ಲ. ದರ್ಬಾರಿನಲ್ಲಿ ಎರಡು ಮಠಾಧೀಶರು ಗೈರು. ಪ್ರತಿಸಾರಿ ಪರ್ಯಾಯವಾಗುವಾಗಲೂ ಈ ಅಷ್ಟ ಮಠಗಳ ಬಡಿದಾಟ ಇದ್ದೇ ಇರುತ್ತೆ ಏನಾದರೂ ಕಾರಣದಿಂದ. ಇವರೆಲ್ಲ ಒಂದೇ ಸಿದ್ಧಾಂತಕ್ಕೆ - ಮಧ್ವಾಚಾರ್ಯರ ದ್ವೈತ ಸಿದ್ಧಾಂತಕ್ಕೆ ಬದ್ಧರಾದವರೆ. ಆದರೂ ಒಬ್ಬರನ್ನು ಕಂಡರೆ ಇನ್ನೊಬ್ಬರಿಗಾಗದು (ಅಷ್ಟ ಮಠಗಳ ಜೊತೆಗೆ ಇನ್ನೆಷ್ಟೊ ಬೇರೆ ಮಠಗಳಿವೆ). ಈ ಇಡೀ ವಿವಾದ ಸೃಷ್ಟಿ ಇಂದು ನಿನ್ನೆಯದಲ್ಲ, ನೂರಾರು ವರ್ಷಗಳಿಂದ ಬಂದದ್ದು. ಹೇಗೋ ಮಾಡಿ ಎರಡೆರಡು ವರ್ಷ ಶ್ರೀಕೃಷ್ಣನ ಪೂಜೆಗೆ ಅಷ್ಟ ಮಠಗಳನ್ನು ಒಪ್ಪಿಸಿದವರು ಜಾಣರು. ಸರ್ವ ಕೃಷ್ಣಾರ್ಪಣಮಸ್ತು ಎಂದುಕೊಂಡೇ ಜನರ ಸುಲಿಗೆ. ಈ ಎರಡು ವರ್ಷಗಳಲ್ಲಿ ಗಳಿಸಿದ್ದೇ ಬಂಡವಾಳ. ಅಂದಹಾಗೆ ಈ ಸಲ ಪೀಠ ಏರಿರುವವರು ಅತ್ಯಂತ ಕಿರಿಯ ವಯಸ್ಸಿನ ಸನ್ಯಾಸಿ. ಹಿರಿಯರಾದ ಪೇಜಾವರರ ಕಿಲಾಡಿತನ ಕಲಿಯಲು ಇನ್ನೂ ಸಾಕಷ್ಟು ಸಮಯವಿದೆ. ಮನಸ್ಸು ಮಾಡಿದ್ದರೆ ಈತ ಸಮಸ್ಯೆ ಬಗೆಹರಿಸಬಹುದಾಗಿತ್ತು. ರಾಜಕಾರಣ, ಕಿತಾಪತಿಗಳಿಗೆ ಹೆಸರಾಗಿರುವ ಪೇಜಾವರರು ಸನಾತನ ಧರ್ಮಶಾಸ್ತ್ರದ ಹೆಸರಿನಲ್ಲಿ ನುಣುಚಿಕೊಳ್ಳುತ್ತಾರೆ. ಈಚೆಗೆ ಮಡೆಸ್ನಾನ ಪದ್ಧತಿ ಕುರಿತ ಮುಖಾಮುಖಿ ಸಂದರ್ಭದಲ್ಲಿ ಮಾತನಾಡಿದ ಅವರು ಸಂವಿಧಾನಕ್ಕಿಂತ ಮೇಲಿರುವುದು ಧರ್ಮಶಾಸ್ತ್ರ ಎಂದು ಅಪ್ಪಣೆ ಕೊಡಿಸಿದರು. ಇಪ್ಪತ್ತೊಂದನೆ ಶತಮಾನದಲ್ಲೂ ವಿದೇಶೀ ಪ್ರಯಾಣ ನಿಷಿದ್ಧವೆ ? ಅಷ್ಟ ಮಠದಲ್ಲಿ ಒಬ್ಬರು ವಿದೇಶಕ್ಕೆ ಹೋಗಿಬಂದದ್ದೇ ಮಹಾಪರಾಧ ! ಇಂಥ ಧರ್ಮಶಾಸ್ತ್ರಕ್ಕೆ ಜೈ ಅನ್ನಬೇಕೆ ?




### ಕನಕನ ಕಾಲ

ಮೇ ೨೦೧೧ರ 'ಹೊಸತು' ಸಂಚಿಕೆಯಲ್ಲಿ ಶ್ರೀ ಗಂಗಾಧರ ಕೊಡ್ಲಿ 'ಸಂತಕವಿ ಕನಕದಾಸ' ಎಂಬ ಲೇಖನ ಬರೆದಿದ್ದಾರೆ. ಅದರಲ್ಲಿ ಅವರು "ಇತಿಹಾಸದ ಪುಟಗಳನ್ನು ತಿರುವಿದಾಗ ಕನಕದಾಸರ ಬದುಕಿನ ಕಾಲಾವಧಿ ೧೪೯೧ರಿಂದ ೧೫೮೦ ಎಂದು ನಿಖರವಾಗಿ ಗುರುತಿಸಲಾಗಿದೆ" ಎಂದು ಬರೆದಿದ್ದಾರೆ. ಹೀಗೆಂದು ಗುರುತಿಸಿದವರು ಯಾರು? ನಾನು "ಕನಕದಾಸ ಜೀವನ ವಿಚಾರ" ಎಂಬ ಕೃತಿ ರಚಿಸಿರುವೆ. ಅದರಲ್ಲಿ ಅವರ ಜೀವಿತದ ಕಾಲಾವಧಿ ೧೪೮೮-೧೫೭೮ ಎಂದು ನಿರ್ಣಯಿಸಿರುವೆ. ತಮ್ಮ ಲೇಖನದಲ್ಲಿ ಜನನ ೧೪೯೧ ಎಂದೂ ಮರಣ ೧೫೮೦ ಎಂದೂ ಬರೆದಿರುವ ಲೇಖಕರು ಕನಕ ೯೮ ವರ್ಷಗಳ ತುಂಬು ಜೀವನ ನಡೆಸಿದ್ದರೆಂದೂ ಬರೆದಿದ್ದಾರೆ. ಇದು ಅಸಮಂಜಸವೆಂಬುದು ಸ್ಪಷ್ಟ.

ಬೆಳಗಾವಿ — **ಪ್ರೊ|| ಜ್ಯೋತಿ ಹೊಸೂರ**

### 'ಹಂಪೆಯ ಭೀಮ' ಲೇಖನ ಕುರಿತು

ಡಿಸೆಂಬರ್ ೨೦೧೧ರ ಸಂಚಿಕೆಯಲ್ಲಿ, ಡಾ|| ಎಂ. ಡಿ. ಒಕ್ಕುಂದ ಅವರು ಕನ್ನಡ ಹಿರಿಯ ಸಾಹಿತಿಗಳ ಕಾಲ-ಕಾವ್ಯ-ಸಂದರ್ಭಗಳನ್ನು ಸೂಕ್ಷ್ಮವಾಗಿ ಅವಲೋಕಿಸುತ್ತಿದ್ದಾರೆ. ಕುವೆಂಪು ಅವರು ಹಿಂದೂ - ಮುಸ್ಲಿಮರನ್ನು ಪಾಂಡವರು-ಕೌರವರು ಎಂದು ವಿಭಜಿಸಿಕೊಂಡಿರುವುದನ್ನು, ಅವರ ಕಾವ್ಯಗಳ ಮೂಲಕ ರಾಷ್ಟ್ರಪ್ರಜ್ಞೆ ಮೂಡಿಸಿರುವುದನ್ನು ಸರಿಯಾಗಿಯೇ ಗಮನಿಸಿದ್ದಾರೆ. ಹಂಪೆಯು ಹಾಳಾಗಲು ಕೇವಲ ಮುಸ್ಲಿಮರೇ ಕಾರಣರಲ್ಲ, ಶೈವ-ವೈಷ್ಣವ ಶೀತಲ ಸಮರವೂ ಪೋಷಕ ಕಾರಣವೆಂಬುದನ್ನು ಕುವೆಂಪು ಸಹ ಊಹಿಸಿರಲಾರದ ವಿಚಾರವೇನಲ್ಲ. ಆದರೆ ಒಕ್ಕುಂದ ಅವರು ಅವರ ಲೇಖನದ ಕಡೆಯಲ್ಲಿ ಹೇಳಿರುವಂತೆ "ಚರಿತ್ರೆಯ ಅಪಕಲ್ಪನೆಯಿಂದ ಸೃಜನಶೀಲತೆಯ ಮತೀಕರಣದ ಸ್ವರೂಪವನ್ನು ತಿಳಿಯಬಹುದಾಗಿದೆ" ಎಂಬ ಕುವೆಂಪು ಕಾವ್ಯದ ಬಗ್ಗೆಯ ಮಾತು ಲೇಖಕರ ವಿಮರ್ಶೆಯ ದಾರಿತಪ್ಪಿಸುತ್ತದೆ.

ವಿವೇಕಾನಂದ, ರವೀಂದ್ರ, ಗಾಂಧೀಜಿ ಇವರೆಲ್ಲರೂ ದ್ಯೂತ ಪ್ರಸಂಗದ ಹಿರಿಯರಂತೆ ಭಾರತ ವಿಭಜನೆಯಲ್ಲಿ ನೋವಿನ ಎಳೆ ಅರಿತವರೇ ಹೌದು. ಇದರಲ್ಲಿ ಕುವೆಂಪು ಅವರದು ಕೂಡ ಸಹಭಾಗಿತ್ವವಿದೆ ಅನ್ನಬಹುದಷ್ಟೆ. 'ಮುಸಲರಿಂ ಹಸಿಮುಸಣವಾದ ಹಂಪಿ'ಯು ದ್ರೌಪದಿಯ ಸಂಕೇತ. ಆಕೆಯನ್ನು ರಕ್ಷಿಸಲಾಗದ ಸ್ಥಿತಿಯ ಹೆಣ್ಣಿಗ ಭೀಮನು ಮಹಾತ್ಮ ಗಾಂಧಿಯನ್ನು ಸಹ ಸಂಕೇತಿಸುತ್ತಾನೆ. ರಾಕ್ಷಸೀಕರಣ ಯಾಕೆ ಪ್ರಾರಂಭವಾಗುತ್ತದೆ, ಹೇಗೆ ಅಂತ್ಯಗೊಳ್ಳುತ್ತದೆ ಎಂಬುದಕ್ಕೆ ಭಾರತದೊಳಗಿನ ಹಿಂದೂರಾಷ್ಟ್ರೀಯತೆ ಎಷ್ಟು ಕಾರಣವೋ ಅಷ್ಟೇ ಕಾರಣವು ಇಸ್ಲಾಮೀ ರಾಷ್ಟ್ರೀಯತೆ ಕೂಡ. ಈ ವಿಭಜನೆಯ ಸಂದರ್ಭದಲ್ಲಿ ನವೋದಯ ಸಾಹಿತಿಗಳು ಹಿಂದೂಗಳ ಪರ ಬರೆದರೆಂದಾಕ್ಷಣ ಮತೀಯವಾದಿಗಳಾಗುವುದಿಲ್ಲ. ರಾಮ ರಾಮ ಎಂದು ಪ್ರಾಣಬಿಟ್ಟ ಮಹಾತ್ಮ ಕೂಡ ಎಂದೂ ಮತೀಯವಾದಿಯಾಗಿರಲಿಲ್ಲ, ಹೌದಲ್ಲವೇ!

ನಾಗರಬಾವಿ — **ಡಾ|| ರಾಜೇಗೌಡ ಹೊಸಹಳ್ಳಿ**




ಕರ್ನಾಟಕದ ವಿವಿಧೆಡೆ ಇರುವ ವಿಜ್ಞಾನ ಸಂವಹನಕಾರರ ಮತ್ತು ಸಂಪನ್ಮೂಲ ವ್ಯಕ್ತಿಗಳ ಸಮಗ್ರ ವಿಳಾಸದರ್ಶಿನಿಯನ್ನು ಪ್ರಕಟಿಸುವ ಯೋಜನೆ ಇದೆ. 'ಜನಪ್ರಿಯ ವಿಜ್ಞಾನ' ಸಂವಹನೆಯ ಕ್ಷೇತ್ರದಲ್ಲಿ ಕಾರ್ಯಶೀಲರಾಗಿರುವವರು ತಮ್ಮ ಬಗೆಗಿನ ಸಮಗ್ರ ಮಾಹಿತಿ ಹಾಗೂ ಭಾವಚಿತ್ರವನ್ನು **ಸರಸ ಸಂವಹನ ಸಮಿತಿ, ನಂ. ೪೯, ೨ನೇ ಬ್ಲಾಕ್, ೩ನೇ ಸ್ಟೇಜ್, ಬಸವೇಶ್ವರನಗರ, ಬೆಂಗಳೂರು – ೫೬೦ ೦೭೯** – ಈ ವಿಳಾಸ ಅಥವಾ sarasasamvahana@rediff.com ಇ-ಮೇಲ್ ವಿಳಾಸಕ್ಕೆ ಕಳುಹಿಸಿಕೊಡಲು ಕೋರಿದೆ.

**– ಕೆ. ಸುಬ್ರಮಣ್ಯ**
'ಸರಸ ಸಂವಹನ'
ರಾಜ್ಯ ಸಂಚಾಲಕರ ಪರವಾಗಿ

ಈ ಬಾರಿ ವಿಶೇಷ ಸಂಚಿಕೆ ಬಹಳ ತಡವಾಗಿ ಹೊರಬಂದಿದೆ. ಮೊನ್ನೆ ಮೊನ್ನೆಯಷ್ಟೇ ಮುಟ್ಟಿತು. ಆದರೆ ಒಂದು ರೀತಿ ಸಾರ್ಥಕವೆನಿಸಿತು. ತಡವಾದುದಕ್ಕೆ ಸಮರ್ಥನೆ ಎಂಬಂತೆ ಚೆನ್ನಾಗಿ ಬಂದಿದೆ. ಹಿಂದಿನಂತೆ ವೈವಿಧ್ಯವಿದೆ. ಆದರೆ ವೈಚಾರಿಕತೆ ಸ್ವಲ್ಪ ಹಿಂದಕ್ಕೆ ಸರಿದಿದೆ. ಏಕೋ ತಿಳಿಯದು. ಪ್ರಬಂಧ, ವಿಡಂಬನೆ, ಸಾಂಸ್ಕೃತಿಕ ವಿದ್ಯಮಾನ, ಇವಕ್ಕೆ ಇನ್ನೂ ಹೆಚ್ಚಿನ ಸ್ಥಾನ ನೀಡಿದ್ದರೆ ಉತ್ತಮವಿರುತ್ತಿತ್ತು. ಪೂರ್ತಿಯಾಗಿ ಸಂಚಿಕೆಯನ್ನು ಇನ್ನೂ ನೋಡಲಾಗಿಲ್ಲ, ಗಾತ್ರ ಅಷ್ಟು ದೊಡ್ಡದು. ವಿಷಯಗಳು ಅಷ್ಟೇ ಪ್ರಮಾಣದಲ್ಲಿ ಚರ್ಚೆಗೆ ಬಂದಿವೆಯೇ ಎಂಬುದನ್ನು ಓದಿ ತಿಳಿಯುವ ಆಸಕ್ತಿ ಇದೆ.

ಮೈಸೂರು — **ಮಧುಕರ**

ಸನ್ಮಾನ್ಯ ಶ್ರೀ. ಕೋ. ಚೆನ್ನಬಸವ್ವ ಅವರ ಸಂದರ್ಶನ ಲೇಖನವೊಂದು ಜನವರಿ ೨೦೧೨ರ ಸಂಚಿಕೆಯಲ್ಲಿ ಪ್ರಕಟವಾಗಿದೆ (ಪು. ೬೯-೭೩). ತಾವೇ ತಮ್ಮ ಬಗ್ಗೆ ಹೇಳಿದ್ದೆಂದು ಪ್ರಕಟವಾಗಿರುವ ಮಾತುಗಳು ತಮ್ಮ ಬಗ್ಗೆ ತಪ್ಪು ಕಲ್ಪನೆಯನ್ನು ಉಂಟುಮಾಡುವುದು ಮಾತ್ರವಲ್ಲದೆ ತಮ್ಮ ಜೀವನ ಮತ್ತು ವ್ಯಕ್ತಿತ್ವದ ಹನನವಾಗಿದೆಯೆಂದು ಮಾನ್ಯ ಕೋ. ಚೆ. ಅವರು ವಿಷಾದಿಸಿ ಪತ್ರ ಬರೆದಿದ್ದಾರೆ. ಸಂದರ್ಶನದಲ್ಲಿ ಅವರು ಹೇಳಿದ್ದ ಮಾತುಗಳನ್ನು ನಾವು ಗ್ರಹಿಸುವುದರಲ್ಲಿ ತಪ್ಪುಗಳೇನಾದರೂ ನುಸುಳಿದ್ದರೆ ಅದು ಖಂಡಿತ ಉದ್ದೇಶಪೂರ್ವಕವಾಗಿ ನಡೆದಿರುವುದಲ್ಲ. ನ್ಯೂನತೆಗಳಿಗಾಗಿ ವಿಷಾದಿಸುತ್ತಾ ಮಾನ್ಯ ಶ್ರೀ. ಕೋಚೆ ಅವರಲ್ಲಿ ಕ್ಷಮೆ ಕೇಳುತ್ತೇವೆ. ಮಾನ್ಯರು ವಿಚಾರಣೆ ನಡೆಸಿ ತೀರ್ಪು ಕೊಟ್ಟ ಸಬ್ ಪೋಸ್ಟ್ ಮಾಸ್ಟರ್ (ಆರೋಪಿ)ಅನ್ನು "ಛೇಂಬರಿಗೆ ಕರೆಸಿಕೊಂಡು ನಿನ್ನ ಅಪರಾಧದ ಪರಿಣಾಮವೇನು ನಿನಗೆ ಗೊತ್ತೇ?" ಎಂದ ಮಾನ್ಯ ಕೋಚೆಯವರು ಕೇಳಿದ್ದುದಾಗಿ ಸಂದರ್ಶನ ಲೇಖನದಲ್ಲಿ ನಮೂದಿಸಲಾಗಿದೆ. (ಪು. ೭೨). ಆ "ವರದಿ ಶುದ್ಧ ತಪ್ಪು" ಎಂದು ಮಾನ್ಯರು ತಿಳಿಸಿದ್ದಾರೆ. ಆರೋಪಿಗೆ ಆ ಪ್ರಶ್ನೆ ಕೇಳಲಾದ್ದು ನ್ಯಾಯಾಲಯದಲ್ಲಿ ಬಹಿರಂಗವಾಗಿಯೇ ವಿನಾ ಆತನನ್ನು ಛೇಂಬರಿಗೆ ಕರೆಸಿಕೊಂಡು ಕೇಳಿದ್ದಲ್ಲ. ನ್ಯಾಯಮೂರ್ತಿಗಳು ಯಾರೂ ಆರೋಪಿಗಳನ್ನು ಛೇಂಬರಿಗೆ ಕರೆಸಿಕೊಳ್ಳುವುದಿಲ್ಲವೆಂಬುದು ಸುವಿಖ್ಯಾತವಾದ ಪದ್ಧತಿ. ಅಜಾಗರೂಕತೆಯಿಂದ ನುಸುಳಿದ ತಪ್ಪಿಗಾಗಿ ವಿಷಾದಿಸುತ್ತೇವೆ. ಓದುಗರು ಈ ವಾಕ್ಯವನ್ನು ತಿದ್ದಿ ಓದಿಕೊಳ್ಳಬೇಕಾಗಿ ವಿನಂತಿ.

**– ಸಂ.**

# ಒದುಗರ ವೇದಿಕೆ

*ಕಳೆದ ಸಂಚಿಕೆಯಿಂದ ಮುಂದುವರೆದುದು.....*

ಭ್ರಷ್ಟಾಚಾರದ ನಿರ್ಮೂಲನದ ಕುರಿತು ಓದುಗರು ತಮ್ಮ ಅನಿಸಿಕೆಗಳನ್ನು ಸಂಕ್ಷಿಪ್ತವಾಗಿ ನೀಡಬೇಕೆಂದು ವಿನಂತಿಸಿಕೊಂಡಿದ್ದೆವು. ಅನೇಕ ಓದುಗರು ತಮ್ಮ ಪ್ರತಿಕ್ರಿಯೆಗಳನ್ನು ಕಳಿಸಿದ್ದಾರೆ, ಅವರಿಗೆಲ್ಲಾ ನಮ್ಮ ವಂದನೆಗಳು ಸಲ್ಲುತ್ತವೆ. ನಮಗೆ ತಲುಪಿದ್ದ ಬರಹಗಳ ಪೈಕಿ ಕೆಲವನ್ನು ಆಯ್ದು ಜನವರಿ ಸಂಚಿಕೆಯಲ್ಲಿ ಪ್ರಕಟಿಸಲಾಗಿತ್ತು. ಇನ್ನು ಕೆಲವನ್ನು ಈಗ ಪ್ರಸ್ತುತಪಡಿಸಲಾಗಿದೆ. ಅಭಿಪ್ರಾಯಗಳು ಕ್ರಿಯೆಗಳಿಗೆ ಅಡಿಪಾಯವಾಗಲೆಂದು ಆಶಿಸುತ್ತೇವೆ.

- ಸಂ

# ಭ್ರಷ್ಟಾಚಾರದ ನಿರ್ಮೂಲನಕ್ಕೆ ಸೂಚನೆ

ಮೊದಲು ಇಂದಿನ ಪದವೀಧರ ಯುವಕ, ಯುವತಿಯರನ್ನು ಸಂಘಟಿಸಿ ಆ ಸಂಘಟನೆಯಲ್ಲಿ ಇರುವ ಯುವಕ-ಯುವತಿಯರಿಗೆ ಮುಖ್ಯವಾಗಿ ಮೂರು ವಿಚಾರಗಳನ್ನು ಮನದಟ್ಟು ಮಾಡಿಸಬೇಕು : ಅಂಬೇಡ್ಕರ್, ಲೋಹಿಯಾ, ಗಾಂಧಿವಾದಗಳು ಮೇಲ್ನೋಟಕ್ಕೆ ಮೂರೂ ಮೂರು ದಿಕ್ಕಿಗೆ ಎಳೆಯುವಂತೆ ಭಾಸವಾದರೂ ಅವುಗಳ ಮೂಲ ಸಿದ್ಧಾಂತ ಒಂದೇ. ಅದು, ಆರ್ಥಿಕ, ರಾಜಕೀಯ ಸಮಾನತೆ ಮತ್ತು ಸರಳಜೀವನ. ಆ ಮೂರು ಧಾರೆಗಳನ್ನು ಕರಗತ ಮಾಡಿಕೊಂಡಿರುವ ಯುವಜನಾಂಗದ ಕೈಯಲ್ಲಿ ''ಪೆನ್ನನ್ನು'' ಕೊಟ್ಟು ಭ್ರಷ್ಟಾಚಾರದ ಮೂಲನೆಲೆಗಳಾದ ರೆವಿನ್ಯೂ, ಆರ್.ಟಿ.ಓ.ಗಳಂತಹ ಕಛೇರಿಗಳಲ್ಲಿ ಈ ಪ್ರಜ್ಞಾವಂತ ಪಡೆಗಳನ್ನು ನಿಲ್ಲಿಸಿ, ಆಯಾಯ ಕಛೇರಿಗಳಿಗೆ ಕಾರ್ಯನಿಮಿತ್ತ ಬಂದ ವ್ಯಕ್ತಿಗಳಿಗೆ ಮಾರ್ಗದರ್ಶನ ಮಾಡುತ್ತ ನಿಲ್ಲುವುದು. ಹಾಗೊಂದು ಪಕ್ಷ ಅಲ್ಲಿಯ ಅಧಿಕಾರಿಗಳು ಈ ಪ್ರಜ್ಞಾವಂತ ಪಡೆಗಳಿಂದ ಸರ್ಕಾರದ ಕೆಲಸಕ್ಕೆ ಅಡಚಣೆ ಆಗುತ್ತಿದೆ ಎಂದು ಆರೋಪಿಸುವ ಮೊದಲೇ ನಾವೇ ಮುಂದಾಗಿ ಸುಪ್ರೀಂಕೋರ್ಟ್‌ನಿಂದಲೋ ರಾಷ್ಟ್ರಪತಿಯವರಿಂದಲೋ ಅನುಮತಿ ಪತ್ರವನ್ನು ಪಡೆದು ಇಟ್ಟುಕೊಳ್ಳುವುದು ಲೇಸು. ತತ್ಪರಿಣಾಮವಾಗಿ ಸರ್ಕಾರಿ ನೌಕರರು ರಾಜಿನಾಮೆ ಕೊಟ್ಟರೆ, ಪ್ರಜ್ಞಾವಂತ ಪಡೆಯ ಸದಸ್ಯರು ಆ ಉದ್ಯೋಗವನ್ನು ಮಾಡಲು ಶಕ್ತರಾಗಿರಬೇಕು.

ಸರ್ಕಾರಿ ನೌಕರರಿಗೆ ಈಗಿರುವ ಸಂಬಳದಲ್ಲಿ ಸ್ವಲ್ಪ ಕಡಿತಗೊಳಿಸುವುದರಿಂದ ಸರ್ಕಾರಿ ನೌಕರಿಗೆ ಸೇರುವ ಜನರ ನೂಕು ನುಗ್ಗಲು ಕಮ್ಮಿಯಾಗುತ್ತೆ ಮತ್ತು ಮಂತ್ರಿ ಮತ್ತಿತ್ತರರಿಗೆ ಲಂಚ ರುಷುವತ್ತು ಕೊಡುವ ಪ್ರಕ್ರಿಯೆಗೆ ಕಡಿವಾಣ ಬೀಳುತ್ತೆ.

ಒಂದು ಮನೆಯಲ್ಲಿ ಒಬ್ಬರಿಗೆ ಮಾತ್ರ ಸರ್ಕಾರಿ ಉದ್ಯೋಗ. ಒಂದು ಕುಟುಂಬಕ್ಕೆ ವರ್ಷಕ್ಕೆ ಬೇಕಾಗುವಷ್ಟು ಆಹಾರ ಉತ್ಪಾದನೆ ಆಗುವಷ್ಟು (ಸುಮಾರು ಐದು ಎಕರೆ) ಜಮೀನು ಉಳ್ಳವರಿಗೆ ಸರ್ಕಾರಿ ಹುದ್ದೆಯಿಂದ ಹೊರಗಿಡುವ ಕಾನೂನು ರೂಪಿಸುವಂತೆ ಸರ್ಕಾರಕ್ಕೆ ಒತ್ತಾಯಿಸುವುದು.

**ಕುಬಾಳ ಜಗದೀಶ್**, ರೂಂ ನಂ. ೧, ತೇಜಸ್ವಿ ಕಾಂಪ್ಲೆಕ್ಸ್, ಎಡಪದವು
ಶಿಬ್ರಿಕೆರೆ ಅಂಚೆ, ಮಂಗಳೂರು ತಾಲೂಕು, ದಕ್ಷಿಣ ಕನ್ನಡ ಜಿಲ್ಲೆ

*        *        *

ಲಂಚ, ರುಷುವತ್ತು, ದೇಣಿಗೆ, ಹೈರಿ, ಖುಷಿ, ಕಾಣಿಕೆ, ಕಮಿಶನ್ನು, ವರದಕ್ಷಿಣೆ, ವಧುದಕ್ಷಿಣೆ, ಕಪ್ಪುಕಾಣಿಕೆ, ಸಂಬಂಧಿತರಲ್ಲದವರಿಗೆ ಪ್ರತ್ಯಕ್ಷ ಮತ್ತು ಪರೋಕ್ಷ ಸಹಾಯ ಇತ್ಯಾದಿ ನಮ್ಮ ಭ್ರಷ್ಟಾಚಾರದ ತಾಯಿ ಮತ್ತು ತಂತು ಬೇರುಗಳು. ಈ ಭ್ರಷ್ಟಾಚಾರ ಬ್ರಿಟಿಷರ ಕಾಲದ ಬಳುವಳಿ. ಹನ್ನೆರಡನೆಯ ಶತಮಾನದಲ್ಲಿ ಶರಣರು ಕಾಯಕದಿಂದಲ್ಲದ ದುಡಿಮೆಗಳಿಗೆ 'ಹೊಲಸು' ಅಂದರು. 'ಹೇಸಿಗೆ' ಎಂಬರ್ಥದಲ್ಲಿ ತಿಳಿದು ಜಿಗುಪ್ಸೆಗೊಂಡು ಬಿಡಲೆಂದು. ಆದರೀಗ ಅದರರ್ಥವನ್ನು ಉಲ್ಟಾ ಮಾಡಿಕೊಳ್ಳಲಾಗಿದೆ!

ಈ ಲಂಚದ ಮೂಲ ಕುಟುಂಬ. ಅದು ಆಲದ ಮರವಾಗಲು ನಮ್ಮಲ್ಲಿರುವ ಅನಕ್ಷರತೆ, ಅಜ್ಞಾನ, ಕ್ಷಮಾಗುಣಗಳೇ ಕಾರಣ. ಕಂದಾಯ, ಪೊಲೀಸ್, ಲೋಕೋಪಯೋಗಿ, ನೀರಾವರಿ, ಗ್ರಾಮೀಣಾಭಿವೃದ್ಧಿಗಳಂತಹ ಸರ್ಕಾರಿ ಮತ್ತು ಮುನಿಸಿಪಾಲಿಟಿ, ಕಾರ್ಪೊರೇಷನ್‌ಗಳಂತಹ ಅರೆ-ಸರ್ಕಾರಿ ಇಲಾಖೆಗಳು ಲಂಚದ ಮೂಲಕ ಭ್ರಷ್ಟಾಚಾರದ ಕೂಪಗಳಾಗಿವೆ. ಈಗದು ನ್ಯಾಯಾಂಗಕ್ಕೂ ಹರಡಿರುವುದು ಮಾಧ್ಯಮಗಳಿಂದ ತಿಳಿದುಬರುತ್ತಿದೆಯಲ್ಲ!

ಹೀಗೆ ಮೂರೂ ಅಂಗಗಳಿಗೆ ಭ್ರಷ್ಟಾಚಾರದ ಗ್ಯಾಂಗ್ರಿನ್ ಬಡಿದಿದೆ. ಅದರ ನಿವಾರಣೆಗೆ ವಿಶೇಷ ಜಿಗಣೆಗಳನ್ನು ಬಿಡಬೇಕಿದೆ. ಅವುಗಳಾವುವೆಂಬುದನ್ನು ಈ ಕೆಳಗೆ ನಮೂದಿಸಿದೆ :

೧) ನಾವೆಲ್ಲರೂ ಮೊದಲು ರಾಷ್ಟ್ರ, ನಂತರ ನನ್ನ ಕುಟುಂಬ ಎನ್ನುವ ಮನೋಭಾವವನ್ನು ಬೆಳೆಸಿಕೊಳ್ಳಬೇಕು. ಈ ಭಾವವು ಮೊದಲು ಶಿಕ್ಷಕರಲ್ಲಿ ಬೆಳೆದು, ಅದು ಪ್ರಾಥಮಿಕ ಹಂತದಲ್ಲಿಯೇ ಮಕ್ಕಳಲ್ಲಿ ಒಡಮೂಡಬೇಕು.
೨) ಕನಿಷ್ಠ ಸುಶಿಕ್ಷಿತ ಪಾಲಕರು, ಮೇಲೆ ಹೇಳಿದ ವಿಷಯದಲ್ಲಿ ತಮ್ಮ ತಣಿಯದ ಆಸೆಗಳನ್ನು ಅಷ್ಟರಮಟ್ಟಿಗೆ ತ್ಯಾಗ ಮಾಡಬೇಕು.
೩) ಮತದಾರರು ಭ್ರಷ್ಟರಿಗೆ ಮತ ಚಲಾಯಿಸಬಾರದು. ಅಕಸ್ಮಾತ್ ಆರಿಸಿ ಹೋದಮೇಲೆ, ಭ್ರಷ್ಟರಾದರೆ, ಅವರನ್ನು ಘೇರಾಯಿಸುವಂಥವರಾಗಬೇಕು.
೪) ಸಾರ್ವಜನಿಕರು ಪ್ರತಿಭಟನೆಗೆ ಮುಂದಾದಾಗಲೆಲ್ಲ, ನಮ್ಮ ವಿದ್ಯಾರ್ಥಿಗಳು, ಬುದ್ಧಿಜೀವಿಗಳು, ಬುದ್ಧಿಗೇಡಿಗಳಾಗದೆ ಹೋರಾಟಕ್ಕಿಳಿಯಬೇಕು. ಎಂಭತ್ತರ ದಶಕ ಪುನರಾವರ್ತನೆಯಾಗಬೇಕು.
೫) ಪತ್ರಿಕಾ ಮತ್ತು ದೃಶ್ಯ ಮಾಧ್ಯಮದವರು ಆಳುವ ಪಕ್ಷದ ಕೈಗೊಂಬೆಯಾಗಬಾರದು. ಭ್ರಷ್ಟಾಚಾರಿಗಳ ಜಾತಕವನ್ನು ಜಾಲಾಡಿ, ಮಾಧ್ಯಮಗಳ ಧರ್ಮವನ್ನು ಕಾಪಾಡಿಕೊಳ್ಳಬೇಕು. ಆ ಮೂಲಕ ಪ್ರಜೆಗಳಲ್ಲಿ ಮಿಂಚಿನ ಸಂಚಲನವನ್ನು ಮೂಡಿಸಬೇಕು.
೬) ಪ್ರತಿ ಮನೆಯ ಗೃಹಿಣಿಯರು ಮತ್ತು ಮಕ್ಕಳು ತಂತಮ್ಮ ಕುಟುಂಬಗಳಲ್ಲಿ ನಡೆಯಬಹುದಾದ ಭ್ರಷ್ಟಾಚಾರದ ಪ್ರತಿ ನಡೆಗೆ ತಡೆಯನ್ನು ಹಾಕಬೇಕು. ಯಜಮಾನರ ಐಷಾರಾಮಿ ವಸ್ತುಗಳ ಆಮಿಷಕ್ಕೆ ಬಲಿಯಾಗಬಾರದು.
೭) ಭ್ರಷ್ಟಾಚಾರ ಬಯಲಿಗೆಳೆಯುವ ಜನರಿಗೆ ಅರ್ಥಾತ್ ಸೀಟಿ ಊದುವವರ ಜೀವರಕ್ಷಣೆಗೆ ಮೊದಲು ಕಾನೂನಾಗಬೇಕು. ಇಲ್ಲದಿದ್ದರೆ, ಈ ಹೋರಾಟದಲ್ಲಿ

## ಭ್ರಷ್ಟಾಚಾರದ ನಿರ್ಮೂಲನಕ್ಕೆ ನಿರ್ದಿಷ್ಟ ಸೂಚನೆಗಳು

ಬಲಿಯಾದ ದುಬೆ, ಮೋಪಾಲ್ ವಾಲ್, ಖೈರ್ನಾರ್, ಭಾಟಿಯ, ಜೆಟ್ಪಾ, ಸತೀಶ ಶೆಟ್ಟಿ, ದತ್ತಾತ್ರೇಯ ಪಾಟೀಲ್, ಸೋಲಾ ರಂಗರಾವ್, ಮಂಜುನಾಥ ಷಣ್ಮುಗಂ, ಡೇ... ಮುಂತಾದವರು ಭ್ರಷ್ಟಾಚಾರದ ಕರಾಳ ಖಡ್ಗಕ್ಕೆ ಬಲಿಯಾದವರ ಚಿತ್ರ ಉತ್ಸಾಹಿಗಳ ಕಣ್ಮುಂದೆ ಇರುವಾಗ, ಈ ಕಾನೂನನ್ನೊಳಗೊಂಡ ಅಣ್ಣಾ ಹಜಾರೆಯವರ ಲೋಕಪಾಲ ಮಸೂದೆ ಜಾರಿಗೆ ಬಂದರೆ, ಒಂದು ಪ್ಲಸ್ ಪಾಯಿಂಟ್.

೮) ಭಾರತದ ತುಂಬ ಅಣ್ಣಾ ಹಜಾರೆಯವರಂಥವರು ಇಂಥ ವಿಷಯದಲ್ಲಿ ಮುಂದೆ ಬರಬೇಕು. ಭಂಡ ಸರಕಾರಗಳಿಗೆ ಸಿಂಹಸ್ವಪ್ನವಾಗಬೇಕು.

೯) ಭ್ರಷ್ಟಾಚಾರಿಗಳ ಅನಧಿಕೃತ ಆಸ್ತಿಯೊಂದಿಗೆ ಅವರ ಭಾಗದ ಆನುವಂಶಿಕ ಆಸ್ತಿಯನ್ನೂ ಮುಟ್ಟುಗೋಲು ಹಾಕಿಕೊಳ್ಳುವುದರೊಂದಿಗೆ, ಅವರಿಗೆ ಜೀವಾವಧಿ ಕಾರಾಗೃಹ ವಾಸವನ್ನು ವಿಧಿಸಬೇಕು. ಆಗ ಪರೋಕ್ಷ ಮತ್ತು ಪ್ರತ್ಯಕ್ಷ ಸಹಾಯ ಮಾಡಿದವರಿಗೆ ಎಚ್ಚರಿಕೆ ನೀಡಿದಂತಾಗುತ್ತದೆ. ಅಷ್ಟರಮಟ್ಟಿಗೆ ಕಡಿವಾಣ ಹಾಕಿದಂತಾಗುತ್ತದೆ.

**ಶರಣಗೌಡ ಎರಡೆತ್ತಿನ**, 'ವ್ಯೋಮಕೇಶ', ಟೀಚರ್ಸ್ ಕಾಲೋನಿ, ತಮಟಕಲ್ ರಸ್ತೆ
ಚಿತ್ರದುರ್ಗ - ೫೭೭ ೫೦೨

* * *

ಭ್ರಷ್ಟಾಚಾರವೆಂದರೆ ಕೇವಲ ಲಂಚ ಪಡೆಯುವುದು, ಕೊಡುವುದೆಂಬುದು ಅಷ್ಟೇ ಅಲ್ಲ. ಯಾವುದೇ ವ್ಯಕ್ತಿ ಕೆಟ್ಟ ಆಚಾರದಲ್ಲಿ ಭಾಗಿಯಾದರೆ ಅಂದರೆ ಅನ್ಯಾಯ, ಅನೀತಿ, ಶೋಷಣೆ, ಅಮಾನವೀಯ ವರ್ತನೆ, ತಾರತಮ್ಯ, ಅಸಮಾನತೆ, ಮೌಢ್ಯ, ದುರಾಶೆ, ದುರಹಂಕಾರ, ಅಕ್ರಮ ವಿಧಾನಗಳನ್ನು ಅನುಸರಿಸುವಲ್ಲಿ ಭಾಗಿಯಾದ ಇಡೀ ಪ್ರಕ್ರಿಯೆ (ಆಚಾರ)ಯು ಭ್ರಷ್ಟಾಚಾರ ಎಂದು ಪರಿಗಣಿಸಲ್ಪಡುತ್ತದೆ. ಇಂತಹ ನೀತಿಯಿಂದ ದೇಶದ ವ್ಯವಸ್ಥೆಯ ಪ್ರಗತಿಪರ ಧೋರಣೆಗೆ ಅಡ್ಡಿಯಾಗುತ್ತದೆ. ಅದನ್ನು ಹೋಗಲಾಡಿಸಲು ಕೆಳಗಿನ ಸಪ್ತ ಶೀಲಗಳನ್ನು ಪಾಲಿಸುವುದು ಅವಶ್ಯಕ.

* ತನ್ನ ಪರಿಶ್ರಮದ ಫಲವನ್ನು ಹೊರತುಪಡಿಸಿ ಬೇರೊಂದಕ್ಕೆ ಆಶೆಪಡ ಬಾರದೆಂಬ ನೈತಿಕ ಧೋರಣೆ ಪ್ರತಿಯೊಬ್ಬರ ಮನದಂತರಾಳದಲ್ಲಿರಬೇಕು. ಲಂಚ, ವರದಕ್ಷಿಣೆ ಮುಂತಾದವನ್ನು ತೆಗೆದುಕೊಳ್ಳುವುದು ಮತ್ತು ಕೊಡುವುದು ಎರಡೂ ಭ್ರಷ್ಟ ಆಚಾರವೆಂದು ಪರಿಗಣಿಸಿ ಜಾಗ್ರತರಾಗಿರಬೇಕು.
* ಭ್ರಷ್ಟಾಚಾರ ವಿರೋಧಿ ಚಳುವಳಿಗಾರರಲ್ಲಿ ನಿಷ್ಪಕ್ಷಪಾತ, ಪ್ರಾಮಾಣಿಕತೆ, ಪಾರದರ್ಶಕತೆ, ಮುಂದಾಳತ್ವ ಮತ್ತು ನೀತಿಗೆ ಬದ್ಧರಾಗಿ ಸಾರ್ವಜನಿಕ ಬೆಂಬಲದಿಂದ ನಿಸ್ವಾರ್ಥ ಹೋರಾಟತನದ ನಿರ್ದಿಷ್ಟ ಉದ್ದೇಶ ಮತ್ತು ಧೋರಣೆಯನ್ನು ಹೊಂದಿರಬೇಕು. ಇಂತಹ ಹೋರಾಟಗಾರರ ಧೋರಣೆಯನ್ನು ಸರ್ಕಾರ ಸಂವಿಧಾನಾತ್ಮಕವಾಗಿ ಅಂಗೀಕರಿಸಿಕೊಳ್ಳಬೇಕು.
* ಭ್ರಷ್ಟಾಚಾರಕ್ಕೆ ದುರಾಶೆಯೇ ಮೂಲ ಕಾರಣವಾಗಿರುವ ಕಾರಣಕ್ಕಾಗಿ ಪ್ರತಿಯೊಬ್ಬರಿಗೆ ಸಂಪತ್ತು ಗಳಿಸುವಲ್ಲಿ ಒಂದು ನಿರ್ದಿಷ್ಟ ಮಿತಿಯನ್ನು ನಿಗದಿಪಡಿಸಬೇಕು. ಯಾವುದೇ ಕಾರಣಕ್ಕೆ ಈ ಮಿತಿಯನ್ನು ಮೀರದಂತೆ ಕಟ್ಟುನಿಟ್ಟಿನ ಕಾನೂನು ರೂಪಿಸಬೇಕು.
* ಮತ ಚಲಾಯಿಸುವಾಗ ಪ್ರತಿಯೊಬ್ಬರೂ ಜಾಗರೂಕರಾಗಿ ಯಾವುದೇ ಆಮಿಷಕ್ಕೆ ಒಳಗಾಗದೆ ಸಾರಾಸಾರ ಚಿಂತಿಸಿ ಅತ್ಯುತ್ತಮ ನಾಯಕನನ್ನು ಆಯ್ಕೆ ಮಾಡಿಕೊಳ್ಳಬೇಕು.
* ಭಾರತದ ಕೆಲವು ಧಾರ್ಮಿಕ ಕೇಂದ್ರಗಳು ಭ್ರಷ್ಟಾಚಾರಕ್ಕೆ ಮೂಲವೆಂಬ ಮಾತೊಂದಿದೆ. ಭಕ್ತರಲ್ಲಿ ಭ್ರಷ್ಟಾಚಾರದಿಂದ ಸಂಗ್ರಹಿಸಿದ ಕೆಲವೊಂದಿಷ್ಟು ಹಣ, ಒಡವೆಗಳನ್ನು ಆ ಸನ್ನಿಧಿಗೆ ಸಮರ್ಪಿಸಿ ತಮ್ಮ ತಪ್ಪನ್ನು ಮನ್ನಿಸಲು ಬೇಡಿ ಕೊಂಡರೆ ಆ ದೇವರು ಕ್ಷಮಿಸಿಬಿಡುತ್ತಾನೆಂಬ ಮೌಢ್ಯವಿದೆ. ಆ ಮೂಲಕ ಮತ್ತೆ ಮತ್ತೆ ಇಂತಹ ಭ್ರಷ್ಟ ಆಚಾರಕ್ಕೆ ಆ ಕೇಂದ್ರದಿಂದಲೇ ಪರವಾನಗಿಯನ್ನು ನವೀಕರಿಸಿಕೊಂಡು ಮತ್ತೆ ಮತ್ತೆ ರಾಜಾರೋಷವಾಗಿ ಭ್ರಷ್ಟಾಚಾರವೆಸಗು ತ್ತಿರುತ್ತಾರೆ. ಭ್ರಷ್ಟಾಚಾರಕ್ಕೆ ಪರೋಕ್ಷವಾಗಿ ಕುಮ್ಮಕ್ಕು ನೀಡುತ್ತಿರುವ ಇಂತಹ ಧಾರ್ಮಿಕ ಕೇಂದ್ರಗಳ ವ್ಯವಸ್ಥೆಯನ್ನು ನಿರ್ದಾಕ್ಷಿಣ್ಯವಾಗಿ ಮಟ್ಟಹಾಕಲೇಬೇಕು.
* ಭ್ರಷ್ಟಾಚಾರದಲ್ಲಿ ಭಾಗಿಯಾದವರಿಗೆಲ್ಲಾ ಕಠಿಣ ಶಿಕ್ಷೆ ವಿಧಿಸಿ ಅವರ ಹೆಚ್ಚುವರಿ ಆಸ್ತಿಯನ್ನೆಲ್ಲ ಮುಟ್ಟುಗೋಲು ಹಾಕಿಕೊಂಡು ಬಡತನ ರೇಖೆಗಿಂತ ಕೆಳಗಿನವರ ಶ್ರೇಯೋಭಿವೃದ್ಧಿಗಾಗಿ ಸದುಪಯೋಗಪಡಿಸಿಕೊಳ್ಳಬೇಕು.
* ರಾಜಕಾರಣಿಗಳು, ಅಧಿಕಾರಿಗಳಷ್ಟೇ ಅಲ್ಲ ಖಾಸಗೀ ಉದ್ದಿಮೆದಾರರು, ವ್ಯಕ್ತಿಗಳು ಅಕ್ರಮವಾಗಿ ಸಂಗ್ರಹಿಸಲು ಅವಕಾಶಗಳಿರುವ ಸ್ವಿಸ್ ಬ್ಯಾಂಕ್ ಗಳಂತಹ ವ್ಯವಸ್ಥೆಗಳನ್ನು ಅಂತರರಾಷ್ಟ್ರೀಯ ಮಟ್ಟದಲ್ಲಿ ಮಟ್ಟ ಹಾಕಲೇಬೇಕು.

**ವೆಂಕಟೇಶ ಕೆ. ಜನಾದ್ರಿ**, ಲೆಕ್ಕಪತ್ರ ಅಧೀಕ್ಷಕ, ಈಕರಸಾ. ನಿಗಮ, ಕೇಂದ್ರ ಕಛೇರಿ, ಸಾರಿಗೆ ಸದನ, ಗುಲಬರ್ಗಾ-೫೮೫೧೦೨

* * *

ತೆಲುಗಿನ ಭೋವಿ ಭೀಮಣ್ಣ ದೇಶದ ಜನಸಮುದಾಯವನ್ನು ಸ್ಥೂಲವಾಗಿ ಮೂರು ವರ್ಗಗಳಾಗಿ ವಿಂಗಡಿಸುತ್ತಾರೆ. ಅಧಿಕಾರಸ್ಥ ಮಂತ್ರಿಗಳು ಹುಲಿ-ತೋಳಗಳಾದರೆ, ನೌಕರವರ್ಗ ಸೀಳು-ನಾಯಿಗಳು. ಈ ಎರಡೂ ವರ್ಗ ಪರಸ್ಪರ ಸಂಘಟಿತರಾಗಿ ವ್ಯವಸ್ಥಿತವಾಗೇ ಇನ್ನೊಂದು ಅಮಾಯಕ ಕುರಿಗಳಂತೆ ಇರುವ ದೊಡ್ಡ ವರ್ಗವಾದ ಜನಸಾಮಾನ್ಯರನ್ನು ಬೇಟೆಯಾಡುತ್ತವೆ ಎಂದು.

ಬೃಹತ್ ಮರದಂತಿರುವ ಭಾರತದ ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಯಾವಾಗ ಮತದಾರರನ್ನೂ ಬಿಡದೆ ಭ್ರಷ್ಟರನ್ನಾಗಿಸಲಾಯಿತೊ ಅವೊತ್ತೇ ಮರದ ಬೇರುಗಳಿಗೆ ತೂತು ಕೊರೆದು ಪಾದರಸ ಸುರಿದಂತಾಯಿತು. ಸಮಾಜ ಸೇವೆ ಎನ್ನುವುದರ ಪರಿಕಲ್ಪನೆ ಕೇವಲ 'ಸ್ವಾರ್ಥ ಸಾಧನೆ' ಎನ್ನುವಂತಾಯಿತು. ಭ್ರಷ್ಟತೆಯ ಮೂಲ ಇರುವುದು ಇಲ್ಲಿಯೇ.

'ನೀವೇನು ಮಾಡಿಕೊಂಡಿದ್ದೀರಿ ?' ಎಂದು ಕೇಳಿದ್ದಕ್ಕೆ 'ಸೋಷಲ್ ವರ್ಕರ್' ಎಂದು ಯಾರಾದರೂ ಉತ್ತರಿಸಿದರೆ, ನಮಗದು 'ಸೆಕ್ಸ್ ವರ್ಕರ್' ಎಂದಂತೇ ಭಾಸವಾಗುತ್ತದೆ. ಸಮಾಜ ಸೇವೆ ಮಾಡಲು ರಾಜಕಾರಣವೇ ಆಗಬೇಕೆ, ಬೇರೆಷ್ಟೋ ಕ್ಷೇತ್ರಗಳಿರುವಾಗ. ಇದು ನಮ್ಮ ಮುಂದಿರುವ ಅಸಲು ಪ್ರಶ್ನೆ.

ಯಾವುಯಾವುದೊ ದಾರಿಯಲ್ಲಿ ಅಕ್ರಮವಾಗಿ ದುಡ್ಡು ಕೂಡಿಹಾಕಿಕೊಂಡ ನೆಂದರೆ, ಆತನ ಮುಂದಿನ ಪಾದ ರಾಜಕೀಯದಲ್ಲಿ ಊರುವದೇ ಆಗಿರುತ್ತದೆ. ರಾಜಕಾರಣ ಅನ್ನುವುದು ಅಂಥ ಅಗ್ಗದ ಧಂಧೆಯಾಗಿಹೋಯಿತೆ ? ಪಾಲಿಟಿಕ್ಸ್ ಮಾಡುವುದು, ಪಾಲಿಸಿ ಮಾಡುವುದು ಮುಂತಾದ ಪದಗಳಿಗೆ ಈಗ ಹೀನಾರ್ಥ ಪ್ರಾಪ್ತವಾಗಬೇಕೆ ? 'ರಾಜಕೀಯ' ಎಂದರೆ ಅಷ್ಟೊಂದು ಅಪಹಾಸ್ಯಕ್ಕೆ ಒಳಗಾಗಿದೆಯೆ ? ಮಹಾತ್ಮ ಗಾಂಧಿ, ನೆಹರೂ, ವಲ್ಲಭಭಾಯಿ ಪಟೇಲ, ಅಂಬೇಡ್ಕರರಂಥ ಮುತ್ಸದ್ದಿಗಳಿದ್ದ ದೇಶದ ರಾಜಕೀಯ ಕಣದಲ್ಲೀಗ ಯಾವ ಅರ್ಹತೆಯೂ ಇಲ್ಲದ ಎಷ್ಟೋ ಅಪ್ರಬುದ್ಧ ನೀಚರೇ ವಿಜೃಂಭಿಸುತ್ತಿರುವುದಕ್ಕೆ ಇರುವ ಕಾರಣಗಳಾದರು ಏನು ಎನ್ನುವುದನ್ನು ಹೆಕ್ಕಬೇಕಾಗಿದೆ.

ಕೊಂಪೆಗಳಾಗುತ್ತಿರುವ ಹಳ್ಳಿಗಳನ್ನು ಸಂತೈಸಬೇಕಾಗಿದೆ. ಮತ್ತೆ ನಮ್ಮ ಯುವ ಪೀಳಿಗೆ ಗ್ರಾಮ ಭಾರತವನ್ನು ಪ್ರೀತಿಸುವಂತೆ ಮಾಡಬೇಕಾಗಿದೆ. ನೆಲಮೂಲ ಸಂಸ್ಕೃತಿಗೆ; ತಳಮಟ್ಟದ ಅಭಿವೃದ್ಧಿಗೆ ಕೈಯಿಕ್ಕಬೇಕಾಗಿದೆ. ಅದಕ್ಕೆ ಬೇಕಾದ ಪರ್ಯಾಯ ಮಾರ್ಗೋಪಾಯಗಳು; ಅವುಗಳ ಅನುಷ್ಠಾನಕ್ಕೆ ಬೇಕಾದ ರಾಜಕೀಯ ಇಚ್ಛಾಶಕ್ತಿ ಈಗ ಅಗತ್ಯವಾಗಿದೆ. ಇಲ್ಲದಿದ್ದರೆ ಕೆಲಸವಿಲ್ಲದ ಯುವ

# ಭ್ರಷ್ಟಾಚಾರದ ನಿರ್ಮೂಲನಕ್ಕೆ ನಿರ್ದಿಷ್ಟ ಸೂಚನೆಗಳು

ಜನಾಂಗ ಏನು ಮಾಡಲೂ ಹೇಸುವುದಿಲ್ಲ. ಬೀದಿಗೆ ಬಿದ್ದ ಯುವಕರು ಹತ್ತು ರೂಪಾಯಿಗೂ ಚಾಕು ತೋರಿಸುವ ಕಾಲ ದೂರವಿಲ್ಲ. ಮುಂದೊಂದು ದಿನ ಹೊರಗಿನಿಂದ ಬೀಳುವ ಬಾಂಬಿಗಿಂತ ದೇಶದೊಳಗಿನ ಅರಾಜಕತೆಗೆ ಅವರೇ ಮಾರಕ-ಬಾಂಬು ಆಗುತ್ತಾರೆ. ಹಾಗಾಗುವ ಮುನ್ನ ಎಚ್ಚರವಹಿಸಬೇಕಾಗಿದೆ.

ಹಳದಿ ಲೋಹಕ್ಕೆ ಮರುಳಾಗುವ ಮನೆಯ ಮೊದಲ ಗುರು ಯಾರಾದರೂ ತಮ್ಮ ಗಂಡಂದಿರ ಸಂಬಳ ಮೀರಿ ಹೆಚ್ಚಿನ ಗಳಿಕೆ ಎಲ್ಲಿಂದ ಬಂತೆಂದು ಯಾವತ್ತಾದರೂ ಕೇಳಿದವರಿದ್ದಾರೆಯೆ ? ಹನ್ನೆರಡನೇ ಶತಮಾನದ ಆಯ್ದಕ್ಕಿ ಲಕ್ಕಮ್ಮ ಒಂದು ದಿನ ನಿತ್ಯಕ್ಕಿಂತ ಒಂದಷ್ಟು ಹೆಚ್ಚಿನ ಅಕ್ಕಿ ತಂದದ್ದಕ್ಕೇ 'ಈಸಕ್ಕಿಯಾಸೆ ನಿಮಗೇಕೆ ?' ಎಂದು ಗಂಡನನ್ನು ಮೂದಲಿಸುತ್ತಾಳೆ. ಅಂಥ ಮನೋವೃತ್ತಿ ಎಷ್ಟು ಮಂದಿ ಗೃಹಲಕ್ಷ್ಮಿಯರಲ್ಲಿದೆ ? 'ಬೇಕೆನುತ ಬೊಬ್ಬಿಡುತಲಿಹ ಘಟ'ವನ್ನು ಸಂಭಾಳಿಸುವ ಮೌಲ್ಯಗಳನ್ನು ಈಗ ಪುನರ್ ಸ್ಥಾಪಿಸುವ ದರ್ದು ಇದೆ.

**ಈರಪ್ಪ ಎಂ. ಕಂಬಳಿ,** ಸಹಾಯಕ ನಿರ್ದೇಶಕ, ಭಾಷಾಂತರ ನಿರ್ದೇಶನಾಲಯ, ವಿಶ್ವೇಶ್ವರಯ್ಯ ಕೇಂದ್ರ, ಬೆಂಗಳೂರು-೫೬೦೦೦೧

* * *

ಭ್ರಷ್ಟಾಚಾರ ಛೀ... ಛೀ... ಛೀ...

'ಹಾಗೆ ನೋಡಿದರೆ ಸ್ವಲ್ಪಮಟ್ಟಿಗೆ ಒಂದಿಲ್ಲೊಂದು ಕಾರಣಗಳಿಗಾಗಿ ಎಲ್ಲರೂ ಮಾನಸಿಕ ಭ್ರಷ್ಟರೇನೋ' ಎಂಬ ಅನುಮಾನ ನನ್ನನ್ನು ಕಾಡುತ್ತಿದೆ. ಇಂದು ಕೇವಲ ಒಂದು ಎಸ್.ಎಂ.ಎಸ್. ಸಂದೇಶವನ್ನು ಕಳುಹಿಸಿದ ಮಾತ್ರಕ್ಕೆ, ಅನಾಮಿಕ ಸಂಖ್ಯೆಗಳಿಗೆ ಮಿಸ್ಡ್‌ಕಾಲ್ ನೀಡಿದ ಮಾತ್ರಕ್ಕೆ ನಾವೂ ಭ್ರಷ್ಟಾಚಾರ ವಿರೋಧಿ ಹೋರಾಟಗಾರರಾಗಿದ್ದೇವೆ! ಅದರ ನಿರ್ಮೂಲನಾ ಕ್ರಿಯೆಯಲ್ಲಿ ತೊಡಗಿಕೊಂಡಿರುತ್ತೇವೆ ಎಂಬ ಹಸಿ ಹುಂಬತನದ ಮೌಢ್ಯವನ್ನು ಪ್ರದರ್ಶಿಸುತ್ತಿರುವ ಯುವಜನತೆಯಾದಿಯಾಗಿ ಎಲ್ಲರೂ ತಮ್ಮೊಳಗೆ ಕೇಳಿಕೊಳ್ಳಬಹುದಾದ ಮತ್ತೊಂದು ಪ್ರಶ್ನೆ ಇದೆ. ಅದೆಂದರೆ, ಪ್ರಸ್ತುತ ವ್ಯವಸ್ಥೆಯಲ್ಲಿ ನೈತಿಕವಾಗಿ ಭ್ರಷ್ಟಾಚಾರ ವಿರೋಧಿ ಮನೋಭಾವವನ್ನು ತಾವೆಷ್ಟು ಬೆಳೆಸಿಕೊಂಡಿದ್ದಾರೆ ಎಂಬ ಆತ್ಮವಿಮರ್ಶೆಯನ್ನು ತಾವೇ ಮಾಡಿಕೊಳ್ಳುವುದೊಳಿತು. ಹೀಗಾದಾಗ ಮಾತ್ರ ಅಲ್ಪ ಪ್ರಮಾಣದ ಭ್ರಷ್ಟಾಚಾರಕ್ಕೆ ನಾವು ಕಡಿವಾಣ ಹಾಕಿದ್ದೇವೆಂದು ಬೀಗಬಹುದೇನೋ! ಜೊತೆಗೆ, ಹೋರಾಟಗಾರರಾದಿಯಾಗಿ ಎಲ್ಲರೂ ಒಂದಿಲ್ಲೊಂದು ಕಾರಣಗಳಿಗೆ ನಾವು ಭ್ರಷ್ಟಾಚಾರದ ಪಸರಿಕೆಗೆ ಕಾರಣರಾಗಿದ್ದೇವೆ ಕೂಡ.

**ಆದ್ದರಿಂದ ಈ ಸೂತ್ರಗಳು ಅವಶ್ಯಕ :**

* ಪ್ರತಿಯೊಬ್ಬರೂ ಮಾನಸಿಕವಾಗಿ ಗಟ್ಟಿಗೊಳ್ಳುತ್ತಾ ಸೈದ್ಧಾಂತಿಕವಾಗಿ ಈ ಭ್ರಷ್ಟತೆಯ ಕೂಪದಿಂದ ಹೊರಬರುವುದು ಹಾಗೂ ಇದರ ವಿರೋಧಿ ಧೋರಣೆ ಬೆಳೆಸಿಕೊಳ್ಳುವುದು.
* ಭ್ರಷ್ಟಾಚಾರದಲ್ಲಿ ಭಾಗಿಯಾಗಿ ಪಡೆದ ಎಲ್ಲಾ ಸ್ವತ್ತನ್ನು ಮುಲಾಜಿಗೊಳಪಡದೆ ಜಪ್ತಿ ಮಾಡುವುದರೊಂದಿಗೆ ತಪ್ಪಿತಸ್ಥರನ್ನು ಕಠಿಣ ಶಿಕ್ಷೆಗೆ ಗುರಿಪಡಿಸುವುದು.
* ಭ್ರಷ್ಟಾಚಾರದಲ್ಲಿ ಭಾಗಿಯಾದ/ಭ್ರಷ್ಟಾಚಾರಕ್ಕೇ ಪ್ರೋತ್ಸಾಹ ನೀಡಿದ ಜನಪ್ರತಿನಿಧಿಗಳನ್ನು ಹಿಂದಕ್ಕೆ ಕರೆಸಿಕೊಳ್ಳುವ ಹಕ್ಕು ನೀಡುವುದು. ಇಲ್ಲವೆ ಅವರ ಸ್ಥಾನವನ್ನು ರದ್ದುಪಡಿಸುವುದು.
* ಭ್ರಷ್ಟಾಚಾರದ ತನಿಖಾ ಸಂಸ್ಥೆಗೆ ಸ್ವಾಯತ್ತತೆಯನ್ನು ನೀಡಿ ದಕ್ಷರೂ, ಪ್ರಾಮಾಣಿಕರೂ, ಕಳಂಕರಹಿತರೂ ಆದಂತಹ ಅಧಿಕಾರಿಗಳ ನೇಮಕ ಮಾಡುವುದು ಹಾಗೂ ಅಂಥವರನ್ನು ಕ್ಷುಲ್ಲಕ ಕಾರಣಗಳ ನೆಪವೊಡ್ಡಿ ವರ್ಗಾವಣೆಯನ್ನು ಮಾಡದಿರುವುದು.
* ಭಂಡ ಸರಕಾರಗಳು, ಬದಲಾದ ಮಾರುಕಟ್ಟೆ ಸಂಸ್ಕೃತಿ, ಜಡ್ಡುಗಟ್ಟಿದ ಅಧಿಕಾರಶಾಹಿ ಧೋರಣೆ ಇವೆಲ್ಲವೂ ಭ್ರಷ್ಟಾಚಾರದ ತಾಯಿಬೇರು. ಇಂತಹವುಗಳ ಬದಲಾವಣೆ ಪ್ರಜ್ಞಾವಂತ ನಾಗರಿಕ ಸಮಾಜದಿಂದ ಆಗಬೇಕು.

**ಆರ್. ಶಿವಶಂಕರ ಸೀಗೆಹಟ್ಟಿ,** ಸಹಶಿಕ್ಷಕರು, ಸ.ಕಿ.ಪ್ರಾ.ಶಾಲೆ ತೋಳದಕೇರಿ, ಮುಂಡರಗಿ ಅಂಚೆ, ದೇವದುರ್ಗ ತಾಲ್ಲೂಕು, ರಾಯಚೂರು - ೫೮೪ ೧೧೬

* * *

ರಾಜಕಾರಣಿಗಳು ಪರೋಕ್ಷವಾಗಿ ಭ್ರಷ್ಟಾಚಾರ ಹರಡಲು ಸಹಕಾರಿಯಾಗಿದ್ದಾರೆ. ಆದ್ದರಿಂದ ದೇಶದ ನೇತಾರರು ರಾಷ್ಟ್ರಪ್ರಜ್ಞೆ, ನೈತಿಕ ಪ್ರಜ್ಞೆಯನ್ನು ಉಳಿಸಿಕೊಂಡು ಯುವಕರಿಗೆ ಸೂಕ್ತ ಮಾರ್ಗದರ್ಶನ ನೀಡಿ ಮುನ್ನಡೆಸಿದರೆ, ಭಾರತದ ಭವಿಷ್ಯ ಭವ್ಯವಾಗಲಿದೆ. ಇತರ ಹುದ್ದೆಗಳಿಗಿದ್ದಂತೆ ರಾಜಕಾರಣಿಗಳಿಗೂ ಅವರ ಜವಾಬ್ದಾರಿಗೆ ತಕ್ಕಂತೆ ಸೂಕ್ತ ತರಬೇತಿ ಮತ್ತು ಅರ್ಹಾಂಕ ನೀಡುವ ಪದ್ಧತಿಯ ಜಾರಿಯಾಗಬೇಕು.

ಭ್ರಷ್ಟಾಚಾರವೆಂಬ ಕಬಂಧ ಬಾಹುವಿನ ಕಾಟ, ಮಧ್ಯವರ್ತಿಗಳ ಹಾವಳಿಯಿಂದಲೇ ಹೆಚ್ಚಾಗಿದ್ದು ನೇರ ವ್ಯಾಪಾರ ತಂತ್ರ, ಲೋಕಪಾಲ ಮಸೂದೆಯ ಹಿತಮಿತ ಅಳವಡಿಕೆ, ಇವು ಈ ವಿಷವರ್ತುಲದಿಂದ ಮುಕ್ತಿ ತಂದಾವು.

ತಳಮಟ್ಟದಿಂದ ದೇಶದಾದ್ಯಂತ ಜಾಗೃತಿ ಆಂದೋಲನವನ್ನು ಹಮ್ಮಿಕೊಂಡು ಭ್ರಷ್ಟಾಚಾರ ವಿರೋಧಿ ತೀಕ್ಷ್ಣ ಕಾನೂನುಗಳ ಜಾರಿ ಮತ್ತು ತುರ್ತು ಪರಿಪಾಲನೆ ಮಾಡಬೇಕು. ಹೋರಾಟಗಾರರಿಗೆ ನೈತಿಕ ಬೆಂಬಲ ನೀಡಬೇಕು.

ಹೀನ ಪ್ರವೃತ್ತಿಗಳಿಗೆ ಎಲ್ಲೆಡೆಯಿಂದಲೂ ಅನಾದರ ವ್ಯಕ್ತವಾದಾಗ ವ್ಯಕ್ತಿಗಳ ಮನಃಪರಿವರ್ತನೆ ಸಾಧ್ಯ. ಗಾಂಧೀಜಿಯವರ 'ಮಿತ ಅಗತ್ಯ, ಸರಳ ಜೀವನ' ನಿಯಮವನ್ನು ಇಂದಿನ ಜಾಗತೀಕರಣದ ಅವಧಿಯಲ್ಲಿಯೂ ರೂಢಿಸಿಕೊಂಡಾಗ, ಭ್ರಷ್ಟಾಚಾರದ ಭೂತವನ್ನು ಉಚ್ಚಾಟಿಸಬಹುದು. ಭ್ರಷ್ಟಾಚಾರ ವಿರೋಧಿ ಪಾಲನೆಯು ಮೊದಲು 'ನನ್ನಿಂದಲೇ ಆಗಲಿ' ಎಂಬ ಮಂತ್ರವು ಎಲ್ಲಾ ಪ್ರಜೆಗಳಿಂದಲೂ ಪಾಲನೆಯಾದಾಗ ತ್ವರಿತಗತಿಯಲ್ಲಿ ಪ್ರಗತಿಯಾಗುತ್ತದೆ.

ಪತ್ರಿಕಾ ರಂಗದಲ್ಲಿಯೂ ಸಮಾಜದ ಸ್ವಾಸ್ಥ್ಯ, ಉನ್ನತ ಆದರ್ಶಗಳು ಪ್ರವೃತ್ತಿಯಾದರೆ, ಹಲ್ಲು ಕಿತ್ತ ಹಾವಿನಂತೆ ರಾಜಕಾರಣಿಗಳು ವಿಷ ಕಾರದೆ ಮೂಕರಾದಾರು. ನಾನು, ನನ್ನದೆಂಬ ಸಂಕುಚಿತತೆಯನ್ನು ಕಿತ್ತೊಗೆದರೆ ವಿಶ್ವಪ್ರಜ್ಞೆಯ, ಭ್ರಷ್ಟಾಚಾರವೆಂಬ ವಿಕಾರವಿಲ್ಲದ ನವ ಸಮಾಜದ ನಿರ್ಮಾಣ ಖಂಡಿತವಾಗಿಯೂ ಕನ್ನಡಿಯಲ್ಲಿ ಕಂಡ ಗಂಟಿನಂತಾಗದು.

ಸ್ತ್ರೀ ಸಂಘಟನೆಗಳೂ ಕೂಡ ಈ ನಿಟ್ಟಿನಲ್ಲಿ ಕಾರ್ಯಪ್ರವೃತ್ತರಾದರೆ, ಭ್ರಷ್ಟಾಚಾರವೆಂಬ ರಕ್ತ ಬೀಜಾಸುರ ಬೇರು ಸಹಿತ ಇಲ್ಲವಾದೀತು. ಏನಿದ್ದರೂ 'ಮನಸ್ಸಿದ್ದಲ್ಲಿ ಮಾರ್ಗ'ವೆಂಬಂತೆ ತೀವ್ರ ಮನೋನಿಶ್ಚಲದಿಂದ ಕಾರ್ಯವನ್ನು ಕೈಗೆತ್ತಿಕೊಂಡಾಗ ಜಯ ನಮ್ಮದಾಗುತ್ತದೆ.

**ಎಂ. ಕುಸುಮ,** ಸಹಾಯಕ ಪ್ರಾಧ್ಯಾಪಕರು, ನಂ. ೪೩, 'ಜಯಲಕ್ಷ್ಮೀ ನಿಲಯ' ಕೆಐಎಂಸಿಒ ಎದುರು, ಬಿ. ಎಂ. ರಸ್ತೆ, ಹಾಸನ - ೫೭೩ ೨೦೧



ಸಾಹಿತ್ಯ ಸಮ್ಮೇಳನದಿಂದ ಕದ್ದುತಂದ ಪುಸ್ತಕಗಳಾದ್ರು ನಿಮ್ಮ ಸಾಹಿತ್ಯದ ಮೇಲಿನ ಪ್ರೀತಿಗೆ ಮೆಚ್ಚಲೇಬೇಕು

# ರೆಕ್ಕೆ ಮುರಿದ
# ಕ
# ಪಾರಿವಾಳ



ಚಂದ್ರಪ್ರಭ ಕಠಾರಿ

ದೂರದ ಊರಲ್ಲಿರೋ ಅಕ್ಕನನ್ನೊಮ್ಮೆ ನೋಡಿ ಬಾ.''

ಡಿಗ್ರಿ ಮುಗಿದು ಒಳ್ಳೇ ಕಡೆ ಕೆಲಸಾನು ಸಿಕ್ಕು, ಅದೇ ಖುಷಿಯಲ್ಲಿ ಬಂದು ಕಾಲಿಗೆರಗಿದರೆ, ಇತ್ತ ವಿನಂತಿಯಂತಿರದ, ಅತ್ತ ಅಣತಿಯಂತಿರದ ಸೋದರಮಾವನ ಅನಿರೀಕ್ಷಿತ ಮಾತಿಗೆ ಉದಯ ಪ್ರಶ್ನಾರ್ಥಕವಾಗಿ ಆ ಕ್ಷಣ ನಿಂತ.

''ಇಷ್ಟು ವರ್ಷಗಳೇ ಕಳೆದುಹೋಯಿತು. ಎಲ್ಲವನ್ನೂ ಮರೆತಾಗಿದೆ. ಈಗೇತಕ್ಕೆ ಮಾಮ ?''

''ಹಾಗೆಲ್ಲ ಹೇಳಬಾರದು. ನಿನಗಾದರೂ ಯಾರಿದ್ದಾರೆ ? ರಕ್ತ ಹಂಚಿಕೊಂಡ ಅವಳನ್ನು ಬಿಟ್ಟರೆ...''

ನಯವಾಗಿ ಹೇಳಿದರೂ ಆಡಿದ್ದನ್ನು ಸಾಧಿಸದೇ ಬಿಡುವವನಲ್ಲ ಈ ಶಾಂತುಮಾಮ. ಮನೆಗೆ ಮುಳ್ಳಾಗಿ, ಮನಕೆ ಮಾಯದ ಹುಣ್ಣಾಗಿ ಕಾಡಿದ ಅಕ್ಕನನ್ನು ಭೇಟಿಯಾಗುವುದೋ ? ಅಥವಾ ಹತ್ತು ಹನ್ನೆರಡು ವರುಷದವನನ್ನು ಸ್ವಂತಕಾಲಿನ ಮೇಲೆ ನಿಲ್ಲುವ ಹಂತಕ್ಕೆ ತಂದ ಪಿತೃಸ್ವರೂಪಿ ಮಾವನ ಮಾತನ್ನು ಧಿಕ್ಕರಿಸುವುದೋ ? ಉದಯ ನಿರುಪಾಯನಾದ.

ಅಪ್ಪ ಸತ್ತಾಗಿನಿಂದ ಮಾವನ ನೆರಳಲ್ಲೇ ಬೆಳೆದು, ವಿದ್ಯಾಭ್ಯಾಸವನ್ನು ಉಚಿತ ಹಾಸ್ಟೆಲ್, ವಾರಾನ್ನಗಳೆಂದು ಮುಗಿಸಿದವನಿಗೆ ಜೀವನ ಹಳೆಯ ದಿನಗಳನ್ನೆಲ್ಲ ಮರೆಸಿ ಅಕ್ಕನ ಮೇಲಿದ್ದ ಸಿಟ್ಟು, ಅಗೌರವಗಳನ್ನು ಅಳಿಸಿ ಹಾಕಿತ್ತು. ಆದರೀಗ ಶಾಂತುಮಾಮ ಅನವಶ್ಯಕವಾಗಿ ಮರೆತ ಕಹಿಗಳಿಗೆಗಳನ್ನು ಕೆದಕುತ್ತಿದ್ದನೆನಿಸಿತು. ಕಿಟಕಿಯ ಸರಳುಗಳ ನಡುವೆ ದೂರದಲ್ಲಿ ರೈಲ್ವೆ ಕೋಚ್ ಫ್ಯಾಕ್ಟರಿಯ ಕ್ವಾರ್ಟರ್ಸ್‌ನ ಮೂರು ಅಂತಸ್ತಿನ ಕಟ್ಟಡಗಳ ಗುಂಪಿನ ಮನೆಗಳಲ್ಲಿ ಒಂದೊಂದಾಗಿ ಸಂಜೆಗತ್ತಲಿಗೆ ಲೈಟ್ ಉರಿಯತೊಡಗಿತ್ತು.

ಆಗೆಲ್ಲ ಇಂಥದೇ ಸಂಜೆ ಜಾರಿ ಕತ್ತಲಾಗುತ್ತಿದ್ದಂತೆ ಸಿ-೧೨೯ನೇ ಕ್ವಾರ್ಟರ್ಸ್‌ನಲ್ಲಿದ್ದ ಭುಜಬಲಯ್ಯನ ಪುಟ್ಟ ಸಂಸಾರದಲ್ಲಿ ಆತಂಕ, ಭಯದ ಕರಿನೆರಳು ಆವರಿಸುತ್ತಿತ್ತು. ದೇವರಿಗೆ ದೀಪ ಹಚ್ಚಿ, ಕೈಮುಗಿದು ಮಂತ್ರ ಪಠಿಸುತ್ತ ಕೂತರೆ ತಲೆತುಂಬ ಮಗಳೇ ತುಂಬಿ, ಭುಜಬಲಯ್ಯನ ಕಣ್ಣುಗಳು ಮುಂಬಾಗಿಲತ್ತಲೇ ನೆಟ್ಟಿರುವುದು. ಉದಯನೂ ಅಷ್ಟೆ! ಹೆಸರಿಗೆ ಪಠ್ಯಪುಸ್ತಕ ಮುಂದಿದ್ದರೂ ಆಗಾಗ್ಗೆ ಅಪ್ಪನತ್ತ ನೋಡುವುದು.

''ಇಷ್ಟೊತ್ತಾದರೂ ಎಲ್ಲಿ ಹಾಳಾಗಿ ಹೋದಳೋ? ಸ್ವಲ್ಪ ನೋಡಿ ಬಾ, ಉದಿಪುಟ್ಟ'' ಎಂದು ಹೇಳುವುದನ್ನೇ ಕಾಯುತ್ತಾ, ಅಷ್ಟೊಂದು ವಿಶಾಲ ಕ್ವಾರ್ಟರ್ಸ್‌ನ ಯಾವ ಮನೆಯ ಕದ ಮೊದಲು ತಟ್ಟಬೇಕೆಂದು ಅಂದಾಜು ಮಾಡುತ್ತಿರುವನು.

ಉದಯನಿಗೆ ತರಗತಿಯಲ್ಲಿಯ ಒಂದೆರಡು ಸಹಪಾಠಿಗಳಷ್ಟೆ ಗೆಳೆಯರು ಇದ್ದರೆ, ಮಧುಮತಿಗೆ ಇಡೀ ಕ್ವಾರ್ಟರ್ಸ್‌ನಲ್ಲಿರುವ ಅಷ್ಟೂ ಮನೆಗಳು ಮತ್ತು ಅಲ್ಲಿರುವವರೆಲ್ಲ ಪರಿಚಯವೇ! ಭುಜಬಲಯ್ಯನ ಹಗಲು-ರಾತ್ರಿ ಪಾಳಿ ಎಂದು ಫ್ಯಾಕ್ಟರಿಯ ಕೆಲಸ, ಜೊತೆಗೆ ಸರ್ವಾಂಗ ಕಾಯಿಲೆಯ ಹೆಂಡತಿಯ ಆರೈಕೆಗಳ ನಡುವೆ, ಮಕ್ಕಳಿಬ್ಬರು ಬೆಳೆದದ್ದು ಅಕ್ಕಪಕ್ಕದ ಮನೆಗಳಲ್ಲೇ. ಅದರಲ್ಲೂ ಮುದ್ದಾದ, ಚಿನಕುರಳಿ ಮಾತಿನ ಮಧುಮತಿಯನ್ನು ಎಲ್ಲರೂ ಕೊಂಡಾಡುವವರೇ! ಉದಯನು ಹುಟ್ಟಿ, ಮಡದಿ ಕಾಯಿಲೆಗಳಿಗೆ ಪೂರ್ಣವಿರಾಮ ಹಾಕಿ ಕಣ್ಮುಚ್ಚಿದಾಗ, ಗೆಳೆಯ-ಹೆಂಡತಿಯ ಅಣ್ಣ ಶಾಂತರಾಜು ಮಕ್ಕಳ ಸಲುವಾಗಿಯಾದರೂ ಮತ್ತೊಂದು ಮದುವೆಯಾಗಲು

**ಮುರುಗನ್‌ಗೆ ಮಧುಮತಿ ಕಣ್ಣಿಗೆ ಬಿದ್ದದ್ದೇ, ಪ್ರಥಮನೋಟದಲ್ಲಿಯೇ ಇವಳು ತನ್ನ ರಾಜಕುಮಾರಿ ಎಂದು ನಿರ್ಧರಿಸಿಬಿಟ್ಟ. ಶಾಲೆಗೆ ಹೋಗುವಾಗ, ಬರುವಾಗ ತನ್ನ ಕಪಿಸೈನ್ಯದೊಂದಿಗೆ ಸಿನಿಮಾ ಹಾಡು ಗುನುಗುತ್ತ ಅಂಗರಕ್ಷಕನಂತೆ ಹಿಂಬಾಲಿಸತೊಡಗಿದ. ಮಧುಮತಿಗೆ ಮೊದಮೊದಲು ಇರುಸುಮುರುಸಾಗಿ ಭಯವಾದರೂ, ತನ್ನದು ಸಿನಿಮಾನಟಿಯ ಕಣ್ಣುಮೂಗು ಅಂತೆಲ್ಲ ತಾರೀಫು ಮಾಡುವಾಗ ಒಳಗೊಳಗೆ ಪುಳಕಿತಳಾಗುತ್ತಿದ್ದಳು.**

...ನ್ನಿಲ್ಲದಂತೆ ಜುಲುಮೆ ಮಾಡಿದರೂ ಭುಜಬಲಯ್ಯ ಸುತರಾಂ ಒಪ್ಪಿರಲಿಲ್ಲ. ಪ್ರೀತಿಸಿ ಮದುವೆಯಾದ ಮಡದಿಯ ಸಾವು ತಂದ ನೋವು ಒಂದೆಡೆಯಾದರೆ, [illegible] ಆಸ್ಪತ್ರೆಯ ಖರ್ಚುಗಳಿಗಾಗಿ ಮಾಡಿದ ಸಾಲ ಮೈಮೇಲೆಲ್ಲ ಹರಡಿ ಬದುಕು ಅವನನ್ನು ಹೈರಾಣಾಗಿಸಿತ್ತು. ಬದುಕಲಿಕ್ಕಾಗಿಯೇ ಬದುಕು ಎಂಬಂಥ ನಿರ್ಲಿಪ್ತತೆ ಭುಜಬಲಯ್ಯನನ್ನು ಆವಾಹಿಸಿ ಫ್ಯಾಕ್ಟರಿ, ಮನೆ-ಮಕ್ಕಳು, ದೇವರ ಸ್ಮರಣೆ ಬಿಟ್ಟರೆ ಅವನಿಗೆ ಹೊರಜಗತ್ತಿನ ಅರಿವು ಇರಲಿಲ್ಲ ಅಥವಾ ಅವನಿಗೆ ಬೇಕಿರಲಿಲ್ಲ.

ಬೆಳಗಾಯಿತೆಂದರೆ ಮಕ್ಕಳ ಶಾಲೆಗೆ ಮತ್ತೆ ತನಗೆ ಫ್ಯಾಕ್ಟರಿಗೆ ತಡವಾಯಿತೆಂದು ದಡಗುಟ್ಟುತ್ತ ಅಡಿಗೆ ಮಾಡಿ, ಮಕ್ಕಳ ಜೊತೆಗೆ ತಾನೂ ಸಿದ್ಧನಾಗುತ್ತಿದ್ದವನು, ಮಕ್ಕಳಿಗೆ ಸ್ನಾನ ಮಾಡಿಸುವಾಗ ಮಗಳ ಎದೆಯು ದಪ್ಪಗೋಲಿಯಂತೆ ಉಬ್ಬಿರುವುದನ್ನು ಗಮನಿಸಿ ಗಾಬರಿಯಾಗಿ ಶಾಂತರಾಜು ಬಳಿ, ಮಗಳು ಬೆಳೆದ ಪರಿಯನ್ನು ತಿಳಿಸಿ ಕಳವಳ ತೋರಿದ.

''ಅಲ್ಲೋ ಹುಚ್ಚಪ್ಪ! ಮಗು ಹುಟ್ಟುದ್‌ಮೇಲೆ ಮಗುವಾಗೇ ಇರುತ್ತಾ? ಬೆಳಿಯೋದಿಲ್ವ? ಹೆಣ್ಣುಮಗಳು ದೊಡ್ಡೋಳಾಗೋ ವಯಸ್ಸಲ್ಲಿ, ಮಾತೇ ಬಾರದ ನೀನು ಏನು ಅಂತ ತಿಳುವಳಿಕೆ ಕೊಡ್ತೀಯ? ಅದ್ಕೆ ನಿಂಗೆ ಆವಾಗ ಬಡಕೊಂಡಿದ್ದು ಒಂದು ಮದುವೆ ಆಗು ಅಂತ. ಇನ್ನು ಮೇಲಾದರೂ ಕ್ವಾರ್ಟರ್ಸ್ ತುಂಬ ಊರಬಸ್ವಿ ಥರ ಸುತ್ತೋಳ್ನ ಸ್ವಲ್ಪ ಹದ್ದುಬಸ್ತಲ್ಲಿ ಇಟ್ಕೋ'' ಎಂದು ಮಧುಮತಿಯನ್ನು ಕರೆದು ಶಾಲೆ ಬಿಟ್ಟರೆ ಮನೆಯಲ್ಲಿದ್ದು ಓದಿನ ಕಡೆ ಗಮನ ಕೊಡಬೇಕೆಂದು ತಾಕೀತು ಮಾಡಿದ. ಇದ್ದಕ್ಕಿದಂತೆ ಶಾಂತುಮಾಮ ಹೀಗೇಕೆ ಹೇಳಿದನೆಂದು ತಿಳಿಯದೆ ಅವಳು ಆಯಿತೆಂದು ಸುಮ್ಮನೆ ತಲೆಯಾಡಿಸಿದಳು.

ಶಾಂತರಾಜು ಎಚ್ಚರಿಸಿ ಹೋಗುವುದಕ್ಕೂ, ಯೌವನ ಆರ್ಭಟಿಸುತ್ತ ಮಧುಮತಿಯನ್ನು ಪ್ರವೇಶಿಸುವುದಕ್ಕೂ-ಜೊತೆಗೆ ಅವಳ ನಡವಳಿಕೆ, ಮಾತಿನ ಧಾಟಿ ಬದಲಾದುದೂ ಕಾಕತಾಳೀಯ ಎಂಬಂತಿತ್ತು.

> ಗುಡಿ ಮಂದಿರ ಆಗ ಎಲ್ಲವೂ ಚೆನ್ನ
> ದುರಾಸೆಯಲಿ ರೈತರ ಭೂಮಿಗೆ
> ಹಾಕಿದರು ಕನ್ನ
> ಮರೆತರು ರೈತರ ಬೆವರಿನ ಅನ್ನದ ತುತ್ತು
> ಸೇರಿಕೊಂಡರು ಜೈಲೆಂಬ ಹಾವಿನ ಹುತ್ತು
>
> ಸುರೇಶ್ ಅಂಗಡಿ
> ಮುಖ್ಯ ಗುರುಗಳು, ತುಂಗಭದ್ರಾ ಪ್ರೌಢಶಾಲೆ
> ಹೂವಿನ ಹಡಗಲಿ, ಬಳ್ಳಾರಿ (ಜಿ.)

ಮೊನ್ನೆಮೊನ್ನೆಯವರೆಗೂ ಕುಂಟುಬಿಲ್ಲೆ ಆಡುತ್ತಿದ್ದ ಹುಡುಗಿ ಇದೇನು ಈ ಪಾಟಿ ಬೆಳೆದು ನಿಂತಳಪ್ಪ! ಎಂದು ಕ್ವಾರ್ಟರ್ಸ್‌ನ ಹೆಂಗಸರು ಮೂಗಿನ ಮೇಲೆ ಬೆರಳೇರಿಸಿ, ಬೊಗಸೆಯಲ್ಲಿ ಮುಖವಿಡಿದು ,

''ಗೊಂಬೆಯಂತೆ ಎಷ್ಟು ಚಂದ ಇದ್ದೀಯ! ಲಕ್ಷ್ಮೀ ಕಳೆ ನಿನ್ನದು'' ಎನ್ನುವ, ಪಡ್ಡೆ ಹುಡುಗರು, ''ನಮ್ ಕ್ವಾರ್ಟರ್ಸ್‌ನ ಫ್ಯೂಚರ್ ಹೀರೊಯಿನ್ ಇವಳೇ!'' ಎನ್ನುವ ಹೊಗಳಿಕೆ ಮಾತುಗಳು ಮಧುಮತಿಯ ಕಿವಿಗೆ ಬಿದ್ದು ಉಬ್ಬಿಹೋಗುತ್ತಿದ್ದಳು. ಅಂಥದ್ದೇ ಮಾತುಗಳನ್ನು ಕೇಳುವ ಹಳವಂಡದಲ್ಲಿ ಮನೆ ಯಾಕೋ ಜೈಲಿನಂತಿತ್ತು. ಅಂಥ ಮನಸ್ಥಿತಿಯಲ್ಲಿ, ತಂದೆ ತಣ್ಣನೆ ದನಿಯಲ್ಲಿ ಏನನ್ನು ಹೇಳಿದರೂ ಕೂಡ ''ಏನಪ್ಪ! ಯಾವಾಗ್ಲೂ ಅಲ್ ನಿಂತ್ಕೊಬೇಡ, ಇಲ್ ಕುಂತ್ಕೊಬೇಡ. ಹೊತ್ತಿಗ್ ಮುಂಚೆ ಮನೆಗ್ ಬಾ, ಬರೀ ಓದು ಆಟ ಆಡ್ಬೇಡ, ಅಂತ ಹೇಳ್ತಾನೆ ಇರ್ತೀಯಾ?'' ಎಂದು ಸಿಡುಕಿನಿಂದ ಎದುರು ಪ್ರಶ್ನಿಸುತ್ತಿದ್ದಳು. ಕಾಸುಕಾಸಿಗೆ ತಿಣುಕಾಡುವ ಅಪ್ಪನಿಗೆ ತನಗೆ ಇಂಥದ್ದೇ ಬಟ್ಟೆಬರೆಬೇಕೆಂದು ಊಟ ತಿಂಡಿ ಬಿಟ್ಟು ಹಠಮಾಡುವುದು, ಅದರಿಂದ ಗಿಟ್ಟದಿದ್ದರೆ ಮನೆಯಿಂದ ಹೊರಟವಳು ಸ್ಥಿತಿವಂತ ಗೆಳತಿಯರ ಮನೆಯಲ್ಲಿ ಉಟ್ಟಿದ್ದನ್ನು ಬಿಚ್ಚಿ ಅವರ ಉಡುಗೆ ತೊಟ್ಟು ಅದರಲ್ಲೇ ಇಡೀ ಕ್ವಾರ್ಟರ್ಸ್ ಸುತ್ತ ಮೆರವಣಿಗೆ ಬಂದು ಎಂಥದೋ ಖುಷಿಯಲ್ಲಿ ತೇಲಾಡುವಳು.

ಗಂಟೆಗಟ್ಟಲೆ ಕನ್ನಡಿ ಮುಂದೆ ನಿಂತು ಮುಂಗುರುಳನ್ನು ಸುರುಳಿಸುರುಳಿಯಾಗಿ ಸ್ಪ್ರಿಂಗ್‌ನಂತೆ ತೀಡುತ್ತ, ತನ್ನ ಅಂದಕ್ಕೆ ತಾನೇ ಮೈಮರೆಯುತ್ತ ತಾನೊಬ್ಬ ರಾಜಕುಮಾರಿಯೆಂದು ಕಲ್ಪಿಸಿಕೊಂಡು ಆನಂದಿಸುತ್ತಿದ್ದವಳಿಗೆ, ಕ್ವಾರ್ಟರ್ಸ್‌ನ ಡಿ-೬೬ನೇ ಮನೇಲಿದ್ದ ಆರ್ಮುಗಂ ಎಂಬ ಡ್ರೈವರ್‌ನ ಮಗ ಮುರುಗನ್ ಎಂಬ ತಮಿಳು ರಾಜಕುಮಾರ ಗಂಟುಬಿದ್ದ. ಹೇಳಿಕೇಳಿ ಅವನೊಬ್ಬ ಪುಂಡ ಶಿಖಾಮಣಿ. ಹತ್ತನೇ ಪಬ್ಲಿಕ್ ಪರೀಕ್ಷೇಲಿ ಡುಂಕಿ ಹೊಡೆದು ಸಪ್ಲಿಮೆಂಟರಿ ಬರೆದವನು ಬೇರೇನೂ ಕೆಲಸವಿಲ್ಲದೆ ದೇವರಿಗೆ ಬಿಟ್ಟ ಹೋರಿಯಂತಾಗಿದ್ದ, ತನ್ನಂಥದೇ ಹುಡುಗರ ಹಿಂಡು ಕಟ್ಟಿಕೊಂಡು ನಾಯರ್ ಪೆಟ್ಟಿಗೆ ಅಂಗಡೀಲಿ, ಪಾರ್ಕ್‌ನ ಕಲ್ಲುಬೆಂಚಿನ ಮೇಲೆ, ಕ್ವಾರ್ಟರ್ಸ್‌ನ ಕಾಂಪೌಂಡು ಮೇಲೆ ಕುಳಿತು, ಅಮ್ಮಂದಿರ ಹತ್ತಿರ ಕಾಡಿ ಬೇಡಿ ತಂದಿದ್ದ ಕಾಸಲ್ಲಿ ಸಿಗರೇಟು ಹಚ್ಚಿಸಿ, ಒಬ್ಬೊಬ್ಬರು ಒಂದು ದಂ ಮಾತ್ರ ಎಳೆದು ಒನ್ ಬೈ ಟೆನ್ ಸರ್ವೀಸ್ ಮಾಡುತ್ತ, ಅಲ್ಲಿ ಹೋಗಿಬರುವ, ತಮ್ಮ ವಯಸ್ಸಿಗಿಂತಲೂ ಕಿರಿಯರನ್ನ ಅಥವಾ ಇಳಿವಯಸ್ಸಿನವರನ್ನ ಕಿಚಾಯಿಸಿ, ರೇಗಿಸಿ ಗೋಳು ಹೊಯ್ದುಕೊಂಡು ವಿಕೃತ ಆನಂದಪಡುತ್ತಿದ್ದರು.

ಇಂತಿಪ್ಪ ರಾಜಕುಮಾರ ಮುರುಗನ್‌ಗೆ ಮಧುಮತಿ ಕಣ್ಣಿಗೆ ಬಿದ್ದದ್ದೇ, ಪ್ರಥಮ ನೋಟದಲ್ಲಿಯೇ ಇವಳು ತನ್ನ ರಾಜಕುಮಾರಿ ಎಂದು ನಿರ್ಧರಿಸಿಬಿಟ್ಟ. ಶಾಲೆಗೆ ಹೋಗುವಾಗ, ಬರುವಾಗ ತನ್ನ ಕಪಿಸೈನ್ಯದೊಂದಿಗೆ ಸಿನಿಮಾ ಹಾಡು ಗುನುಗುತ್ತ ಅಂಗರಕ್ಷಕನಂತೆ ಹಿಂಬಾಲಿಸತೊಡಗಿದ. ಮಧುಮತಿಗೆ ಮೊದಮೊದಲು ಇರುಸುಮುರುಸಾಗಿ ಭಯವಾದರೂ, ತನ್ನದು ಸಿನಿಮಾನಟಿಯ ಕಣ್ಣುಮೂಗು ಅಂತೆಲ್ಲ ತಾರೀಫು ಮಾಡುವಾಗ ಒಳಗೊಳಗೆ ಪುಳಕಿತಳಾಗುತ್ತಿದ್ದಳು. ಹೀಗೆ ಪ್ರಾರಂಭಗೊಂಡ ಮುರುಗನ್ ಟಳಾಯಿಸುವಿಕೆ ಚೀಟಿಯಲ್ಲಿ ಸ್ನೇಹಸಂದೇಶ ಬರೆದು ಅವಳ ಕೈಗಿಟ್ಟು ಪಟಾಯಿಸುವುದರೊಂದಿಗೆ ಯಶಸ್ವಿಯಾಯಿತು.

ಸ್ನೇಹ ಅಮರ, ಪ್ರೀತಿ ಮಧುರ; ಸ್ನೇಹವಿಲ್ಲದ ಜೀವನ, ಪದಗಳಿರದ ಕವನ; ಸ್ನೇಹದ ನಿಯತ್ತು, ಪ್ರೀತಿಯ ಸಂಪತ್ತು... ಹೀಗೆ ಸ್ನೇಹ, ಗೆಳೆತನ, ಪ್ರೀತಿಯ ಬಗ್ಗೆ ಚಿಕ್ಕಚಿಕ್ಕ ಒಕ್ಕಣೆಗಳು ಚೀಟಿಗಳಲ್ಲಿ ವಿನಿಮಯಗೊಂಡು, ಇಬ್ಬರೇ ಗಂಟೆಗಟ್ಟಲೆ ನಿರ್ಜನ ಮಹಡಿಯ ಟೆರೇಸ್‌ಗಳ ಮೇಲೆ, ಪಾರ್ಕಿನ ಮರಗಿಡಗಳ ಮರೆಯಲ್ಲಿ ಹರಟೆಕೊಚ್ಚುವುದು ನಿರಂತರವಾಗಿ ಸಾಗಿತು. ಅಲ್ಲದೆ ಮುರುಗನ್ ತಾನು ರಾಮನಂತೆ, ಮಧುಮತಿ ಸೀತಾಳಂತೆ ಮತ್ತು ಬಲಗೈಬಂಟ ಗೆಳೆಯ ಗಣೇಶ ಹನುಮಂತನೆಂದು ಸುತ್ತಲೂ ನೆರೆದ ತನ್ನ ಕಪಿಸೈನ್ಯದ ಮುಂದೆ ಬುರುಡೆ ಹೊಡೆಯುತ್ತ ಹಲವು ಜಾಗಗಳಲ್ಲಿ ಕುಳಿತಿರುತ್ತಿದ್ದ ಗುಂಪಿನಲ್ಲಿ ಎಗ್ಗುಸಿಗ್ಗಿಲ್ಲದೆ ಮಧುಮತಿಯೊಂದಿಗೆ ಬೆರೆಯುತ್ತಿದ್ದ ದೃಶ್ಯ ಮಾಮೂಲಾಗಿ ಹೆಚ್ಚುಕಡಿಮೆ ಕ್ವಾರ್ಟರ್ಸ್‌ನ ಸಕಲರಿಗೂ ಅದು ತಿಳಿದ ವಿಷಯವೇ ಆಗಿ, ಅದರ ಬಗ್ಗೆ ಕತೆಗಳು ಹುಟ್ಟಿ, ಬಣ್ಣ ಮೆತ್ತಿಕೊಂಡು ಮಾತುಗಳಾಗಿ ನಾಲಿಗೆಗಳ ಮೇಲೆ ಹರಿದಾಡಿದ ಹರದ ಮಾತಾಯಿತು.

ಬರೀ ಸ್ನೇಹದ ಬಗ್ಗೆ ತಲೆಕೆಡಿಸಿಕೊಂಡಿದ್ದ ಮಧುಮತಿಗೆ ಮುರುಗನ್ ಸ್ನೇಹದ ಮುಂದಿನ ಹೆಜ್ಜೆ ಪ್ರೀತಿ ಪ್ರೇಮ ಎಂದೆಲ್ಲಾ ತಲೆಯಲ್ಲಿ ತುಂಬಿ, ಅದನ್ನು ಖುದ್ದಾಗಿ ಪರಾಂಬರಿಸುವಂತೆ ಕದ್ದು ರಾಜೇಶ್ವರಿ ಟಾಕೀಸಿನಲ್ಲಿ ನಡೆಯುತ್ತಿದ್ದ ಬಾಲಚಂದರ್‌ರ 'ಮರೋಚರಿತ್ರ' ಸಿನಿಮಾ ತೋರಿಸಿ ಪ್ರೀತಿ, ಪ್ರೇಮದ ಅಮರತ್ವವನ್ನು ನಿರೂಪಿಸಿದ. ಎದೆಯ ಮೇಲೆ, ಕೈಮೇಲೆ ಅವಳ ಹೆಸರನ್ನು ಹಚ್ಚೆ ಹಾಕಿಸಿಕೊಂಡ. ಅಂದಿನಿಂದಲೇ ಮಧುಮತಿ ಮುರುಗನ್‌ಅನ್ನು ತನ್ನ ಭಾವಿ ಗಂಡ ಅಂತಲೇ ಭಾವಿಸುತ್ತ ಎಳೆಯ ಮನಸಲ್ಲಿ ಹುಚ್ಚುಹುಚ್ಚಾಗಿ ತನ್ನ ಪುಟ್ಟ ಸಂಸಾರದ ಕನಸನ್ನು ಹೆಣೆಯತೊಡಗಿದಳು. ಹಾಗೆ ಕಲ್ಪನಾಲೋಕದಲ್ಲಿ ವಿಹರಿಸುವವಳಿಗೆ ಕಾಲದ ಪರಿವೆಯೇ ಇರುತ್ತಿರಲಿಲ್ಲ.

ಶಾಲೆಯಿಂದ ಬಂದೊಡನೆ ಅಪ್ಪನ ಅನುಪಸ್ಥಿತಿಯಲ್ಲಿ ತಾನೇ ಬಡಿಸಿಕೊಂಡು ಉಂಡು, ಕಾಲಿಗೆ ಚಕ್ರ ಕಟ್ಟಿಕೊಂಡವಳಂತೆ ಮನೆಯಾಚೆ ಬಿದ್ದ ಅಕ್ಕ ಗಂಟೆ ಎಂಟಾದರೂ ಮನೆಗೆ ಬರದಿದ್ದಾಗ ಹುಡುಕಿ ಹೊರಟ ಉದಯ, ಮೊದಲು ತಾವಿದ್ದ ಮನೆಯ ಪಕ್ಕದ ಕಟ್ಟಡದಲ್ಲಿದ್ದ ಮಧುಮತಿಯ ಸಹಪಾಠಿ ಗೀತಾಳ ಮನೆಯ ಬಾಗಿಲು ತಟ್ಟಿದ.

''ಇಲ್ಲಿ ಅವ್ಳು ಬಾಳ ಹೊತ್ತು ಇರಲಿಲ್ಲ. ಆಡೋದಿಕ್ಕೆ ಫ್ರೆಂಡ್ಸ್ ಬಂದಿರ್ತಾರೆಂದು ಫೀಲ್ಡ್‌ಗೆ ಅವಾಗ್ಲೆ ಹೋದ್ಳು'' ಎಂಬ ಉತ್ತರ ಬಂತು.

''ಇಷ್ಟು ಹೊತ್ತಲ್ಲಿ ಮೈದಾನದಲ್ಲಿ ಯಾರು ಇರ್ತಾರೆ? ದಿನಾ ಇವಳದ್ದೊಂದು ಗೋಳಾಯಿತು'' ಎಂದು ಬಟ್ಟೆ ಪಿನ್ನು ಹಾಕಿ ಉದುರುತ್ತಿದ್ದ ಚೆಡ್ಡಿಯನ್ನು ಸೊಂಟಕ್ಕೇರಿಸುತ್ತ, 'ಸಿ' ಟೈಪ್ ಕ್ವಾರ್ಟರ್ಸ್‌ನ ಆಚೆಗಿರುವ ಮೈದಾನಕ್ಕೆ ಓಡೋಡಿ ಬಂದರೆ, ಅಲ್ಲಿ ಒಬ್ಬ ನರಪಿಳ್ಳೆಯೂ ಇರದೆ ಇಡೀ ಮೈದಾನಕ್ಕೆ ಕಾಡಿಗೆ ಕತ್ತಲು ಕವಿದು ಗವ್ವೆನ್ನುತ್ತಿತ್ತು. ದೂರದಲ್ಲಿ ಮೈದಾನದ ಮೂಲೆಯಲ್ಲಿ ಬೆಳಕಿನ ಕಿಡಿ ಹೊತ್ತಿ ಹೊಳೆದಂತಿತ್ತು. ಮಿಣುಕುಹುಳ ಇರಬಹುದು ಅಥವಾ ಯಾರೋ ಬೀಡಿ ಸೇದುತ್ತ ಕೂತಿರಬಹುದು. ಆ ನಿರ್ಜನ ಪ್ರದೇಶದಲ್ಲಿ ತಾನೊಬ್ಬನೇ ಇರುವುದನ್ನು ನೆನೆದು ಉದಯ ಸಣ್ಣಗೆ ನಡುಗಿದ. ಅಲ್ಲಿಂದ ಕಾಲುಕಿತ್ತವನು ಬಲಬದಿಯಲ್ಲಿ - ಡ್ರೈವರ್, ವಾಚ್‌ಮೆನ್, ದಿನಗೂಲಿ ನೌಕರರೇ ಹೆಚ್ಚಾಗಿರುವ 'ಡಿ' ಟೈಪ್ ಕ್ವಾರ್ಟರ್ಸಿನ

ಕಟ್ಟಡಗಳ ಮಧ್ಯಕ್ಕೆ ಬಂದು ನಿಂತ. ತಲೆಯೆತ್ತಿ ನಿಂತಲ್ಲೆ ಸುತ್ತಿ ನೋಡಿದರೆ ಎಲ್ಲರ ಮನೆಯ ದೀಪ ಉರಿಯುತ್ತಿತ್ತಾದರೂ ಹೊರಗೆ ಯಾರೂ ಕಾಣಲಿಲ್ಲ. ಆದರೆ ಡಿ-೬೮ರ ಕಟ್ಟಡದ ಟೆರೇಸಿನಲ್ಲಿರುವ ಓವರ್‌ಹೆಡ್ ಟ್ಯಾಂಕ್ ಮೇಲೆ ಒಂದಷ್ಟು ಹುಡುಗರು ಗಾಳಿಪಟ ಹಾರಿಸುವಾಗ ನಿಲ್ಲುವಂತೆ ನಿಂತದ್ದು ಕಾಣಿಸಿತು. ದಿನಾಲು ಕಾಡುವ, ಇದೇ ಕ್ವಾರ್ಟರ್ಸ್‌ನ ಕೆಲವು ಮೀಸೆ ಹೊತ್ತ ಹುಡುಗರು ಇಂಥ ಹೊತ್ತಲ್ಲಿ ತನ್ನನ್ನು ಕಂಡಾಗ ''ಎಲ್ಲೋ ನಿನ್ನಕ್ಕ? ಎಲ್ರಿಗೂ ಸಿಕ್ತಾಳೆ. ನಿನಗಿನ್ನೂ ಸಿಗಲಿಲ್ವ?'' ಎಂದು ಏನೋ ಅರ್ಥವಾಗದ ಮಾತಾಡುತ್ತ ಮುಸಿಮುಸಿ ನಗುವುದ ನೆನೆದು ಅಳುಬಂದ ಹಾಗಾಯಿತು. ಕತ್ತಲಲ್ಲಿ ಎರಡು ಮನುಷ್ಯಾಕೃತಿಗಳು ತನ್ನತ್ತಲೇ ಬರುವುದು ಕಂಡು ತನ್ನಪ್ಪ, ಶಾಂತುಮಾಮ ಎಂದು ತಿಳಿದು, ಸಧ್ಯ! ಅಪ್ಪಾಗಿ ಗೊತ್ತಿಲ್ಲದ 'ಡಿ' ಟೈಪ್ ಮನೆಗಳಲ್ಲಿ ಯಾರ ಮನೆಯಲ್ಲಿ ಅಕ್ಕನ ಠಾವನ್ನು ಹುಡುಕುವುದು ಎಂದು ಗೊಂದಲದಲ್ಲಿದ್ದವನಿಗೆ ಸಮಾಧಾನವಾಯಿತು.

ಧಾವಂತದಲ್ಲಿದ್ದಂತೆ ಕಂಡ ಭಾವಮೈದುನರು ಡಿ-೬೮ರ ಕಟ್ಟಡದ ಮೆಟ್ಟಿಲೇರತೊಡಗಿದರು. ಉದಯನು ಅವರನ್ನು ಹಿಂಬಾಲಿಸಿದ.

''ಮನೆ ಹೆಂಗುಸ್ರುಗಳಾದ್ರು ವಾಸಿ. ನೀನಂತೂ ತೀರಾ ಮೋಸ. ಮನೆಯಿಂದ ಆಚೆ ಬರೋಕೆ ಒದ್ದಾಡ್ತೀಯ! ದಾರೀಲಿ ಹೋಗೋರೆಲ್ಲ ನಮ್‌ಮಕ್ಳ ಬಗ್ಗೆ ನಮ್ಗೆ ಬುದ್ಧಿ ಹೇಳೋ ಹಾಗಾಯ್ತು!...''

ಶಾಂತುಮಾಮ ಒಂದೇ ಸಮನೆ ಗೊಣಗುತ್ತಿದ್ದ. ತಾರಸಿಗೆ ಬಂದು, ಏಣಿ ಹತ್ತಿ ಓವರ್‌ಹೆಡ್ ಟ್ಯಾಂಕ್ ಮೇಲೆ ನಿಂತರೆ ಪಕ್ಕದಲ್ಲೇ ತಗ್ಗಿನಲ್ಲಿದ್ದ ಡಿ-೬೭ ಕ್ವಾರ್ಟರ್ಸಿನ ತಾರಸಿ ಸ್ಪಷ್ಟವಾಗಿ ಕಾಣುತ್ತಿತ್ತು. ಅಲ್ಲಿ ಕಂಡುಬಂದ ದೃಶ್ಯ ಹೇವರಿಕೆ ತರಿಸುವಂತಿತ್ತು. ತೊಟ್ಟ ಉಡುಗೆಯನ್ನು ಅರ್ಧಂಬರ್ಧ ಕಳಚಿದ ಇಬ್ಬರು ಹುಡುಗ ಹುಡುಗಿಯರು ಒಬ್ಬರ ಮೇಲೊಬ್ಬರು ಬಿದ್ದು ಒದ್ದಾಡುತ್ತಿದ್ದರು. ಕೆಳಗೆ ಮಲಗಿದ್ದ ಹುಡುಗಿ ಮಧುಮತಿಯೆಂದು ಗೋಚರಿಸುತ್ತಿತ್ತು. ಆದರೆ ಹುಡುಗನ ಮುಖ ಸ್ಪಷ್ಟವಾಗಿ ಕಾಣಿಸುತ್ತಿರಲಿಲ್ಲ. ಆ ದೃಶ್ಯ ವೈಭೋಗ(?)ದಲ್ಲಿ ಕಣ್ಣರಳಿಸಿ ತಲ್ಲೀನರಾಗಿದ್ದ ಟ್ಯಾಂಕ್‌ನ ಮೇಲಿದ್ದ ಹುಡುಗರಲ್ಲಿ ಒಬ್ಬ ''ಏ! ಮಧು ಅಪ್ಪ ಬಂದವ್ರೆ ಕಣೋ!'' ಅಂತ ಗುರುತಿಸಿದ್ದೇ ತಡ, ಅಷ್ಟು ಹುಡುಗ್ರು ಎದ್ದವೋ ಬಿದ್ದವೋ ಎಂದು ಏಣಿಯಿಂದ ಇಳಿಯಬೇಕೆಂಬ ಜಾಗರೂಕತೆಯನ್ನು ಮರೆತು ಟ್ಯಾಂಕಿನ ಮೇಲಿಂದ ತಾರಸಿಗೆ ಅನಾಮತ್ತಾಗಿ ಜಿಗಿಯತೊಡಗಿದರು.

ಅಷ್ಟರಲ್ಲಿ ಮತ್ತೊಬ್ಬ ''ಹೋ'' ಎಂದು ಕೂಗಿದ. ಎಲ್ಲರೂ ಹಿಂತಿರುಗಿ ನೋಡಿದರೆ ಭುಜಬಲಯ್ಯ ಟ್ಯಾಂಕಿನ ತುದಿಯ ಕಟ್ಟಡದಿಂದ ಕೆಳಕ್ಕೆ ಬಿದ್ದುಬಿಟ್ಟಿದ್ದ.

ಮದುವೆ ಗಂಡು-ಊರಿಗೆ ದೊಡ್ಡ ಸಾಹುಕಾರ, ಮಂಡಲ್ ಪಂಚಾಯತ್ ಅಧ್ಯಕ್ಷ. ಅಪ್ಪ ಅಮ್ಮನಿಲ್ಲದ ತಬ್ಬಲಿಯೆಂಬ ಅನುಕಂಪಕ್ಕಿಂತ ಕಣ್ಣುಕುಕ್ಕುವ ಸೌಂದರ್ಯಕ್ಕೆ ಮಾರುಹೋಗಿ, ಹೆಣ್ಣನ್ನು ಒಪ್ಪಿ ಮದುವೆಯ ದಿನವನ್ನೂ ನಿಶ್ಚಯಗೊಳಿಸಿ ''ಹೆಣ್ಣೊಂದಿಗೆ ಬರೀ ಕೈಯಲ್ಲಿ ನಮ್ಮೂರಿಗೆ ಬನ್ನಿ, ಸಾಕು. ಖರ್ಚೆಲ್ಲ ನಾವೇ ಮಾಡಿ ಮದುವೆ ಮುಗಿಸಿ, ಮನೆ ತುಂಬಿಸಿಕೊಳ್ತೇವೆ'' ಎಂದು ಗಂಡಿನವರು ಅತ್ತ ಹೊರಟರೆ ಶಾಂತುರಾಜು ಒಂದು ದೊಡ್ಡ ಗಂಡಾಂತರ ತಪ್ಪಿದಂತಾಗಿ ನಿಟ್ಟುಸಿರಿಟ್ಟ. ಆದರೆ ಅಲ್ಲಿಯವರೆಗೂ ಗಂಭೀರವಾಗಿ ಕುಳಿತಿದ್ದ ಮಧುಮತಿ ''ನಂಗೆ ಈ ಮದುವೆ ಇಷ್ಟ ಇಲ್ಲ. ಮದುವೆಯಾದರೆ ಮುರುಗನನ್ನೇ ಆಗೋದು'' ಎಂದು ತಗಾದೆ ತೆಗೆದಳು.

ಶಾಂತುರಾಜು ಅಂಥ ಕೋಪವನ್ನು ಅಷ್ಟು ದಿನ ಅದೆಲ್ಲಿ ಬಚ್ಚಿಟ್ಟಿದ್ದನೋ! ''ಕತ್ತೆ ರಂಡೆ, ದೇವರಂಥ ಅಪ್ಪನನ್ನು ನುಂಗಿಬಿಟ್ಟೆ. ಇನ್ನೂ ನಿಂಗೆ ಸಮಾಧಾನ ಇಲ್ವ? ಇನ್ನೂ ಯಾರ್ಯಾರ್‍ನ ಮುಗಿಸಬೇಕು ಅಂತ ಕಾಯ್ತಿದ್ದೀಯೆ?'' ಎಂದು ಅವಳ ತಲೆಗೂದಲನ್ನು ಹಿಡಿದು ತಲೆಯನ್ನು ರುಬ್ಬುಗುಂಡಿನಂತೆ ತಿರುಗಿಸಿ ಬಿಟ್ಟ. ಮಧುಮತಿ ನೋವಾದರೂ ಕೊಸರಾಡಿ ಶಾಂತುರಾಜು ಕೈಯಿಂದ ಬಿಡಿಸಿಕೊಂಡವಳು, ಅಷ್ಟಕ್ಕೆ ನಿಲ್ಲದೆ, ''ಅಪ್ಪ, ಪ್ರೀತಿಸಿ ಮದುವೆಯಾಗಬಹುದಾದರೆ ನಾನೇಕೆ ಆಗಬಾರ್ದು? ಅಪ್ಪ ಕಾಲುಜಾರಿ ಬಿದ್ದು ಸತ್ತದ್ದು ನನ್ನಿಂದಲ್ಲ.'' ಎಂದು ಚೀರಿದಳು.

''ಮುಚ್ಚೇ ಬಾಯಿ! ಪ್ರೀತಿಸಿದವ್ನ ಹೇಲು ಉಚ್ಚೆ ಬಾಚಿರೋ ನಿನ್ನ ಅಪ್ಪನ ಪ್ರೀತಿಗೆ, ನೀನ್ ಮಾಡಿರೋ ಹೊಲಸನ್ನು ಹೋಲಿಸಿಕೊಳ್ತೀಯಾ? ಮದುವೆ ನಿಂಗೆ ಮುರುಗನ ಜೊತೆ ಮಾಡಬೇಕಾ? ಆ ಬೇವರ್ಸಿ ಒಬ್ನೇ ಸಾಕಾ ನಿಂಗೆ? ಜೊತೆಗೆ ಇನ್ನೊಬ್ಬ ಅಧಮ ಇದ್ದಾನಲ್ಲ ಗಣೇಶ ಅವ್ನು ಬೇಡ್ವ? ಇಬ್ರನ್ನೂ ಒಟ್ಟಿಗೆ ಆಗಿಬಿಡು!'' ಎಂದು ಬೆನ್ನಿಗೆ, ಕೆನ್ನೆಗೆ ಕೈ ಸೋಲುವವರೆಗೂ ಬಾರಿಸಿದ.

ಅಮ್ಮನಂಥ ಅಪ್ಪ ಸತ್ತಾಗ ಕೂಡ ಕಣ್ಣೀರು ಹಾಕದೆ ಗುಂಡುಕಲ್ಲಿನಂತೆ ನಿಂತಿದ್ದವಳು ಮಧುಮತಿ. ಆದರೆ ಶಾಂತುಮಾಮನ ಆ ಮಾತಿಗೆ ಬಿಕ್ಕಿಬಿಕ್ಕಿ ರೋದಿಸತೊಡಗಿದಳು.

ಅದೇನು ಮದುವಣಗಿತ್ತಿಯ ಮೆರವಣಿಗೆಯೋ ಅಥವಾ ಎಡೆಯಿಕ್ಕಲು ಹೊರಟ ಸೂತಕದ ಮನೆಯವರ ಹಿಂಡೋ ಅಂತೂ ಮಧುಮತಿಯೊಂದಿಗೆ ಒಂದಷ್ಟು ನೆಂಟರಿಷ್ಟರು ಮೆಟಡೋರಿನಲ್ಲಿ ಲಕ್ಷ್ಮೇಶ್ವರಕ್ಕೆ ಬಂದು ಇಳಿದರು. ಅಲ್ಲಿ ಊರಿಗೆ ಊರೇ ಸಂಭ್ರಮದಲ್ಲಿತ್ತು. ಸುರಸುಂದರಿಹೆಣ್ಣು ಸಿಕ್ಕಳೆಂದೋ ಶ್ರೀಮಂತಿಕೆಯ ತೋರ್ಪಡಿಕೆಯೋ, ಚುನಾವಣೆಯಲ್ಲಿರುವಂತೆ ಎಲ್ಲಿ ನೋಡಿದರಲ್ಲಿ ಗಂಡು ಹೆಣ್ಣು ಹೆಸರಿನ ಬಂಟಿಂಗ್ಸ್‌ಗಳು, ಅವರ ಫೋಟೊ ಹೊತ್ತ ಕಟೌಟು ಬ್ಯಾನರ್‌ಗಳು, ಓಡಾಡುತ್ತಿದ್ದ ಜನರ ಮೈಮೇಲಿನ ಟೀಶರ್ಟು, ತಲೆಯ ಮೇಲಿನ ಕ್ಯಾಪುಗಳಲ್ಲೆಲ್ಲ 'ವಿವಾಹ – ಮಹೇಶ್ ಮತ್ತು ಮಧುಮತಿ' ಎಂಬ ಪ್ರಿಂಟುಗಳು ರಾರಾಜಿಸುತ್ತಿದ್ದವು. ತರಾತುರಿಯ ಮದುವೆಗೆ ಹರಿದಿಲ್ಲದ ಬಣ್ಣದ ಅಂಗಿ ಸಹಿತ ಇಲ್ಲದೆ ಸ್ಕೂಲ್ ಯೂನಿಫಾರಂನಲ್ಲೇ ಬಂದಿದ್ದ ಗುಂಡು ತಲೆಯ ಉದಯನನ್ನು ಎಲ್ಲರೂ ಅಚ್ಚರಿಯಿಂದ ನೋಡಿದ್ದೇ ನೋಡಿದ್ದು.

ಮದುವೆಯ ಹೆಣ್ಣನ್ನು ಒಳಗೆ ಕರೆದೊಯ್ದ ಗಂಡಿನ ಮನೆಯವರು ಜೊತೆಗೆ ಬಂದಿದ್ದವರನ್ನು ಕ್ಯಾರೇ ಎನ್ನಲಿಲ್ಲ. ಶಾಂತರಾಜುವಿಗೆ ಅವರ ಶ್ರೀಮಂತಿಕೆಯ ದೌಲತ್ತಿನಲ್ಲಿ ಶಿಷ್ಟಾಚಾರವನ್ನೇ ಮರೆತದ್ದಕ್ಕೆ ಮನಸ್ಸಿಗೆ ಘಾಸಿಯಾದರೂ, ''ಏನೋ ಜಾಸ್ತಿ ಹಠ ಮಾಡದೆ ಮಧು ಮದುವೆಗೆ ಒಪ್ಪಿದಳು. ಅವಳ ಹೆತ್ತವರ ಪುಣ್ಯ. ಒಳ್ಳೇ ಮನೆ ಸಿಕ್ಕಿದೆ. ಹಳೆಯದನ್ನೆಲ್ಲ ಮರೆತು, ಹೊಸ ಬದುಕಿಗೆ ಕಾಲಿರಿಸಿದವಳು ಹೋದ ಮನೆಯಲ್ಲಿ ನ್ಯಾಯವಾಗಿ ಬಾಳಿ ಇದ್ದ ಮನೆಗೆ ಒಳ್ಳೆ ಹೆಸರು ತರದಿದ್ದರೂ ಕೆಟ್ಟಹೆಸರನ್ನು ತರದಿರಲಿ'' ಎಂದು ಮನದಲ್ಲಿಯೇ ಆಶಿಸಿದರು. ಮೂರು ದಿನಗಳು ವಿಜೃಂಭಣೆಯಿಂದ ನಡೆದ ಮದುವೆಯ ಗಲಾಟೆಯಲ್ಲಿ ಉದಯ ಅಪ್ಪನ ನೆನಪಲ್ಲಿ, ಅಕ್ಕನ ಮೇಲಿನ ಸಿಟ್ಟಿನಲ್ಲಿ ಮೂಲೆ ಅರಸಿ ಕೂಡುತ್ತಿದ್ದವನು ತನಗೂ ಅದಕ್ಕೂ ಸಂಬಂಧವಿಲ್ಲವೆಂಬಂತೆ ಅತ್ತಿತ್ತ ಕದಲುತ್ತಿರಲಿಲ್ಲ. ಆ ದಿನಗಳಲ್ಲಿ ಅವನಿಗೆ ಎರಡು ವಿಷಯಗಳು ಸೋಜಿಗವಾಗಿ ಕಂಡವು.

ರಸ್ತೆಯಲ್ಲೇ ಹಾಕಿದ್ದ ವೈಭವದ ಮದುವೆ ಮಂಟಪದಲ್ಲಿ ಗಂಡು ಹೆಣ್ಣು ಕೂಡುವ ಸಿಂಹಾಸನದಂಥ ಕುರ್ಚಿಗಳ ಮೇಲೆ ತೂಗುಬಿಟ್ಟಿದ್ದ ಎರಡಡಿ ಬಣ್ಣದ ಕೋಲು, ಅದಕ್ಕೊಂದು ಚಿನ್ನದ ಬಣ್ಣದ ಚಿತ್ತಾರದ ಕಮಾನು. ಕೋಲಿನ ಮೇಲೆ ಎರಡು ಹಾಲು ಬಣ್ಣದ ಮುದ್ದಾದ ಪಾರಿವಾಳಗಳು. ಮದುವೆ ಮುಗಿವವರೆಗೂ ಒಂದಕ್ಕೊಂದು ಪಿಸುಗುಡುತ್ತ ಅವು ಎಲ್ಲಿಗೂ ಹಾರದೆ ಹಾಗೆ ಅಲ್ಲೇ ಕುಳಿತಿದ್ದವು. ಉದಯ ಅವನ್ನೇ ತದೇಕಚಿತ್ತದಿಂದ ನೋಡುತ್ತ, ಕಾಳಿಗಾದರೂ ಅವು ಹಾರಬೇಕಲ್ಲ? ಆ ಪಾರಿವಾಳ ಗಳಿಗೆ ಅಷ್ಟು ಸಹನೆಯಿಂದ ಕೂತಿರುವಂತೆ ಅದೆಂಥ ತರಬೇತಿ ಕೊಟ್ಟಿರಬೇಕೆಂದು ಬಿಟ್ಟಬಾಯಿ ಬಿಟ್ಟ ಹಾಗೆ ನೋಡುತ್ತ ತನ್ಮಯನಾಗಿದ್ದ.

ಮೂರು ದಿನಗಳು ಮೂರು ವರ್ಷಗಳಂತೆ ಕಳೆದು ಮದುವೆಯೆಂಬ ಸಂತೆಯಿಂದ ವಾಪಸ್ಸು ಬರುವಾಗಷ್ಟೆ ಉದಯ ಅಕ್ಕನ ಮುಖವನ್ನು ಸರಿಯಾಗಿ ನೋಡಿದ್ದ. ಅದೆಂಥ ಕಲ್ಲುಹೃದಯ ಅವಳದು. ಅಪ್ಪ ಸತ್ತಾಗಲೂ ಅಳಲಿಲ್ಲ. ಈಗ ಎಲ್ಲರೂ ಅವಳನ್ನು ಗೊತ್ತಿಲ್ಲದ ಜಾಗದಲ್ಲಿ ಒಬ್ಬಳನ್ನೇ ಬಿಟ್ಟು ಹೊರಡುವಾಗಲೂ ಎರಡು ಹನಿ ಕಣ್ಣೀರು ಅವಳ ಕಣ್ಣಲ್ಲಿ ಕಾಣಲಿಲ್ಲ.

ನಸುಮುಂಜಾವಿನಲ್ಲಿ ಮೆಟಡೋರ್ ಸಿ-೧೨೯ ಕ್ವಾರ್ಟರ್ಸ್‌ಗೆ ಬಂದಾಗ ಕಟ್ಟಡದ ಸುತ್ತ ಜನರು ಜಮಾಯಿಸಿದ್ದರು. ಮಹಡಿಯಲ್ಲಿ ಮನೆಗೆ ಬಂದರೆ ಬೀಗ ಒಡೆದು ಯಾರೋ ಒಳನುಗ್ಗಿದ್ದರು. ರೂಮಿನ ಛಾವಣಿಯ ಫ್ಯಾನ್‌ನಿಂದ ಮುರುಗನ್‌ನ



ದೇಹ ನೇತಾಡುತ್ತಿತ್ತು. ಕೈಯಲ್ಲಿದ್ದ ಪೇಪರ್ ತುಂಡಿನಲ್ಲಿ, ''ಮಧು, ನೀನಿಲ್ಲದೆ ನಾನು ಬದುಕಲು ಸಾಧ್ಯವಿಲ್ಲ, ಎಲ್ಲಿದ್ದರೂ ನೀನು ಚೆನ್ನಾಗಿರು'' ಎಂದು ಬರೆದಿತ್ತು.

ಯೌವನದ ಹುಚ್ಚುಹೊಳೆಯಲ್ಲಿ ಕೊಚ್ಚಿಹೋದ ಒಂದು ಪುಟ್ಟ ಸಂಸಾರ, ಎರಡು ಜೀವಗಳ ನೆನಪುಗಳು ಒಂದಾದ ಮೇಲೊಂದರಂತೆ ಅಪ್ಪಳಿಸಿ, ಬಸ್ಸು ಗಕ್ಕನೆ ನಿಂತು ಕಂಡಕ್ಟರ್ ಯಾರ್ರೀ, ಲಕ್ಷ್ಮೇಶ್ವರ ಬಂದ್ರೆ ಹೇಳಿ ಅಂದವ್ರು?... ಇಳಿರ್ರೀ ಎಂದು ಕೂಗಿದಾಗಲೇ ಅವುಗಳ ದಾಳಿ ನಿಂತವು.

ಉದಯನಿಗೆ ಒಂದೇ ಅಳುಕು. ಹತ್ತು ವರುಷಗಳ ನಂತರ ಮಾವನ ಮಾತಿನಂತೆ ಅಕ್ಕನನ್ನು ನೋಡಲು ಬಂದವನು. ಅವಳಿಗೆ ಹೇಗೆ ಮುಖ ತೋರಿಸಬೇಕೆಂಬ ಚಿಂತೆಗಿಂತ, ಅಕ್ಕನ ಗಂಡ, ''ಅಕ್ಕನ ನೆನಪು ಇಷ್ಟು ವರ್ಷಗಳ ನಂತರ ಬಂತೋ ?'' ಎಂದು ಕೇಳಿದರೆ ಏನು ಉತ್ತರಿಸುವುದೆಂದು ಹೊಳೆಯಲಿಲ್ಲ.

ಹೊರಗಡೆ ಜಗುಲಿಯ ಮೇಲೆ ಹೆಣ್ಣುಮಗುವಿಗೆ ಜಡೆಹಾಕುತ್ತ ಕೂತ ಹೆಂಗಸಿಗೆ ''ಮಧುಮತಿಯವರನ್ನ ನೋಡಬೇಕು, ಸ್ವಲ್ಪ ಕರಿತೀರಾ'' ಎಂದು ಕೇಳಿದಾಗ, ಆಕೆಯ ಹಣೆಯ ಗೆರೆಗಳಲ್ಲಿ ಯಾರೆಂಬ ಪ್ರಶ್ನೆ ಮೂಡಿ ಹುಡುಗಿಗೆ ''ದೊಡ್ಡಮ್ಮನನ್ನ ಕರೆದುಕೊಂಡು ಬಾ'' ಎಂದು ಕಳಿಸಿದಳು.

ಪೀಚು ದೇಹ, ಗುಳಿ ಬಿದ್ದ ಕಣ್ಣುಗಳು, ದಣಿದ ಮುಖ ಹೊತ್ತ ಹೆಂಗಸೊಂದು ಸೆರಗಿನಿಂದ ಮುಖ, ಕೈಗಳ ಬೆವರು ಒರೆಸಿಕೊಳ್ಳುತ್ತ ಉದಯನ ಮುಂದೆ ನಿಂತಿತು. ''ಇವಳೇನಾ ನನ್ನಕ್ಕ ?'' ಉದಯನಿಗೆ ಗುರುತು ಸಿಗಲಿಲ್ಲ.

''ಯಾಕೋ ಹಂಗ್ ನೋಡ್ತಿದ್ದೀಯ, ಉದಿ ? ನನ್ ಗುರ್ತು ಸಿಗಲಿಲ್ವ ? ಹೇಗಿದ್ದೀಯ ? ಶಾಂತುಮಾಮ ಹೇಗಿದ್ದಾರೆ ? ಕೊನೆಗೂ ಅವ್ರು ಬ್ರಹ್ಮಚಾರಿಯಾಗಿರೋ ಹಠ ಬಿಟ್ಟಿಲ್ವ ?...''

ಸಂತೋಷ, ಉದ್ವೇಗದಿಂದ ಪ್ರಶ್ನೆಗಳ ಸುರಿಮಳೆಯಾಗುತ್ತಿದ್ದರೆ ಉದಯ ಗರ ಬಡಿದವನಂತೆ ನಿಂತುಬಿಟ್ಟಿದ್ದ. ಬಿಂಕ ಬಿನ್ನಾಣದ, ಕೆಟ್ಟ ಧೈರ್ಯದ, ಹಠತೊಟ್ಟ ಆ ಅಕ್ಕ ಎಲ್ಲಿ? ಸೊರಗಿದ ದೇಹ, ಇರುವುದಕ್ಕಿಂತ ಹೆಚ್ಚು ವಯಸ್ಸಾದಂತೆ ಕಾಣುವ, ಕನಿಕರ ಬೇಡುವ ಕಣ್ಗಳ ಈ ಅಕ್ಕ ಎಲ್ಲಿ? ಎದೆ ಹಿಂಡಿದಂತಾಗಿ ಬಾಯಿಂದ ಮಾತೇ ಹೊರಡಲಿಲ್ಲ.

''ಅಕ್ಕ, ನೀನೇನು ಹೀಗಾಗಿದ್ದೀಯಾ ?''

''ನನ್ಗೇನಾಗಿದೆ, ರಾಣಿ ಥರ ಆರಾಮ್ ಇದ್ದೀನಿ. ನಾನೇ ಯಜಮಾನಿ, ಅದ್ಕೆ ಸ್ವಲ್ಪ ಕೆಲ್ಸ ಜಾಸ್ತಿ, ಅಷ್ಟೆ'', ಎಂದು ಸೊಂಟದಲ್ಲಿ ಬೆಳ್ಳಿ ಚಿಲ್ಲೆಗೆ ಸಿಗಿಸಿದ್ದ ಬೀಗದಕೈ ಗೊಂಚಲನ್ನು ತೋರಿಸಿದಳು. ಅಷ್ಟರಲ್ಲಿ ಗಂಡಾಳು ಒಬ್ಬ ಬಂದು ''ದೊಡ್ಡಮ್ನೋರೆ, ಗಾಡಿ ರೆಡಿ ಇದೆ. ನೀವೊಮ್ಮೆ ಮೂಟೆಗಳ್ನ ಲೆಕ್ಕ ಹಾಕ್ಬಿಟ್ರೆ ಮಂಡಿಗೆ ಹೋಗಿ ದೇಸಾಯಿ ದುಖಾನಿಗೆ ಹಾಕಿ ಬರ್ತೀವಿ'', ಎಂದು ನಡು ಬಗ್ಗಿಸಿ ನುಡಿದನು.

''ನೀನ್ ನಡಿ. ಹಿಂದೇನೇ ಬರ್ತೀನಿ. ಕಮಲಿ, ನಿನಗೆಷ್ಟು ಸರ್ತಿ ಹೇಳೋದು. ಪುಟ್ಟಿಗೆ ಒಂದೇ ಜಡೆ ಹಾಕ್ಬೇಡಾಂತ! ಅವಳೇನು ದೊಡ್ ಹೆಂಗ್ಸೇ? ಆಯ್ತು ಇವನಿಗೆ ಮಹಡಿ ರೂಮ್ ತೋರ್ಸಿ, ಉಪಹಾರದ ವ್ಯವಸ್ಥೆ ಮಾಡು. ಉದಿ, ನೀನು ಸ್ವಲ್ಪ ರೆಸ್ಟ್ ತಗೋ. ನಿಮ್ ಭಾವ ಬೇರೆ ಊರಲ್ಲಿಲ್ಲ. ವ್ಯಾಪಾರದ ಲೆಕ್ಕಾಚಾರ ಹೆಚ್ಚುಕಮ್ಮಿಯಾದರೆ ಆಕಾಶ ಭೂಮಿ ಒಂದ್ ಮಾಡ್ಬಿಡ್ತಾರೆ!'' ಎಂದು ಕಣ್ಣಂಚಿನಲ್ಲಿ ನೀರು ತುಂಬಿಕೊಂಡು ಹಾಕಿದ್ದ ಜಡೆಯನ್ನು ಬಿಚ್ಚಿ ಅವಸರದಲ್ಲಿ ಎರಡು ಜಡೆ ಹೆಣೆದು ಗಂಡಾಳಿನ ಹಿಂದೆ ನಡೆದಾಗ, ಉದಯನಿಗೆ ಅಕ್ಕನ ಬೇಗುದಿ ಅರಿವಿಗೆ ಬಾರದಿರಲಿಲ್ಲ.

ಸ್ನಾನ ಮಾಡಿ ತಿಂಡಿ ತಿಂದು ಮಹಡಿಯ ಕಿಟಕಿಯಲ್ಲಿ ನೋಡುತ್ತ ಕುಳಿತಾಗ, ಇಡೀ ಮನೆ ತುಂಬ ಮೂಟೆಗಳನ್ನು ಹೊತ್ತು ತಂದು ಒಟ್ಟುವ, ಹೊರಗೆ ಕೊಂಡೊಯ್ಯುವ ಗಂಡಾಳುಗಳು, ದವಸಧಾನ್ಯಗಳನ್ನು ಕೇರುತ್ತ ಆರಿಸುತ್ತ ಕೂತ ಹೆಣ್ಣಾಳುಗಳು ಇರುವೆಗಳಂತೆ ಕೆಲಸ ಮಾಡುತ್ತಿದ್ದರೆ ಮನೆ ಮನೆಯಂತಿರದೆ ಕಾರ್ಖಾನೆಯಂತಿತ್ತು. ಅವರುಗಳ ಮಧ್ಯೆ ಮಧುಮತಿ ಅದು ಇದು ನಿರ್ದೇಶಿಸುತ್ತ ಅತ್ತಿಂದಿತ್ತ ಓಡಾಡುತ್ತಿದ್ದಳು. ಬದುಕು ಬುದ್ಧಿ ಕಲಿಸಿತೋ ಅಥವಾ ವ್ಯವಹಾರಸ್ಥ ಭಾವ ಜವಾಬ್ದಾರಿ ತಿಳಿಸಿದನೋ? ಒಟ್ಟಿನಲ್ಲಿ ಮನೆಗೆಲಸ, ಅಂಗಡಿ ಕೆಲಸ ಎಲ್ಲವನ್ನು ಮೈಮೇಲೆ ಹಾಕಿಕೊಂಡಂತೆ ಚಡಪಡಿಸುತ್ತಿದ್ದಳು.

ಸೂರ್ಯ ನೆತ್ತಿಗೇರಿದರೂ ಅಕ್ಕ ಬಳಿ ಸಾರದಿರುವುದು ಉದಯನಿಗೆ ಕಸಿವಿಸಿಯಾಯಿತು. ಇಷ್ಟು ವರುಷಗಳು ಕಳೆದಾದ ಮೇಲೆ ತಮ್ಮ ಬಂದಿದ್ದಾನೆಂಬ ಅಸಮಾಧಾನವೋ, ಉದಾಸೀನವೋ ? ಅಥವಾ ಸಾಹುಕಾರನ ಹೆಂಡತಿಯ ಬಳಿ ಸಹಾಯ ಕೇಳಲು

ಬಂದೆನೆಂದು ತಿಳಿದಳೋ? ರೂಮಿನಾಚೆ ಹೋಗಲು ಮುಜುಗರವೆನಿಸಿ ಕುಳಿತಲ್ಲಿಯೇ ಮಿಸುಕಾಡಿದ. ಬಂದು ನೋಡಿದ ಶಾಸ್ತ್ರ ಮುಗಿಯಿತು. ವಾಪಸ್ಸು ಹೊರಟುಹೋಗೋಣವೆಂದರೆ ಅವಳಿರುವ ಹುಟ್ಟನ್ನು ನೆನೆದರೆ ಹೊಟ್ಟೆಗೆ ಬೆಂಕಿಬಿದ್ದು, ಅವಳ ಸ್ಥಿತಿಯನ್ನು ತಿಳಿಯದೆ ಹೋಗಲು ಮನಸ್ಸು ಒಪ್ಪಲಿಲ್ಲ.

ಬಾಗಿಲು ದೂಡಿಕೊಂಡು ಬಂದ ಪುಟ್ಟಿ, ಹೋಳು ಮಾಡಿದ ಮಾವಿನಹಣ್ಣಿನ ಬಟ್ಟಲನ್ನು, ಫೋಟೋ ಆಲ್ಬಮ್ಮೊಂದನ್ನು ಕೈಗೆ ಇಟ್ಟು, ''ಫೋಟೋ ನೋಡ್ತಿರ್ಬೇಕಂತೆ. ದೊಡ್ಡಮ್ಮ ಕೆಲ್ಸ ಮುಗ್ಸಿ ಬರ್ತಾರಂತೆ'' ಅಂದವಳನ್ನು ಅಕ್ಕನ ಮಗಳೆಂದು ಭಾವಿಸಿ, ''ಮಧುಮತಿಯನ್ನು ದೊಡ್ಡಮ್ಮ ಅಂತ ಯಾಕೆ ಕರೀತೀಯ ?'' ಎಂದು ಕೇಳಿದರೆ, ''ಎಲ್ರೂ ಅವರನ್ನು ಹಾಗೇ ಕರೆಯೋದು'' ಅಂತೇಳಿ ರೂಮಿನಾಚೆ ಓಡಿದ್ದಳು. ಅಕ್ಕನ ಮದುವೆಯ ಫೋಟೋಗಳನ್ನು ನೋಡುತ್ತ, ಕುಳಿತಲ್ಲಿಯೇ ಕುಳಿತ ಪಾರಿವಾಳಗಳ ಜೋಡಿ ಮನಸೆಳೆಯಿತು. ಆ ಫೋಟೊ ಹಿಂದೆಯೇ ಮತ್ತೊಂದು ಫೋಟೊ ಇದ್ದಂತೆ ಕಂಡು, ಅದನ್ನು ತೆಗೆದು ನೋಡಿ ಅವಾಕ್ಕಾದ.

ಅಷ್ಟರಲ್ಲಿ ಅಲ್ಲಿಗೆ ಬಂದ ಮಧುಮತಿ ''ಬೇಜಾರು ಮಾಡ್ಕೊಬೇಡ್ವೊ. ಸರಿಯಾಗಿ ಮಾತಾಡ್ಸೋದಿಕ್ಕೂ ಪುರುಸೊತ್ತು ಸಿಗ್ತಿಲ್ಲ'' ''ಪರವಾಗಿಲ್ಲ ಬಿಡು. ಮದುವೆ ಫೋಟೋಗಳ್ನ ನೋಡ್ತಿದ್ದೆ. ಅಕ್ಕ, ಈ ಪಾರಿವಾಳದ ಜೋಡಿ ನೋಡು. ಎಷ್ಟು ಶಿಸ್ತಿನಿಂದ ಕೂತಿವೆ. ಹ್ಯಾಗೆ ಟ್ರೈನಿಂಗ್ ಕೊಟ್ಟಿರ್ತಾರೆ ?''

ಫಕ್ಕನೆ ನಕ್ಕವಳು, ಸೋತ ಮುಖದಲ್ಲಿ ಗೆಲುವನ್ನು ತೋರುತ್ತ ''ಅದೇನು ಮಹಾ ತರಬೇತಿ ಅಲ್ಲ ಕಣೋ. ಅವುಗಳು ಹಾರದಂತೆ ರೆಕ್ಕೆಗಳ್ನ ಕತ್ತರಿಸಿರ್ತಾರೆ, ಅಷ್ಟೇ!'' ಅಂದಳು.

ತನ್ನ ಕಲ್ಪನೆಗೆ ವಿರುದ್ಧವಾಗಿ, ಪಾರಿವಾಳಗಳ ರೆಕ್ಕೆ ಮುರಿದ ವಿಷಯ ತಿಳಿದು ಉದಯ ಖಿನ್ನನಾದ. ಪಾಪ! ಎನ್ನಿಸಿತು.

ಅಯ್ಯೋ! ಮನುಷ್ಯ ಎಷ್ಟು ಕ್ರೂರಿ ಅಲ್ವ? ತನ್ನ ಸುಖಸಂತೋಷಕ್ಕಾಗಿ ಮೂಕಹಕ್ಕಿಗಳನ್ನು ಹಿಂಸಿಸುವುದಕ್ಕೂ ಹೇಸುವುದಿಲ್ಲ! ಎಂದುಕೊಂಡ. ''ಈ ಫೋಟೊ ನೋಡು'' ಎನ್ನುತ್ತ ಅದರ ಹಿಂದೆ ಸಿಕ್ಕ ಫೋಟೊವನ್ನು ತೋರಿಸಿದ.

ನಡುಗುವ ಕೈಲಿ ಫೋಟೊ ಹಿಡಿದ ಮಧುಮತಿಯ ಮುಖದಲ್ಲಿ ನಗು ಮಾಯವಾಗಿ, ಉಮ್ಮಳಿಸಿ ಬರುವ ದುಃಖ ತಾಳಲಾರದೆ ಭೋರೆಂದು ಉದಯನ ತೊಡೆಮೇಲೆ ಮುಖವಿರಿಸಿ ಅಳತೊಡಗಿದಳು.

ಸುರಸುಂದರಿಯನ್ನು ಮದುವೆಯಾದ ಸಿರಿವಂತ ಗಂಡನೊಡನೆ ಮುರುಗನ್ ನೆನಪಲ್ಲೇ ಹೊಂದಿಕೊಳ್ಳುವುದು ಮಧುಮತಿಗೆ ಸಹ್ಯವಾಗಿರಲಿಲ್ಲ. ಆದರೆ ದಾರಿ ಬೇರೆ ಇರಲಿಲ್ಲ. ಅವಳ ಪೂರ್ವಾಪರ ತಿಳಿಯದ ಗಂಡನೆಂಬುವನು ರತಿಯಂತಹ ಹೆಂಡತಿ ದಕ್ಕಿದಳೆಂದು ಬೀಗುತ್ತ ಸಂಭ್ರಮದಲ್ಲಿದ್ದರೆ, ಮಧುಮತಿ ಅದೊಂದು ಅಸಹಾಯಕ ಹೆಣ್ಣಿನ ಮನಸ್ಸಿನ ಮೇಲೆ ಜರುಗಿದ ದೌರ್ಜನ್ಯ, ದೇಹದ ಮೇಲಿನ ಅತ್ಯಾಚಾರವೆಂದು ಭಾವಿಸಿದಳು. ಗರ್ಭ ಧರಿಸಿದ್ದ ಕಳೆದ ದಿನಗಳ ಗುಟ್ಟುಗಳು ಪೊರೆಕಳೆದು ಹೊರಬಂದುದು ಮಧುಮತಿ ಗರ್ಭಿಣಿಯೆಂದು ತಿಳಿದಾಗ, ಅದೂ ಮದುವೆಯಾದ ತಿಂಗಳೊಳಗೆ, ಗೆಳೆಯನ ಹೆಂಡತಿ ವೈದ್ಯೆ ''ಈಕೆ ಮೂರು ತಿಂಗಳ ಗರ್ಭಿಣಿ !'' ಎಂದು ಘೋಷಿಸಿದಾಗ! ಮರ್ಮಾಘಾತವಾಗಿ ತನ್ನದಲ್ಲದ ಪಿಂಡ ಹೊತ್ತ ಹೆಂಡತಿಯ ಬಗ್ಗೆ ನಖಶಿಖಾಂತ ಉರಿದುಹೋದ ಗಂಡ. ತನಗಾದ ಮೋಸ, ಕ್ರೋಧದ ಹೆಡೆಯಾಡಿಸಿ ಮಧುಮತಿಯ ಗರ್ಭಪಾತ ಮಾಡಿಸಿದ. ಅಷ್ಟಕ್ಕೆ ತಣ್ಣಗಾಗದೆ ಮುಂದೆ ಅವಳೆಂದೂ ಮಕ್ಕಳನ್ನು ಹೆರದಂತೆ ಕರುಳಬಳ್ಳಿಯನ್ನೇ ಕತ್ತರಿಸಲು ವೈದ್ಯರಿಗೆ ಆಜ್ಞಾಪಿಸಿದ.

ಮುಂದುವರಿದ ಶಿಕ್ಷೆಯೆಂಬಂತೆ ಮೊದಲೇ ಸಂಬಂಧವಿತ್ತೋ ಏನೋ? ಮನೆಗೆಲಸಕ್ಕಿದ್ದ ಕಮಲಿಯನ್ನು ರಾಜಾರೋಷವಾಗಿ ಮನೆಯಲ್ಲೇ ತಂದಿಟ್ಟುಕೊಂಡ.

ಅಂತೆ ತನ್ನ ಗಂಡ, ಕಮಲಿ ಮತ್ತು ಅವಳ ಕಂಕುಳಲ್ಲಿದ್ದ ಪುಟ್ಟಿ ಒಟ್ಟಿಗೆ ನಿಂತು ತೆಗೆಸಿಕೊಂಡಿದ್ದ ಫೋಟೊ ಅದಾಗಿತ್ತು.

''ಇಂಥ ರಾಕ್ಷಸನೊಂದಿಗೆ ನೀ ಹ್ಯಾಗೆ ಇದ್ದೀಯ ? ನನಗೆ, ಶಾಂತುಮಾಮನಿಗೆ ಏಕೆ ತಿಳಿಸಲಿಲ್ಲ'' ಎಂದು ಪ್ರಶ್ನಿಸುವಾಗ ಉದಯನ ಪಾಪಪ್ರಜ್ಞೆ, ''ಈ ಹೊತ್ತಲ್ಲಿ ಹೇಳುವುದು ಸುಲಭ! ಆ ಪರಿಸ್ಥಿತಿಯಲ್ಲಿ ನಿಜಕ್ಕೂ ನೀವುಗಳು ಅವಳನ್ನು ನಿಮ್ಮ ತೆಕ್ಕೆಗೆ ತಗೊಂಡು ಕಾಪಾಡುತ್ತಿದ್ದಿರೇ ?'' ಎಂದು ಅವನಿಗೆ ಕೇಳದೇ ಇರಲಿಲ್ಲ.

''ಯಾವ ಮುಖ ಹೊತ್ಕೊಂಡ್ ನಿಮ್ ಬಳಿ ಬರೋದಿಕ್ಕೆ ಆಗಿತ್ತು! ಒಬ್ಬಂಟಿ ನನ್ನ, ನೀವ್ ಇಲ್ಲಿ ಬಿಟ್ಟು ಹೋದಾಗ ಮುರುಗನ್ನಿಂದ ನನ್ನ ಬೇರೆ ಮಾಡಿದರೆಂಬ ಸಿಟ್ಟಿತ್ತೇ ಹೊರ್ತು ಮುಂದೆ ಬರುವ ಸಮಸ್ಯೆಗಳ ಕಲ್ಪನೆಗಳು ಇರ್ಲಿಲ್ಲ.''

''ಅಕ್ಕ, ನಿಜ ಹೇಳ್ತಿನಿ. ಮಾಮನ ಬಲವಂತದಿಂದ ನೆಪಮಾತ್ರಕ್ಕೆ ನಿನ್ನ ನೋಡ್ಕೊಂಡು ಹೋಗೋಣಾಂತ ಬಂದೆ. ಅಪ್ಪ ಹೋದಾಗಿಂದ ನಿನ್ ಮೇಲೆ ಸಿಟ್ಟಿತ್ತು. ಈಗ ಈ ಮೊದ್ಲೇ ನಿನ್ ನೋಡೋದಕ್ಕೆ ಬರ್ದೆ ತಪ್ಪು ಮಾಡ್ದ್ನಿ ಅಂತ ಅನಿಸ್ತಿದೆ. ಇನ್ನು ಸಾಕು ಈ ನರಕ. ನಡೀ ಹೋಗೋಣ. ಇನ್ಮೇಲೆ ನಂಜೊತೆನೇ ಇರು.''

''ಇಲ್ಲಾ ಉದಿ! ಅದೆಲ್ಲ ಮುಗಿದುಹೋದ ಕತೆ. ಈಗ ನಂಗೆ ಅದರ ಯಾವ ನೆನಪೂ ಇಲ್ಲ! ನಾನಿಲ್ಲೇ ಚೆನ್ನಾಗಿದ್ದೇನೆ.''

ಮದುವೆಯಾದ ಹುಡುಗಿ ಮಾಡಿದ ಅವಾಂತರದಲ್ಲಿ ಯಾವುದೇ ಗಂಡು ನಡೆದುಕೊಳ್ಳೋ ರೀತಿಯದು. ಸಿರಿತನದ ಮದ ಅವರನ್ನು ಸ್ವಲ್ಪ ಜಾಸ್ತಿಯೇ ಕಠಿಣವಾಗಿ ನಡೆದುಕೊಳ್ಳುವಂತೆ ಮಾಡಿತು. ಆದರೆ, ತನ್ನ ಗಂಡ ಅಂತರಂಗದಲ್ಲಿ ಕ್ರೂರಿಯಲ್ಲ. ಬರಬರುತ್ತ ಅವರು ಗೆಳೆಯನಂತೆ ವರ್ತಿಸಿದರು. ಓದು ಮುಂದುವರಿಸುವಂತೆ ಸ್ಕೂಲಿಗೆ ಸೇರಿಸಿದರು. ಮದುವೆಯಾದವಳು ಸೀರೆ ಮಡಿಚಿಟ್ಟು ಯೂನಿಫಾರಂ ತೊಟ್ಟು ಸ್ಕೂಲಿಗೆ ಹೋಗಿ ಮತ್ತೆ ಬಂದು ಉಟ್ಕೊತ್ತಿದ್ದೆ. ಎಸ್ಸೆಸ್ಸೆಲ್ಸಿ ಮುಗಿಸಿ ಮತ್ತೆ ಕಾಲೇಜಿಗೆ ಹೋಗುವುದಿಲ್ಲ ಎಂದವಳಿಗೆ, ಬಿಡದೆ ಹೊರಗೇ ಪರೀಕ್ಷೆ ಕಟ್ಟಿಸಿ ಡಿಗ್ರಿ ಮುಗಿಸಲು ಪ್ರೇರೇಪಿಸಿದರು.

ಈ ಮನೆಯೇ ತನ್ನ ಜಗತ್ತು. ಇಲ್ಲಿ ತನಗೆ ಜವಾಬ್ದಾರಿಯ ಜೊತೆಗೆ ಗೌರವ, ಮರ್ಯಾದೆ ಇದೆ. ತಾನೆಲ್ಲೂ ಬರುವುದಿಲ್ಲ ಎನ್ನುವ ಮಾತು, ಅಕ್ಕನ ಗಂಡ ತನ್ನ ವ್ಯವಹಾರಕ್ಕೆ ಅನುಕೂಲವಾಗಲೆಂದೇ ಓದಿಸಿದ್ದಾನಷ್ಟೇ! ಮಧುಮತಿ ಮಾತಿನಿಂದ ಉದಯನಿಗೆ ಸಮಾಧಾನ ಆಗಲಿಲ್ಲ. ಹಾಗಂತ ಅಲ್ಲಿ ಇರಲು ಮನಸ್ಸಾಗಲಿಲ್ಲ. ಕೈಲಿ ಸೂಟ್‌ಕೇಸನ್ನು ಹಿಡಿದವನು ''ಸಾಧ್ಯವಾದರೆ ಮನೆಗೆ ಬಾ'' ಎಂದು ಹೊರಟುನಿಂತ.

ಮುಂಬಾಗಿಲ ಬಳಿ ಬಂದಾಗ ಮಧುಮತಿ, ''ನನಗೀಗ ಯಾವುದೇ ಚಿಂತೆಯಿಲ್ಲ. ಆದ್ರೆ ಒಂದ್ ವಿಷ್ಯ ಮಾತ್ರ ನನ್ನ ಯಾವಾಗ್ಲೂ ಕಾಡುತ್ತೆ.''

''ನಿನ್ನದೇ ಆದ ಮಗು ಇಲ್ಲ ಅಂತಾನ ?''

''ಖಂಡಿತ ಇಲ್ಲ. ನಂಗೆ ಪುಟ್ಟಿನೇ ಮಗಳು. ಆದ್ರೆ ಅಪ್ಪ ಸತ್ತಾಗ ನೀವೇನ್ ನೋಡುದ್ರೋ, ಅದೇ ಕಾರಣಕ್ಕೆ ನನ್ನನ್ನಿಲ್ಲಿ ತಂದುಬಿಟ್ಟಿರೋ ಅದು ಸತ್ಯವಲ್ಲ. ಸಲಿಗೆಯಿಂದ ಜೊತೆಗಿದ್ದ ಮುರುಗನ್‌ನ ಬೆಸ್ಟ್ ಫ್ರೆಂಡ್ ಗಣೇಶ, ಮುರುಗನನ್ನು ಭೇಟಿಯಾಗುವ ಜಾಗದ ಮಾಹಿತಿ ಕೊಡುತ್ತಿದ್ದ. ಆದ್ರೆ ಅವನ ಮನಸ್ಸಿನಲ್ಲಿ ಏನಿತ್ತೋ ? ಅದು ನನ್ನ ಊಹೆಗೂ ಮೀರಿದ್ದು. ಆ ದಿನ ಮುರುಗನ್ ಬರಹೇಳಿದನೆಂದು ಸುಳ್ಳುಹೇಳಿ ಟೆರೇಸಿಗೆ ಕರೆದವನು ನನ್ನ ಮೈಮೇಲೆ ಬಿದ್ದು ಅತ್ಯಾಚಾರ ಮಾಡುತ್ತಿದ್ದ. ನನ್ನದು ಅರಣ್ಯರೋದನವಾಗಿತ್ತು. ನಿಮಗೆ ಮುರುಗನ್ನ ಸಂಬಂಧದ ಬಗ್ಗೆಯಷ್ಟೇ ಕಾಳಜಿ ಇದ್ದು, ನನಗಾದ ಅವಮಾನ ತಿಳಿಯಲಿಲ್ಲ. ನಾನು ಹೇಳಿಕೊಳ್ಳಲೂ ಬಿಡಲಿಲ್ಲ. ಆ ಘಟನೆ ನೆನಪಾದಾಗೆಲ್ಲ ನನ್ನನ್ನು ಕಿತ್ತು ತಿನ್ನುತ್ತದೆ.''

ಅಕ್ಕ ತಮ್ಮ ಬಾಳಲ್ಲಿ ಆಟವಾಡಿದಳು ಅಂದುಕೊಂಡಿದ್ದರೆ, ಅವಳನ್ನು ಬದುಕು ಈ ಪರಿ ನಿರ್ದಯಿಯಾಗಿ ಕಾಡಿತ್ತೇ? ಕಣ್ಣೀರುಗರೆಯುತ್ತ ಭಾರವಾದ ಹೆಜ್ಜೆ ಇಟ್ಟು ಉದಯ ಹೊರನಡೆವಾಗ ಪಾರಿವಾಳದಂತೆ ಅಕ್ಕನ ರೆಕ್ಕೆ ಮುರಿದವರು ಯಾರು ? ಅಂದುಕೊಳ್ಳುವಾಗ...

ಮುರುಗನ್... ಗಣೇಶ... ಶಾಂತುಮಾಮ... ಅಕ್ಕನ ಗಂಡ...?

ಉತ್ತರ ಹೊಳೆಯಲಿಲ್ಲ.

ಚಂದ್ರಪ್ರಭ ಕಠಾರಿ

ನಂ. ೧೦೭/ಎ, ೪೬ನೇ ಅಡ್ಡರಸ್ತೆ, ೪ನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು - ೫೬೦ ೦೧೦

# ಕನ್ನಡ ಅಭಿಮಾನ

'ರಾಜಧಾನಿ ಬೆಂಗಳೂರಿನಲ್ಲಿ ಕನ್ನಡ ಮಾತಾಡುವವರ ಸಂಖ್ಯೆ ಕಡಿಮೆಯಾಗಿದೆ. ಬೆಂಗಳೂರಿನಲ್ಲಿ ಕನ್ನಡಿಗರ ಸಂಖ್ಯೆ ಕಡಿಮೆಯಾಗಿದೆ. ಆಡಳಿತ ಮತ್ತು ಶಿಕ್ಷಣದಲ್ಲಿ ಕನ್ನಡ ಬಳಕೆ ಕಡಿಮೆಯಾಗಿದೆ. ಕನ್ನಡದ ಬಗ್ಗೆ ಅಭಿಮಾನ ಕಡಿಮೆಯಾಗಿದೆ ಅಥವಾ ಕನ್ನಡ ಅಭಿಮಾನ ಶೂನ್ಯವಾಗಿದೆ' ಎಂಬ ಅಭಿಪ್ರಾಯಗಳು ಕೇಳಿಬರುತ್ತಿವೆ. 'ಕನ್ನಡಿಗರಿಗೆ ಕನ್ನಡ ಅಭಿಮಾನದ ಕೊರತೆ ಇದೆ' ಎಂಬುದನ್ನು ನಾಡಿನ ಮುಖ್ಯ ಸಮಸ್ಯೆಗಳ ಸಾಲಿಗೆ ಸೇರಿಸುವ ಭಾವನಾತ್ಮಕ ಪ್ರಯತ್ನ ನಡೆದಿದೆ. ಕನ್ನಡ ಅಭಿಮಾನ ಎನ್ನುವುದು ಹೊಟ್ಟೆ ತುಂಬಿ ಖುಷಿಯಲ್ಲಿ ನಲಿಯುತ್ತಿರುವವರ ಭಾವನಾತ್ಮಕ ಸಂಗತಿ ಎಂಬಂತಾಗಿದೆ. ಕನ್ನಡ ಎನ್ನುವುದು ಕೇವಲ ನಲಿಯುವವರ ಸೊತ್ತು ಮಾತ್ರ ಅಲ್ಲ, ಕನ್ನಡವು ಬದುಕಿನಲ್ಲಿ ನಲುಗುತ್ತಿರುವವರ ಸೊತ್ತು ಕೂಡ ಹೌದು. ನಲುಗುತ್ತಿರುವವರು ಕನ್ನಡದ ಬಗ್ಗೆ ಭಾವನಾತ್ಮಕವಾಗಿ ಅಭಿಮಾನ ಪಡುತ್ತಿಲ್ಲ, ಅವರು ನಿಜವಾಗಿ ಕನ್ನಡವನ್ನು ಕಟ್ಟಿ ಬೆಳೆಸುತ್ತಿದ್ದಾರೆ.

ಈ ಹಿನ್ನೆಲೆಯಲ್ಲಿ ಕೇವಲ ಕೃತಕವಾದ, ಭಾವನಾತ್ಮಕ ಮತ್ತು ತೋರಿಕೆಯ ನೆಲೆಯ ಕನ್ನಡ ಅಭಿಮಾನವನ್ನು ಬದಲಾವಣೆ ಮಾಡಬೇಕಾಗಿದೆ. ಕನ್ನಡ ಅಭಿಮಾನದ ವಿಷಯವನ್ನು ನಲಿಯುವವರ ನೆಲೆಯಿಂದ ನಲುಗುವವರ ನೆಲೆಗೆ ವರ್ಗಾಯಿಸಬೇಕಾಗಿದೆ. ಈ ದೃಷ್ಟಿಯಲ್ಲಿ ಶೋಷಿತ, ದಮನಿತ, ವಂಚಿತ ಮತ್ತು ಅಪಮಾನಿತ ಕನ್ನಡಿಗರ ಸ್ಥಿತಿಗತಿಗಳ ಚರ್ಚೆ ಮತ್ತು ಅವರ ಪರಿಸ್ಥಿತಿಯ ಬದಲಾವಣೆಗೆ ಪ್ರಯತ್ನಿಸುವುದು ಕನ್ನಡ ಅಭಿಮಾನವಾಗಬೇಕು.

ಕನ್ನಡ ಅಭಿಮಾನದ ಮಹಾಪೂರವೇ ಎದ್ದು ನಿಂತಿದೆ. ಅದರಲ್ಲಿ ದಲಿತರು ಯಾಕಿಲ್ಲ? ಮಹಿಳೆಯರು ಯಾಕಿಲ್ಲ? ಆದಿವಾಸಿ ಬುಡಕಟ್ಟು ಜನರು ಯಾಕಿಲ್ಲ? ನಿರುದ್ಯೋಗಿಗಳು ಯಾಕಿಲ್ಲ? ಕೃಷಿ ಕೂಲಿ ಕಾರ್ಮಿಕರು ಯಾಕಿಲ್ಲ? ಕಟ್ಟಡ ಕಾರ್ಮಿಕರು ಯಾಕಿಲ್ಲ? ಹಮಾಲಿಗಳು ಯಾಕಿಲ್ಲ? ಯಾಕೆಂದರೆ ಕನ್ನಡ ಅಭಿಮಾನ ಎನ್ನುವುದು ಬಹುಸಂಖ್ಯಾತ ಕನ್ನಡಿಗರ ಸಂಕಟಗಳಿಗೆ ಸ್ಪಂದಿಸಿಯೇ ಇಲ್ಲ, ಅವರ ಸಮಸ್ಯೆಗಳಿಗೆ ಪ್ರತಿಕ್ರಿಯಿಸಿಯೇ ಇಲ್ಲ. ಕನ್ನಡ ಅಭಿಮಾನ ಎಂಬ ಸಂಗತಿಯಿಂದ ಬಹುಸಂಖ್ಯಾತ ಕನ್ನಡಿಗರನ್ನು ದೂರ ಇಡಲಾಗಿದೆ; ಹೊರಗಿಡಲಾಗಿದೆ.

ಹಾಗಾಗಿ ಈಗ ಜಾರಿಯಲ್ಲಿರುವ ಕನ್ನಡ ಅಭಿಮಾನ ಕೇವಲ ಅಲ್ಪಸಂಖ್ಯಾತರ ಕನ್ನಡ ಅಭಿಮಾನ. ಅದು ನಗರ ಕೇಂದ್ರಿತ ಕನ್ನಡ ಅಭಿಮಾನ. ಈಗ ಕನ್ನಡ ಅಭಿಮಾನ ಎನ್ನುವುದು ಯಾವುದೋ ಒಂದು ವರ್ಗದ ಭಾವನಾತ್ಮಕ ವಿಷಯ ಎಂಬಂತಾಗಿದೆ. ಬೆವರಿಳಿಸಿ ದುಡಿಯುವ ಶ್ರಮಿಕರ ಶ್ರಮವನ್ನು ಗೌರವಿಸುವ ಕನ್ನಡ ಅಭಿಮಾನ ಎಲ್ಲಿದೆ ? ಪುರುಷ ದಬ್ಬಾಳಿಕೆಗೆ ನಿತ್ಯ ಒಳಗಾಗಿ ಕೊರಗುತ್ತಿರುವ ಮಹಿಳೆಯರ ಅಸಹಾಯಕತೆಗೆ ಮಿಡಿಯುವ ಕನ್ನಡ ಅಭಿಮಾನ ಎಲ್ಲಿದೆ ? ಆದಿವಾಸಿ ಬುಡಕಟ್ಟು ಜನರನ್ನು ದಬ್ಬಾಳಿಕೆಯಿಂದ ಒಕ್ಕಲೆಬ್ಬಿಸುತ್ತಿರುವಾಗ ಅವರ ಹಕ್ಕುಗಳಿಗೆ ಸ್ಪಂದಿಸುವ ಕನ್ನಡ ಅಭಿಮಾನ ಎಲ್ಲಿದೆ ? ಹಸಿವಿನ ಹಾಹಾಕಾರದಿಂದ ಸಾಯುತ್ತಿರುವ ನಿರ್ಗತಿಕರ ಆಕ್ರಂದನಕ್ಕೆ ತುಡಿಯುವ ಕನ್ನಡ ಅಭಿಮಾನ ಎಲ್ಲಿದೆ ? ಜಾತಿ, ಅಸ್ಪೃಶ್ಯತೆ ಹೆಸರಿನಲ್ಲಿ ಜಾತಿ ಬಹಿಷ್ಕಾರ ಹಾಕಿದಾಗ ನ್ಯಾಯಕ್ಕಾಗಿ ಹೋರಾಡುವ ಕನ್ನಡ ಅಭಿಮಾನ ಎಲ್ಲಿದೆ ? ಇಡೀ ಕರ್ನಾಟಕವನ್ನು ಬಹುರಾಷ್ಟ್ರೀಯ ಕಂಪನಿಗಳ ಲಾಭಕ್ಕೆ ಜನರ ವಿರೋಧದ ನಡುವೆಯೂ ಮಾರುತ್ತಿರುವಾಗ ಕರ್ನಾಟಕವನ್ನು ಉಳಿಸುವ ಕನ್ನಡ ಅಭಿಮಾನ ಎಲ್ಲಿದೆ ? ಕನ್ನಡ ಅಭಿಮಾನವೆಂದರೆ ಕನ್ನಡ ಭಾವಗೀತೆಗಳಲ್ಲ; ಕನ್ನಡ ವಚನಗಳಲ್ಲ, ಅದು ಸಮಗ್ರ ಕನ್ನಡಿಗರ ಅಳಿವು ಉಳಿವಿನ ಪ್ರಶ್ನೆ.

ತಮಿಳರ ವಿರುದ್ಧ, ಮರಾಠಿಗರ ವಿರುದ್ಧ ಮತ್ತು ಇಂಗ್ಲಿಷ್ ಬೋರ್ಡುಗಳ ವಿರುದ್ಧ ಪ್ರತಿಭಟನೆ ಮಾಡುವ ಕನ್ನಡ ಅಭಿಮಾನ, ಕನ್ನಡಿಗರಿಗೆ ಅನ್ನಕೊಡುವ ಕೋಟ್ಯಾನುಕೋಟಿ ಕನ್ನಡಿಗರ ದುಃಸ್ಥಿತಿಯ ಬಗ್ಗೆ ಮೌನ ವಹಿಸಿದೆ. ಅಂದರೆ ಬಹುಸಂಖ್ಯಾತ ಕನ್ನಡಿಗರಿಗೆ ಕನ್ನಡ ಅಭಿಮಾನ ಗೊತ್ತೇ ಇಲ್ಲ, ಬತ್ತ, ಕಬ್ಬು ಬೆಳೆಯುವ ಗದ್ದೆಗಳಿಗೆ ಬರಲಿಲ್ಲ ಕನ್ನಡ ಅಭಿಮಾನ? ಮಲೆನಾಡಿನ ಕಾಫಿ ತೋಟಗಳಿಗೆ ಬರಲಿಲ್ಲ ಕನ್ನಡ ಅಭಿಮಾನ? ನಿರುದ್ಯೋಗಿಗಳ ನಿರ್ಗತಿಕ ಅಸಹಾಯಕತೆಗೆ ಬರಲಿಲ್ಲ ಕನ್ನಡ ಅಭಿಮಾನ ? ಕೇರಿಗಳಿಗೆ ಬರಲಿಲ್ಲ ಕನ್ನಡ ಅಭಿಮಾನ ? ಕೊಳೆಗೇರಿಗಳಿಗೆ ಬರಲಿಲ್ಲ ಕನ್ನಡ ಅಭಿಮಾನ? ಯಾರಿಗೆ ಬಂತು, ಎಲ್ಲಿಗೆ ಬಂತು, ಯಾತಕ್ಕೆ ಬಂತು ಕನ್ನಡ ಅಭಿಮಾನ?

ಕನ್ನಡ ಅಭಿಮಾನ ಎಂದರೆ ಏನು ? ಕನ್ನಡ ಅಭಿಮಾನದ ಸ್ವರೂಪ ಯಾವುದು ? ಕನ್ನಡ ಅಭಿಮಾನದ ಸ್ವರೂಪ ಯಾರದು ? ಕನ್ನಡ ಅಭಿಮಾನ ಯಾರಿಗಾಗಿ? ಕನ್ನಡ ಅಭಿಮಾನ ಯಾತಕ್ಕಾಗಿ? ಕನ್ನಡ ಅಭಿಮಾನದ ಹಿಂದೆ ಯಾರ ಹಿತಾಸಕ್ತಿ ಅಡಗಿದೆ ? ಕನ್ನಡ ಅಭಿಮಾನದ ಹಿಂದೆ ಯಾವ ವರ್ಗದ ಹಿತಾಸಕ್ತಿ ಅಡಗಿದೆ ? – ಈ ಪ್ರಶ್ನೆಗಳನ್ನು ಕೇಳಿಕೊಳ್ಳುವಂತಹ ಪರಿಸ್ಥಿತಿ ಎದುರಾಗಿದೆ. ಕನ್ನಡದ ಬಗ್ಗೆ, ಕರ್ನಾಟಕದ ಬಗ್ಗೆ ಎಲ್ಲರೂ, ಎಲ್ಲ ದಿನಗಳಲ್ಲೂ ಮಾತನಾಡುತ್ತಿದ್ದಾರೆ. ಅಷ್ಟರಮಟ್ಟಿಗೆ ಕನ್ನಡದ ಬಗ್ಗೆ ಬರವಣಿಗೆ, ಓದು, ಭಾಷಣ, ಮಾತುಕತೆ, ಅಭಿಪ್ರಾಯ, ಹೇಳಿಕೆ, ಚರ್ಚೆ, ಸಂವಾದಗಳು ನಿರಂತರವಾಗಿ ನಡೆಯುತ್ತಿವೆ. ಆದರೆ ಕನ್ನಡದ ಮತ್ತು ಕನ್ನಡಿಗರ ಮೂಲಭೂತ ಸಮಸ್ಯೆಗಳು ಮಾತ್ರ ಹಾಗೆಯೇ ಮುಂದುವರೆದಿವೆ. ಸ್ವಾವಲಂಬಿ ಕರ್ನಾಟಕ ಮತ್ತು ಸ್ವಾವಲಂಬಿ ಕನ್ನಡವನ್ನು ಕಟ್ಟುವುದು ಹೇಗೆ ಎಂಬ ಗಂಭೀರ ಸವಾಲು ಎದುರಾಗಿದೆ.

*(೧೨ ಮತ್ತು ೧೩ನೇ ಡಿಸೆಂಬರ್ ೨೦೧೧ : ಚಿಕ್ಕಮಗಳೂರು ತಾಲ್ಲೂಕು ಕನ್ನಡ ಸಾಹಿತ್ಯ ಸಮ್ಮೇಳನ, ಸಿರಿವಾಸೆ – ಇಲ್ಲಿನ ಸಮ್ಮೇಳನಾಧ್ಯಕ್ಷರ ಭಾಷಣದಿಂದ ಆಯ್ದ ಭಾಗ.)*

**ಡಾ|| ಬಿ. ಎಂ. ಪುಟ್ಟಯ್ಯ**
ಸಹ ಪ್ರಾಧ್ಯಾಪಕರು, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ - ೫೮೩ ೨೭೬

## ಆಗಲೂ

ಗರ್ಭಿಣಿ ಸೀತೆಯನ್ನು
ಕಾಡಿಗಟ್ಟಿದಾಗಲೂ
ಕೋಸಲ ದೇಶ
ರಾಮರಾಜ್ಯವೇ ಆಗಿತ್ತು

ರವಿಶಂಕರ ಒಡ್ಡಂಬೆಟ್ಟು
ಮಂಗಳೂರು - ೫೭೫೦೦೭

# ಶ್ರೇಷ್ಠ ಮಾನವತಾವಾದಿ, ವಿಚಾರವಾದಿ

## ಡಾ॥ ಗೌರೀಶ ಕಾಯ್ಕಿಣಿ

ಧೀಮಂತ ವಿಚಾರವಾದಿ ಗೌರೀಶ ಕಾಯ್ಕಿಣಿ ಅವರ ಜನ್ಮ ಶತಮಾನೋತ್ಸವದ ವರ್ಷ ಇದು. ಅವರ ಬಗ್ಗೆ ಕನ್ನಡದ ಜನತೆಗೆ ಹೆಮ್ಮೆಯೇನೋ ಅಪಾರವಾಗಿದೆ, ಆದರೆ ಅವರ ಕೃತಿಗಳ ಪರಿಚಯ ಪಡೆದಿರುವುದು ಸ್ವಲ್ಪ ಕಡಿಮೆ. ಹಲವು ವರ್ಷಗಳ ಮುಂದಿನ ಸಂಭಾವ್ಯ ಸಾಮಾಜಿಕ ಲಕ್ಷಣಗಳನ್ನು ಅಂದೇ ಗುರುತಿಸಿದ್ದ ವಿಶ್ಲೇಷಣಾ ಚತುರರು ಗೌರೀಶ ಕಾಯ್ಕಿಣಿ. ಅವರ ಚಿಂತನೆಯ ಮನನ ಅಗತ್ಯ, ಆರೋಗ್ಯಕರ.

**ಕಾ**ಯ್ಕಿಣಿ ಹೆಸರಿನ ಸಣ್ಣ ಗ್ರಾಮ ಈಗ ಉತ್ತರ ಕನ್ನಡ ಜಲ್ಲೆಯ ಭಟ್ಕಳ ತಾಲ್ಲೂಕಿನ ಮುರ್ಡೇಶ್ವರ-ಶಿರಾಲಿಯ ಮಧ್ಯೆ ರಾಷ್ಟ್ರೀಯ ಹೆದ್ದಾರಿ ನಂ. ೧೭ರ ಪಕ್ಕದಲ್ಲಿ ಅಂಟಿಕೊಂಡಿದೆ. ವಿಶೇಷತೆ ಎಂಬಂತೆ ಚಿತ್ರಾಪುರ ಸಾರಸ್ವತ ಜನಾಂಗವು ತಮ್ಮ ಹೆಸರಿನ ಹಿಂದೆ ತಾವು ವಾಸ ಮಾಡುತ್ತಿದ್ದ ಊರುಗಳನ್ನೇ ಕುಟುಂಬದ ಹೆಸರನ್ನಾಗಿ ಇಟ್ಟುಕೊಂಡು ಸಮಾಜದಲ್ಲಿ ತಮ್ಮನ್ನು ಗುರುತಿಸಿಕೊಳ್ಳುವ ಪರಿಪಾಠವು ಕಳೆದ ೩೦೦ ವರ್ಷಗಳಲ್ಲಿ ರೂಢಿಗತವಾಗಿ ನಡೆದುಕೊಂಡು ಬಂದಿದೆ. ಹಾಗೆ ಬರಲಿಕ್ಕೆ ಉತ್ತರ ಭಾರತದಿಂದ ವಲಸೆ ಬಂದ ಸಾರಸ್ವತರು ಗೋವಾದಲ್ಲಿ ನೆಲೆಸಿದ್ದಾಗ ಅಲ್ಲಿ ಆ ಜನಾಂಗದ ಜನರನ್ನು ಪೋರ್ಚುಗೀಸರು ಕ್ರಮೇಣ ಶೋಷಣೆಗೆ ಒಳಪಡಿಸುತ್ತ ಮತಾಂತರದ ಅವಾಂತರದಲ್ಲಿ ಅವರ ಕಲೆ-ಧರ್ಮ-ಸಾಹಿತ್ಯ ಕೃತಿಗಳ ನಾಶಕ್ಕೆ ಯತ್ನಿಸಿ ಹಿಂಸಿಸುತ್ತಿದ್ದುದು, ನಂತರ ಈ ಸಾರಸ್ವತರು ಕರಾವಳಿ, ಇನ್ನಿತರ ಕಡೆಗಳಿಗೆ ಕುಟುಂಬ ಸಹಿತ ವಲಸೆ ಹೋಗುತ್ತಿದ್ದುದು ಕಾರಣವಾಗಿತ್ತು.

ಗೌರೀಶ ಕಾಯ್ಕಿಣಿಯವರಿಗೂ ಗೋಕರ್ಣಕ್ಕೂ ಒಂದು ಅವಿನಾಭಾವ ಸಂಬಂಧವಿದೆ. ಧರ್ಮ, ಕಲೆ-ಸಂಸ್ಕೃತಿ, ಶ್ರದ್ಧೆಯ ಮಂದಿ ಗೋಕರ್ಣಕ್ಕೆ ಭೇಟಿ ಕೊಡುವುದಿದ್ದರೆ ಒಂದೋ ಮಹಾಬಲೇಶ್ವರನ ದೇವಸ್ಥಾನಕ್ಕೆ ಅಥವಾ ಗೌರೀಶ ಕಾಯ್ಕಿಣಿಯವರ ಭೇಟಿಗೆ ಎಂಬಷ್ಟು ಪ್ರತೀತಿ ಕಳೆದ ಶತಮಾನದಲ್ಲಿ ಕನ್ನಡಿಗರ ಮಟ್ಟಿಗೆ ಚಾಲ್ತಿಯಲ್ಲಿತ್ತು ಎಂದರೆ ಈ ಮಾತು ಗೌರೀಶ ಮಾಸ್ತರರ ಹಿರಿಮೆಗೂ ಜನರು ಅವರ ಮೇಲಿಟ್ಟಿದ್ದ ಪ್ರೀತ್ಯಭಿಮಾನಕ್ಕೂ ಸತ್ಯ ಸಾಕ್ಷಿಯಾಗಿತ್ತು. ಗೌರೀಶ ಕಾಯ್ಕಿಣಿ ಅವರ ತಂದೆ ವಿಟ್ಠಲ ರಾವ್ ಕಾಯ್ಕಿಣಿಯವರು ವಿಜಾಪುರದಲ್ಲಿ ತಹಸೀಲ್ದಾರ್‌ರಾಗಿದ್ದರು. ಆದರೆ ಗೌರೀಶರು ಹುಟ್ಟಿದ ಮೂರು ತಿಂಗಳಲ್ಲಿ ತಂದೆ ವಿಟ್ಠಲ ಕಾಯ್ಕಿಣಿ ತೀರಿಕೊಂಡಾಗ ಅವರ ಪತ್ನಿ ಸೀತಾಬಾಯಿ ಪುಟ್ಟ ಬಾಲಕ ಗೌರೀಶರನ್ನು ಕಟ್ಟಿಕೊಂಡು ಹೋಗಿದ್ದು ತನ್ನ ತೌರುಮನೆ ಇದ್ದ ಗೋಕರ್ಣಕ್ಕೆ. ಗೌರೀಶರ ಬಾಲ್ಯ, ಯೌವನ, ಗೃಹಸ್ಥಾಶ್ರಮ, ಉದ್ಯೋಗ ಎಲ್ಲವೂ ಗೋಕರ್ಣದಲ್ಲಿ ನಡೆದುಹೋಯಿತು.

ಕುಮಟಾದ ಗಿಬ್ಸ್ ಹೈಸ್ಕೂಲ್‌ನಲ್ಲಿ ಮೆಟ್ರಿಕ್‌ವರೆಗೆ ಓದು ಮುಗಿಸಿ ನಂತರ ಧಾರವಾಡದಲ್ಲಿ ಇಂಟರ್ ಮೀಡಿಯೇಟ್‌ಗೆ ಕರ್ನಾಟಕ ಕಾಲೇಜು ಸೇರಿದ್ದರೂ ಶಿಕ್ಷಣ ಪೂರ್ತಿ ಮುಗಿಸಲಾರದ್ದಕ್ಕೆ ಮನೆಯಲ್ಲಿನ ಆರ್ಥಿಕ ತೊಂದರೆಯೇ ಕಾರಣವಾಯ್ತು. ಓದನ್ನು ಬಿಟ್ಟ ಗೌರೀಶ ಕಾಯ್ಕಿಣಿ ತಮ್ಮ ವಿಚಾರಶೀಲತೆಗೆ, ಮನೋಧರ್ಮಕ್ಕೆ ಒಗ್ಗುವಂತಹ ಕ್ಷೇತ್ರ ಲಭಿಸಿದ್ದು ಶಿಕ್ಷಕ ವೃತ್ತಿ. ೧೯೩೭ರಲ್ಲಿ ಉದ್ಯೋಗ ಆರಂಭಿಸಿದ್ದು ಬಂಕಿಕೊಡ್ಲದ ಆನಂದಾಶ್ರಮ ಪ್ರೌಢಶಾಲೆಯಲ್ಲಿ. ಖ್ಯಾತ ಕವಿ ಸು.ರಂ. ಎಕ್ಕುಂಡಿಯವರು ತಮ್ಮ ಸಹೋದ್ಯೋಗಿಯಾಗಿದ್ದ ಗೌರೀಶರ ಆತ್ಮೀಯತೆಗೆ ಹಾಗೂ ಅವರ ತರ್ಕಬದ್ಧ ವಿಚಾರ ವೈಖರಿಗೂ, ಮಾನವೀಯ ಕಾಳಜಿಗೂ, ಭಾಷಾ ಪ್ರೌಢಿಮೆಗೂ ಮಾರುಹೋಗಿದ್ದರು. ಇಬ್ಬರದೂ ವೃತ್ತಿ ಒಂದೇ, ಧ್ಯೇಯಾದರ್ಶ ಒಂದೇ. ಗದ್ಯ-ಪದ್ಯವೆಂಬ ಸಾಹಿತ್ಯಕ್ಷೇತ್ರದ ಎರಡು ಧ್ರುವಗಳನ್ನು ಇಬ್ಬರೂ ಉಜ್ವಲಿಸಿ ದವರೇ. ತಮ್ಮ ವಿದ್ವತ್ತು, ಸನ್ನಡತೆಗಳಿಂದ ಸಹಸ್ರಾರು ವಿದ್ಯಾರ್ಥಿಗಳ ಹೃದಯ ಗೆದ್ದ ಅಪ್ರತಿಮ ಪ್ರತಿಭಾಶಾಲಿಗಳು! ಗೌರೀಶ ಕಾಯ್ಕಿಣಿ ಹಾಸ್ಯಪ್ರಿಯರು. ಅವರ ಭಾಷಣದ ವಾಗ್ವೈಖರಿಯನ್ನು ಕೇಳುವುದೇ ಒಂದು ರೋಚಕ ಅನುಭವವಾಗಿತ್ತು. ಅವರ ಕನ್ನಡ ಲಿಪಿ ಬರಹ ಮಾತ್ರ ಬ್ರಹ್ಮನಿಗೇ ಪ್ರೀತಿ! ಒಮ್ಮೆ ನಾನು ಕಾಯ್ಕಿಣಿಯವರನ್ನು ಗೋಕರ್ಣದ ಅವರ ಮನೆಯಲ್ಲಿ ಭೇಟಿಯಾದಾಗ, ''ಏನ್ ಕಾಯ್ಕಿಣಿ ಮಾಮಾವ್ರೇ, ನಿಮ್ಮ ಅಕ್ಷರ ಓದಲಿಕ್ಕೇ ಆಗಲ್ಲಾ, ಇನ್ನು ಅರ್ಥ ಮಾಡುವುದೆಲ್ಲಿ ಬಂತು? ಆದ್ದರಿಂದ ನೀವು ಬೇರೆ ಯಾರಿಂದಲಾದರೂ ಪತ್ರ ಬರೆಸಿರಿ. ಎರಡ್ಮೂರು ಸಲ ಓದಿದರೂ ನಿಮ್ಮ ಬರಹ ಸಮ ಅರ್ಥವಾಗಲ್ಲ'' ಎಂದೆ. ಆಗ ಗೌರೀಶ ಕಾಯ್ಕಿಣಿ ಹೇಳಿದ್ದೇನು ಗೊತ್ತೇ?

''ನಾನು ಬರೆದ ಬರಹ ಮಹರಾಯಾ, ಎರಡನೇ ಬಾರಿ ಓದಿದರೆ ನನಗೂ ಅರ್ಥವಾಗಲ್ಲ!''

ಹೀಗಿತ್ತು ಅವರ ಹಾಸ್ಯಪ್ರಜ್ಞೆ. ಕಾಯ್ಕಿಣಿಯವರ ಹಾಸ್ಯ ಪ್ರಜ್ಞಾವಲಯದಲ್ಲಿ ಇಂತಹ ಎಷ್ಟೋ ರಸವತ್ತಾದ ಸಂಗತಿಗಳನ್ನು ಉದಾಹರಿಸಬಹುದು.

ಹಿರಿಯ ಬರಹಗಾರರಾದ ಕಾರಂತ, ಮಾಸ್ತಿ, ಬೇಂದ್ರೆ, ಶಂಬಾ, ಶ್ರೀರಂಗ ಈ ಪಂಚ ದಿಗ್ಗಜರ ಸಾಹಿತ್ಯ ಸುಧೆಯೇ ಗೌರೀಶರಲ್ಲಿ ವಿಚಾರವಂತಿಕೆಯ ಆಳ-

ಬಿ. ಪಿ. ಶಿವಾನಂದ ರಾವ್

ಧರ್ಮದ ಆಸಕ್ತಿಯನ್ನು ಪ್ರಭಾವಿಸಿತು. ವೈಚಾರಿಕತೆಯ ತಂಬೆಳಕಲ್ಲಿ ಮಾನವತಾವಾದದ ಹಿರಿಮೆ-ಗರಿಮೆಯ ಸೂಕ್ಷ್ಮ ನೆಲೆ-ಬೆಲೆಗಳನ್ನು ತಮ್ಮ ಪ್ರಖರ ಪ್ರಬುದ್ಧ ಶೈಲಿಯಲ್ಲಿ ವಿಶ್ಲೇಷಿಸುತ್ತ ಬರೆದ ಕಾಯ್ಕಿಣಿ, ಸ್ವಭಾವತಃ ಮಗು ಮನಸ್ಸಿನವರು. ಎಂ. ಎನ್. ರಾಯ್ ಅವರ 'ರ‍್ಯಾಡಿಕಲ್ ಹ್ಯೂಮನಿಸಂ'ನ ಅನುಯಾಯಿಯಾಗಿದ್ದರೂ, ಕನ್ನಡದ ವಿದ್ವನ್ಮಣಿಗಳಾಗಿದ್ದ ಗೋಕಾಕ್, ರಂ. ಶ್ರೀ. ಮುಗಳಿ, ದಿನಕರ ದೇಸಾಯಿ, ಬೆಟಗೇರಿಯವರ ಗಟ್ಟಿ ಸ್ನೇಹ ಸಂಪಾದಿಸಿದ್ದರು.

ಗೌರೀಶರ ಜ್ಞಾನದಾಹ ಎಂದೂ ನಿಂತ ನೀರಾಗಲಿಲ್ಲ. ಅವರೊಂದು ಉಜ್ವಲ ವಿಚಾರ ಕ್ರಾಂತಿಯ ಪ್ರಭೆಯಾಗಿ ಗುಪ್ತಗಾಮಿನಿಯಂತೆ ಬದುಕಿನುದ್ದಕ್ಕೂ ರೂಢಿಸಿಕೊಂಡ ಅಪರೂಪದ ವ್ಯಕ್ತಿ ಎನ್ನುತ್ತಾರೆ ಅವರನ್ನು ಬಲ್ಲವರು. ಮನೆ ಗೋಕರ್ಣದಲ್ಲಿ, ಶಿಕ್ಷಕ ವೃತ್ತಿ ಬಂಕಿಕೊಡ್ಲದಲ್ಲಿ. ಮಧ್ಯೆಯ ಮೂರ್‍ನಾಲ್ಕು ಮೈಲುದೂರದ ಮಣ್ಣು ರಸ್ತೆಯಲ್ಲಿ ಕಾಲ್ನಡಿಗೆಯಲ್ಲಿ ಶಾಲೆಗೆ ಹೋಗಿಬರುತ್ತಿದ್ದ ಕಾಯ್ಕಿಣಿಯವರು ಗ್ರಂಥಗಳನ್ನು ಓದುತ್ತ ನಡೆಯುತ್ತಿದ್ದ ದೃಶ್ಯ ಕಂಡವರಿಗೆ ವಿಸ್ಮಯಾನಂದ ಹುಟ್ಟಿಸುವಂತಿತ್ತು. ಅಂತಹ ಬತ್ತದ ಜ್ಞಾನದಾಹ ಅವರದ್ದು.

ಗೌರೀಶ ಕಾಯ್ಕಿಣಿಯವರ ವಿಚಾರಧಾರೆಯು

# ಇಲ್ಲೀಗ ಹಕ್ಕಿಗಳಿಲ್ಲ ಬಾಣಗಳಿಲ್ಲ ಗಾಯದ ಹೊರತು...



ರಕ್ತ ಸುರಿಯುವುದಷ್ಟೆ ಗಾಯವೇನು ?
ಈ ಗಾಯ ಚರ್ಮದ ಮೇಲಿಲ್ಲ
ಒಡಲೊಳಗಿನ ಜೀವತಂತುಗಳಲಿ ಬೆರೆತು
ಹೆಜ್ಜೆಯೂರಿದಾಗೆಲ್ಲ
ಅಂಗಾಲಿನಲಿ ಹುದುಗಿ ಕುಳಿತ ಮುಳ್ಳು
ಚಿಟುಕು ಆಡಿದಂಥ ಭಾವ...!

ಸತ್ಯ ಹೇಳುತ್ತೇನೆ ಎಂದಲ್ಲ;
ಗುರಿಯಿಟ್ಟು ಹಕ್ಕಿಯ ಕಣ್ಣಿಗೆ
ಬಾಣ ಹೊಡೆಯುವುದನ್ನು ಸ್ಪರ್ಧೆಯಾಗಿಸಿದ
ನಾಡು ನನ್ನದು
ಇಲ್ಲಿ ಕಡಿದ ರುಂಡಗಳ
ಕೊರಳ ಮಾಲೆ ಮಾಡಿಕೊಂಡವನೇ ದೇವರು
ಸಾಯಿಸಿ ಚಂದದ ಸಮಾಧಿಯಾಗಿಸುವ ಮಣ್ಣಿನಲ್ಲಿ
ಸಾವಿಲ್ಲದ ಗಾಯ ಸದಾ ಕಾಲ
ಬದುಕಿಯೇ ಇರುತ್ತದೆ.



ಈಗಲೂ ಅಷ್ಟೇ
ಮೊನ್ನೆ ತಾನೆ ಒಬಾಮ ದೇವರಾಗಿ
ಮಾರ್ಪಟ್ಟಿದ್ದನ್ನು ಕಂಡೆ
ಒ ಸಾಮ ದೇವರಾಗಿ ಉಳಿದುಹೋಗುವುದ ನೋಡಿದೆ
ಬೊಗಸೆ ತುಂಬ ಮುಲಾಮು ತುಂಬಿಕೊಂಡು
ಲೋಕ ಕಾಯುವಾಗ ಅಗ್ನಿ ಉದುರಿಸುವ ತುಟಿಗಳು
ಆಡುವುದೆಲ್ಲ ಮುತ್ತಿನ ಮಾತೇ.
ನೀರನ್ನ, ಮಣ್ಣನ್ನ, ದಿಕ್ಕನ್ನ, ದಾರಿಯನ್ನ
ಅಪವಿತ್ರಗೊಳಿಸುವ ಉಘೇ ಮಂತ್ರವಾದಲ್ಲಿ
ಸಾಗರದ ನೀರನ್ನು ಎಂಜಲಾಗಿಸುವ ನಾಯಿಯನ್ನು
ಯಾರು ಬೆದರಿಸಬೇಕು ?
ನಿನ್ನ ಕಣ್ಣೆದುರು ನನ್ನ ಕಣ್ಣೆದುರು
ಹೆಣಗಳೆಲ್ಲ ಗಾಯಗೊಂಡ ಹಾಗೆ
ಗಾಯಗೊಂಡವರೆಲ್ಲ ಹೆಣದ ಹಾಗೆ
ಕಾಣುವುದೇಕೆ ? ಎಂದು ಕೇಳಬಾರದು
ನನ್ನ ಕಾಲದ ವಾಸ್ತವ
ಕೊಲ್ಲುವುದು ಸಾವ ರಕ್ತಗೆ.

ಗಾಯ ನನ್ನ ಅಂತರಾಳದ ಭಾಗ
ಎಲ್ಲರ ಹಾಗೆ ನಾನೂ ಗಾಯಗೊಂಡಿದ್ದೇನೆ
ಬಸವನಹುಳದ ಕೊಂಬು ಕತ್ತರಿಸುವುದು
ಕ್ರೌರ್ಯವೆನಿಸದ ಕಾಲದಲಿ
ಮನುಷ್ಯರು ಗಾಯಗೊಳ್ಳುವುದು
ಅಸಹಜ ಎನ್ನಲಾಗದು.

ಎದುರಿಗೆ ಕುಳ್ಳಿರಿಸಿಕೊಂಡು
ಮುಲಾಮು ಹಚ್ಚಲು ಸಿದ್ಧವಾದ ನಿನ್ನೆದುರಿಗೆ
ನಿನ್ನ ಮುಲಾಮಿನಲ್ಲಿ ನನ್ನ
ಗಾಯಗಳನ್ನೆಲ್ಲ ಹೂತು ಬಿಡಬಹುದಿತ್ತು
ಗಾಯಗೊಳ್ಳುವುದೆಂದರೆ ನಮ್ಮೊಳಗೆ
ಸಮಾಧಿ ಹುಟ್ಟುವುದು
ನೋವಿನ ನದಿಯಲ್ಲಿ
ಗಾಯದ ಶವ ತೇಲುವುದನ್ನು ಕಾಣುವುದು.

ಸಮಾನತೆಯ ಕೂಗು ದೇಶದ್ರೋಹದ
ಕಡತ ಸೇರುವುದು ಹೆಚ್ಚಾದ ಹಾಗೆ
ದಿನಕಳೆದಂತೆ
ನನ್ನ ಗಾಯ ಕೊಳೆಯುವುದು
ಏನೆಲ್ಲ ಮಾಡು
ಕೊನೆಗೆ ದೇಶದ ಧ್ವಜವನ್ನೆ
ಮೂಗಿಗ್ಗಿಡಿದರೂ
ಈ ಗಾಯದ ವಾಸನೆಯಿಂದ
ತಪ್ಪಿಸಿಕೊಳ್ಳಲಾಗದು
ಸತ್ಯವಾಗಿ
ಗಾಯವಾಗಿ
ನಾನು ಶತಮಾನಗಳಿಂದ
ಉಳಿದುಕೊಂಡು ಬಂದಿದ್ದೇನೆ
ಗಾಯಗೊಳಿಸುವ ದೇಶದ
ಧ್ವಜ ಮಾತ್ರ ಹಾಗಲ್ಲ
ಅದು ಬಣ್ಣ ಬದಲಿಸುತ್ತ ಬಂದಿದೆ
ಗುಣವನ್ನಲ್ಲ...!

**ಬಸವರಾಜ ಸೂಳಿಭಾವಿ**
ನಂ. ೨೧, ಪ್ರಸಾದ ಹಾಸ್ಟೆಲ್, ಗದಗ - ೫೮೨ ೧೦೧

ಕೆಲವು ಸ್ಯಾಂಪಲ್‌ಗಳು ಹೀಗಿವೆ. ಅವರೆನ್ನುತ್ತಾರೆ: ''ಬುದ್ಧಿ ಬೆಳೆದಂತೆ ಭಾವುಕತೆ ಕಡಿಮೆ ಆದಂತೆ, ಕೆಲಮಟ್ಟಿಗೆ ನಿರಾಶಾವಾದ ಅನಿವಾರ್ಯವೇ ಸರಿ. ಸುಳ್ಳು ಕುರುಡು ಆಶಾವಾದದ ಯುಗ ಎಂದೋ ಕಳೆದು ಹೋಯಿತು. ಇಂದು ಮಾನವನು ತನ್ನ ದೌರ್ಬಲ್ಯ, ಅಸಹಾಯಕತೆ ಹಾಗೂ ಅಲ್ಪತೆಯನ್ನು ಅರಿತುಕೊಂಡೇ ಹೊಸ ಬಾಳು ಕಟ್ಟಬೇಕು. ಈ ವೈಚಾರಿಕ ನಿರಾಶೆಯಲ್ಲಿಯೂ, ಒಂದು ವೈರಾಗ್ಯದ ನಿಷ್ಠುರ ಆನಂದ ಇದೆ. ತನ್ನ ದೌರ್ಬಲ್ಯವನ್ನು ಅರಿತು ಕೊಳ್ಳುವುದರಲ್ಲೇ ಮಾನವನ ನಿಜವಾದ ಸಾಮರ್ಥ್ಯ ಇದೆ. ಅದೇ ನಿರಾಶಾವಾದವನ್ನು ಎದುರಿಸುವ ರೀತಿ. ಅವರೇ ಮತ್ತೊಂದೆಡೆ, ''ಕವಿಯು ವಿಚಾರವಾದಿಯೋ, ತತ್ವಜ್ಞಾನಿಯೋ, ವಿಜ್ಞಾನಿಯೋ, ಶಾಸ್ತ್ರಜ್ಞನೋ ಇರಲೇ ಬೇಕಾಗಿಲ್ಲ. ಅವನ ವಿಚಾರ ಕಾವ್ಯದಲ್ಲಿ ಕಾವ್ಯವಾಗಿಯೇ ಮೈತಾಳಬೇಕು. ಹೊರತು ಕಾವ್ಯದೊಳಗೆ ಮನೆ ಮಾಡಿಕೊಂಡಿರಬಾರದು'', ಎನ್ನುತ್ತಾರೆ. ಆಳವಾದ ಜ್ಞಾನ ಸಂಪಾದನೆಗೆ ಭಾಷೆಯ ಗಡಿ ಇಲ್ಲ ಎನ್ನುವ ಗೌರೀಶರು ನಿಜಾರ್ಥದಲ್ಲಿ ಮನೆಮಾತು ಕೊಂಕಣಿಯಾಗಿದ್ದರೂ ಬಹು ಭಾಷಾ ಪಾಂಡಿತ್ಯ ಪ್ರವೀಣರು. ಸಂಸ್ಕೃತ, ಇಂಗ್ಲಿಷ್, ಕನ್ನಡ, ಕೊಂಕಣಿ, ಹಿಂದಿ ಮತ್ತು ಮರಾಠಿ ಭಾಷೆಯಲ್ಲಿ ಓದು-ಬರಹ ಮತ್ತು ಸಮಾನ ಪ್ರಭುತ್ವ ಸಾಧಿಸಿಕೊಂಡಿದ್ದ ವಿಶಿಷ್ಟ, ವಿರಳ ವ್ಯಕ್ತಿಗಳಾಗಿದ್ದರು. ಕಾಯ್ಕಿಣಿಯವರಿಗೆ ವೈರಸ್ ಕಾಯಿಲೆಯ ದೆಸೆಯಿಂದ ಅವರ ಮೂಗು ರೂಪ ಕಳೆದುಕೊಳ್ಳುವಂತಾಯಿತು. ಆಶಾವಾದಿಯಾಗಿದ್ದ ಅವರು ತಮ್ಮ ಕುರೂಪತ್ವಕ್ಕೆ ಕಿಂಚಿತ್ತೂ ನೊಂದುಕೊಳ್ಳಲಿಲ್ಲ. ಸುಮಾರು ೧೯೩೦ರ ಕಥೆ. ಕುಮಟಾದ ಡಾಕ್ಟರ್ ಆರ್. ಎಂ. ಮಾಸೂರ್‌ಕರ್‌ರು ಗೌರೀಶ ಕಾಯ್ಕಿಣಿಯವರ ಆಪ್ತಮಿತ್ರರು. ಕಾಯ್ಕಿಣಿಯವರಿಗೆ ಮೂಗು ಹೋದ ಮೇಲೆ ಅವರ ಕುರೂಪ ವದನ ಮಾಸೂರ್‌ಕರ್‌ರಿಗೆ ಹಿಡಿಸಲಿಲ್ಲ. ಒಮ್ಮೆ ''ಗೌರೀಶಾ... ನನ್ನೊಜ್ತೆ ಮುಂಬೈಗೆ ಬಾ, ಅಲ್ಲಿ ನಮ್ಮಣ್ಣ ಇದಾನೆ. ಈಗಂತೂ ಪ್ಲಾಸ್ಟಿಕ್ ಯುಗ. ನಿನಗೆ ಒಳ್ಳೆಯ ಪ್ಲಾಸ್ಟಿಕ್ ಮೂಗನ್ನು ಜೋಡಿಸೋಣ. ತುಂಬ ಸುಂದರವಾಗಿ ಮೊದಲಿನಂತೆ ಕಾಣ್ತೀಯಾ... ಬರ್ತೀಯಾ ?'' ಅಂದರಂತೆ. ಆಗ ಗೌರೀಶರು, ''ಗೌರೀಶ ಕಾಯ್ಕಿಣಿಗೆ ಮೂಗಿಲ್ಲ ಅನ್ನೋದು ಈಗಾಗ್ಲೇ ಜಗಜ್ಜಾಹೀರು ಆಗಿದೆ. ಪ್ಲಾಸ್ಟಿಕ್ ಮೂಗು ಜೋಡಿಸಿಕೊಂಡ ಮೇಲೆ ಗೌರೀಶ ಹೇಗೆ ಕಾಣ್ತಾನೆ ನೋಡೋಣ ಅಂತಾ ಜನ ಮನೆ ಬಾಗಿಲಿಗೆ ಬರ್ಲಿಕ್ಕೆ ಸುರುಮಾಡ್ತಾರೆ ಮಾರಾಯಾ... ಅದಕ್ಕೋಸ್ಕರ ಬೇಡ'' ಅಂದರಂತೆ. ಹೀಗೆ ವಿಷಾದವನ್ನು ವಿನೋದದಲ್ಲಿ ತೇಲಿಸುವ ಹಾಸ್ಯಪ್ರಜ್ಞೆಯ ವಾಕ್ಚಾತುರ್ಯ ಅವರಲ್ಲಿತ್ತು. ಗೌರೀಶ ಕಾಯ್ಕಿಣಿ ಆಂಗ್ಲ ಸಾಹಿತ್ಯಾರಾಧಕರಾಗಿದ್ದರು. ತಮ್ಮ ವಿಮರ್ಶನಾ ಕೌಶಲ್ಯದಿಂದ ಬದುಕಿನುದ್ದಕ್ಕೂ ಅಧ್ಯಯನ ಮತ್ತು ಸಾಹಿತ್ಯ ಸೃಷ್ಟಿ ಎರಡರಲ್ಲೂ ತಮ್ಮ ಸ್ವಂತಿಕೆಯ ಛಾಪು ಮೂಡಿಸಿದ್ದರು.

ಗೌರೀಶ ಕಾಯ್ಕಿಣಿ ತಮ್ಮ ಬಗೆಗೆ ''ಕನ್ನಡ ನಾಡಿನ ಒಂದು ಪಡು ಮೂಲೆಯಲ್ಲಿ (ಎಂದರೆ ಗೋಕರ್ಣದಲ್ಲಿ), ಕಡಲ ತೀರದ ಮರಳಲ್ಲಿ, ತಲೆ ಹುಗಿದುಕೊಂಡು ಕೂತವನು ನಾನು. ಜಿಜ್ಞಾಸೆ ಮತ್ತು ಲವಲವಿಕೆ ಇವೆರಡೇ ನನ್ನ ಅರ್ಹತೆ. ಮಿಕ್ಕಿದ್ದು ಸಹೃದಯರ ಸಹನೆ'' ಎಂದು ಹೇಳಿಕೊಂಡಿದ್ದಾರೆ. ಕನ್ನಡ ಸಾಹಿತ್ಯಕ್ಕೆ ಅವರು ನಿರ್ಮಿಸಿಕೊಟ್ಟ ವೈಚಾರಿಕ ನೆಲೆ ಒಂದು ಸುಭದ್ರ ಆಯಾಮವೆಂದೇ ಪರಿಗಣಿತ ಗೊಂಡಿದೆ. ಬರ್ಟ್ರಂಡ್ ರಸೆಲ್, ರವೀಂದ್ರನಾಥ ಟಾಗೋರ್, ವಿಲ್‌ಡ್ಯುರಾಂಟ್, ಕಾರ್ಲ್ ಮಾರ್ಕ್ಸ್‌ರ ತತ್ವಸಿದ್ಧಾಂತಗಳು ಗೌರೀಶರ ಬುದ್ಧಿ-ಭಾವಗಳ ಮೇಲೆ ಅಚ್ಚಳಿಯದ ಸಾಹಿತ್ಯಸೃಷ್ಟಿಗೆ ಪ್ರಭಾವದ ಮುದ್ರೆ ಒತ್ತಿತು. ಬೆಟಗೇರಿ ಕೃಷ್ಣಶರ್ಮರ 'ಜಯಂತಿ' ಮಾಸ ಪತ್ರಿಕೆ, 'ಬೆಳಕು', 'ಸಾಪ್ತಾಹಿಕ', 'ನಾಗರಿಕ' (ಸಾಪ್ತಾಹಿಕ) ಮತ್ತು ದಿನಕರ ದೇಸಾಯಿಯವರ ಅಂಕೋಲೆಯಿಂದ ಪ್ರಕಟವಾಗುತ್ತಿದ್ದ ವಾರ ಪತ್ರಿಕೆ 'ಜನಸೇವಕ' ಇವುಗಳ ಮೂಲಕ ವರ್ಷಾನುಗಟ್ಟಲೆ ತಮ್ಮ ಬರಹದ ಕೊಡುಗೆ ನೀಡಿದ್ದರು. ಗೌರೀಶ ಕಾಯ್ಕಿಣಿ ಅವರ ಘನ ವ್ಯಕ್ತಿತ್ವದ ಮತ್ತೊಂದು ಮುಖವೆಂದರೆ ನಿಜ ಜೀವನದಲ್ಲಿ ಅವರೊಬ್ಬ ಅಜಾತಶತ್ರುವಾಗಿದ್ದರು. ಆಬಾಲ ವೃದ್ಧರಾದಿಯಾಗಿ ಎಲ್ಲರಲ್ಲೂ ಉತ್ಕಂಠಿತ ಪ್ರೀತಿ ಪ್ರಕಟಿಸುತ್ತಿದ್ದರು.




ಗೌರೀಶ ಕಾಯ್ಕಿಣಿಯವರು ಅಂತರ್ಜಾತೀಯ ವಿವಾಹ ಮಾಡಿಕೊಂಡು ಶಾಂತಾ ಅವರ ಕೈಹಿಡಿದದ್ದು ೧೯೫೩ರಲ್ಲಿ. ಶಾಂತಾ ಅವರು ಮುಂದೆ ಸಮಾಜ ಸೇವೆಯಲ್ಲಿ ತೊಡಗಿ ಜಿಲ್ಲಾ ಪಂಚಾಯ್ತಿ ಉಪಾಧ್ಯಕ್ಷೆ, ನಗರ ಪಂಚಾಯ್ತಿ ಸದಸ್ಯೆ, ಜಿಲ್ಲಾ ಅಭಿವೃದ್ಧಿ ಮಂಡಲಿ ಸದಸ್ಯೆ, ಹೀಗೆ ಅನೇಕ ಹುದ್ದೆಗಳಲ್ಲಿ ದುಡಿದು ಉತ್ತರ ಕನ್ನಡದಲ್ಲಿ ಜನಪ್ರಿಯತೆ ಗಳಿಸಿದರು. ಬಂಕಿಕೊಡ್ಲದಿಂದ ಬಿಡುಗಡೆ ಹೊಂದಿ ಗೌರೀಶರು ಗೋಕರ್ಣದ ಭದ್ರಕಾಳಿ ಹೈಸ್ಕೂಲ್‌ಗೆ ಅಧ್ಯಾಪಕರಾಗಿ ಸೇರಿದ್ದು ೧೯೫೪ರಲ್ಲಿ. ಅದೇ ವರ್ಷ ಕನ್ನಡದ ಖ್ಯಾತ ಕಥೆಗಾರ, ಕವಿ, ಈಗ ಗೀತರಚನಕಾರ ಜಯಂತನು ಹುಟ್ಟಿದ್ದು. ಹಾ. ಮಾ. ನಾಯಕರು ''ಗೌರೀಶ ಕಾಯ್ಕಿಣಿ ಕನ್ನಡ ಸಾಹಿತ್ಯ ಲೋಕಕ್ಕೆ ನೀಡಿದ ಅದ್ಭುತ ಕೊಡುಗೆ ಎಂದರೆ ಅವರ ಏಕಮಾತ್ರ ಪುತ್ರ ಜಯಂತ'' – ಹೀಗೆಂದು ಪ್ರಶಂಸಿಸಿದ್ದಾರೆ.

೧೯೨೦, ಆಗ ದಿನವೂ ವಿದೇಶಿ ವಸ್ತ್ರ ಬಹಿಷ್ಕಾರದ ಚಳವಳಿ ಇದ್ದದ್ದೇ. ಗೋಕರ್ಣದ ಮಹಾಬಲೇಶ್ವರ ದೇವಸ್ಥಾನದಲ್ಲಿ ಪಟಾಂಗಣದಲ್ಲಿ ಪ್ರಚಂಡ ಸಭೆ, ಅಲ್ಲಿ ದೇಶಭಕ್ತ ಹುಸ್ಸಿಂಗ್ ಡಾಕ್ಟರರ ವೀರಾವೇಶದ ಭಾಷಣ ಆಯ್ತು. ಕೊನೆಯಲ್ಲಿ ತಮ್ಮಲ್ಲಿರುವ ವಿದೇಶಿ ವಸ್ತ್ರಗಳನ್ನು ತಂದು ರಾಶಿ ಹಾಕಿ ಎಂದರು. ಜನ ತಟಸ್ಥ! ಒಬ್ಬರೂ ಮುಂದಾಗಲಿಲ್ಲ. ೮ ವರ್ಷದ ಬಾಲಕ ಗೌರೀಶ ಅವತ್ತೇ ಮುಂಬಯಿಯಿಂದ ಸೋದರ ಮಾವ ರವಾನಿಸಿದ್ದ ಸೇಲರ್ ಸೂಟನ್ನು ಆ ಕ್ಷಣ ಕಳಚಿ ಮೇಜಿನ ಮೇಲೆ ಒಗೆದ! ಈ ದೃಶ್ಯ ನಿಜವಾದ ದೇಶಪ್ರೇಮಕ್ಕೆ ಮಾದರಿ ಎಂದು ಅರ್ಥೈಸಿದ ಡಾಕ್ಟರ್‌ರು ಬಾಲಕ ಗೌರೀಶನನ್ನು ಎತ್ತಿ ಹಿಡಿದು 'ಕಲಿಯುಗದ ಪ್ರಹ್ಲಾದ' ಎಂದು ಪ್ರಶಂಸಿಸಿದರು. ಬಾಲ್ಯದಲ್ಲಿ ಸುಂದರ, ಅಗಲ ಮುಖಚರ್ಯೆ ಹೊಂದಿದ್ದ ಗೌರೀಶರಿಗೆ ನಾಟಕದಲ್ಲಿ ಅಭಿನಯ ಮೆಚ್ಚುಗೆಯಾಗಿತ್ತು. ಗೌರೀಶರ ಗೀತೆಗಳಿಗೆ ವಿದ್ವಾಂಸ ಪಾಂಡುರಂಗ ಭಾಗವತರ ಸಂಗೀತದಲ್ಲಿ ಎಷ್ಟೋ ಪೌರಾಣಿಕ ಗೀತರೂಪಕಗಳು ರಂಗದಲ್ಲಿ ಅಭಿನಯಿಸಲ್ಪಟ್ಟವು.

ಶಿಕ್ಷಣ, ಸಾಹಿತ್ಯ, ಮನೋವಿಜ್ಞಾನ, ಸಮಾಜ, ಪತ್ರಿಕೆ, ಭಾಷಾಶಾಸ್ತ್ರ, ಹೀಗೆ ಹತ್ತೊಂದು ವಿಶಾಲ ಕ್ಷೇತ್ರಗಳಲ್ಲಿ ಗೌರೀಶ ಕಾಯ್ಕಿಣಿ ಏಳೆಂಟು ದಶಕಗಳ ಕಾಲ ಸಲ್ಲಿಸಿದ ಮೌಲಿಕ ಸೇವೆಗಾಗಿ ಸಂದ ಪ್ರಶಸ್ತಿ ಪುರಸ್ಕಾರಗಳಿಗೇನು ಕಮ್ಮಿಯಿಲ್ಲ. ೧೯೭೩ರಲ್ಲಿ ಆದರ್ಶ ಶಿಕ್ಷಕ ಪ್ರಶಸ್ತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ (ಅವರ 'ನವಮಾನವತಾವಾದ' ಕೃತಿಗೆ), ವರ್ಧಮಾನ ಪ್ರಶಸ್ತಿ, ಕನ್ನಡ ಸಾಹಿತ್ಯ ಪರಿಷತ್ತಿನ ವಜ್ರ ಮಹೋತ್ಸವ ಪ್ರಶಸ್ತಿ, ಜಿಲ್ಲಾ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಪದವಿ, ಕರ್ನಾಟಕ ವಿಶ್ವವಿದ್ಯಾಲಯ ೨೦೦೧ರಲ್ಲಿ ನೀಡಿದ ಗೌರವ ಡಾಕ್ಟರೇಟ್ ಪದವಿ, ಇವು ಅವರ ಸಾಧನೆ-ಸಿದ್ಧಿಗಾಗಿ ಸಿಕ್ಕ ಕೆಲವು ಸುಯೋಗ್ಯ ಪುರಸ್ಕಾರಗಳು. ಇವರ 'ಮೀನಾಕ್ಷಿ' ಎಂಬ ಕವನ ಸಂಕಲನಕ್ಕೆ ಕೊಂಕಣಿ ಸಾಹಿತ್ಯ ಅಕಾಡೆಮಿಯ ಮೊದಲ ಮನ್ನಣೆ ಲಭಿಸಿತ್ತು.

ಶ್ರೀ ಗೌರೀಶ ಕಾಯ್ಕಿಣಿಯವರ ಸಮಗ್ರ ಸಾಹಿತ್ಯವನ್ನು ೧೦ ಬೃಹತ್ ಸಂಪುಟಗಳಲ್ಲಿ ಮುದ್ರಿಸಿ ಕನ್ನಡಿಗರಿಗಿತ್ತ ಏಕೈಕ ಸಾಹಸೀ ವ್ಯಕ್ತಿ, ಖ್ಯಾತ ಕವಿ, ಅಂಕೋಲೆಯ ಶ್ರೀ ವಿಷ್ಣು ನಾಯ್ಕ ಅವರು ನಿಜಕ್ಕೂ ಅಭಿನಂದನಾರ್ಹರು. ಖ್ಯಾತ ಲೇಖಕ ಶ್ರೀ ಯಶವಂತ ಚಿತ್ತಾಲರು ಆ ಗ್ರಂಥಗಳ ಬೆನ್ನುಡಿ ಬರೆದಿದ್ದು, ಅವರು ಅರ್ಥಪೂರ್ಣವಾಗಿ ಹೀಗೆನ್ನುತ್ತಾರೆ: ''ಮನುಷ್ಯನ ಆಸ್ಥೆಗೆ ಯೋಗ್ಯವಾದುದೆಲ್ಲವೂ ಮನುಷ್ಯರಾಗಿ ಬಿಚ್ಚಿಕೊಳ್ಳಲು ನಮಗೆ ಸೃಜನಶೀಲ ಮನಸ್ಸೊಂದು ಬದುಕಿನ ಬಗೆಗೆ ತಳೆದ ಬೆರಗು ತುಂಬಿದ ಕುತೂಹಲವೇ ಹೊರತು ಶುಷ್ಕ ಪಾಂಡಿತ್ಯ ಪ್ರಿಯತೆಯಲ್ಲ! ಪ್ರಶ್ನೆ ತಾನೇ ಸ್ವತಃ ಪ್ರಜ್ಞೆಯಲ್ಲ. ಆದರೆ ಪ್ರಜ್ಞೆಯ ಸ್ಥಿತಿ ಮುಟ್ಟಿ ಬೆಳಕು ಕಾಣುವ, ತಾನೇ ಬೆಳಕಾಗುವ ಅಭೀಷ್ಟವುಳ್ಳದ್ದು. ಗೌರೀಶರ ಸಾಹಿತ್ಯದ ಅಭೀಷ್ಟ ಚಿಂತನವೂ ಅದೇ. ಪ್ರಶ್ನೆಯಿಂದ ಆರಂಭವಾಗುವ ಅದರ ಗುಪ್ತ ಭೂಗತ ತಡಕಾಟ, ಪ್ರಜ್ಞೆಯ ಹಂಬಲವಾಗುತ್ತ, ಬೆಳಕಿನ ಹಂಬಲವಾಗುತ್ತ ಉತ್ತರೋತ್ತರವಾಗಿದೆ. ವಿಚಾರವಾದಿಯೊಬ್ಬ ಶ್ರೇಷ್ಠ ಮಾನವತಾವಾದಿಯಾಗುವ ಇಂಥ ಬಗೆ ಕನ್ನಡದಲ್ಲಿ

ಇಚ್ಛೆಯಿಲ್ಲವೆಂದರೆ ಆಕೆಯೋಗ್ಯ ಆಗಲಾರದು.''

ಭಾಷೆ ಮತ್ತು ಭಾವ ಪ್ರಭುತ್ವವು ಕಾಯ್ಕಿಣಿಯವರ ಮೂಲ ಬಂಡವಾಳವಾಗಿತ್ತು. ಅರಿವಿನ ದಾಹದಲ್ಲಿ ದಣಿಯದ ಜೀವಕ್ಕೆ 'ಸಾಹಿತ್ಯ ಸೃಷ್ಟಿ' ಅವರ ವಾಗ್ವಿಲಾಸದಲ್ಲಿ ಬದುಕಿನ ಪರ್ಯಾಲೋಚನದ ಹತ್ತೆಂಟು ವಸ್ತುವೈವಿಧ್ಯ ಪ್ರದರ್ಶನ ನೀಡಿದೆ. ಕನ್ನಡದ ಪಂಚ ಧ್ರುವತಾರಾಗಿದ್ದ ಬೇಂದ್ರೆ, ಶಂಬಾ, ಶ್ರೀರಂಗ, ಕಾರಂತ ಮತ್ತು ಮಾಸ್ತಿಯವರ ಸಾಹಿತ್ಯದಿಂದ ಪ್ರಭಾವಿತಗೊಂಡಿದ್ದರೂ ''ಸಿ. ಸಿದ್ದವನಹಳ್ಳಿ ಕೃಷ್ಣ ಶರ್ಮರ ವಾಗ್ಧಾರೆ ಹಾಗೂ ಜೀವನದೃಷ್ಟಿಯು ಪ್ರಭಾವಿಸಿದೆ'', ಎನ್ನುತ್ತಾರೆ. ಮರಾಠಿಯ ಗಡಕರಿ, ನಾ. ಸಿ. ಫಡಕೆ, ವಿ. ಸ. ಖಾಂಡೇಕರರ ಸಾಹಿತ್ಯರಾಶಿಯಿಂದಲೂ ಪ್ರಭಾವಿತಗೊಂಡಿದ್ದನ್ನು ವಿನೀತಭಾವದಲ್ಲಿ ಕಾಯ್ಕಿಣಿ ಒಪ್ಪುತ್ತಾರೆ.

ನಮ್ಮ ಸಾಮಾಜಿಕ, ಆರ್ಥಿಕ, ರಾಜಕೀಯ ಎಲ್ಲ ಸಂದರ್ಭಗಳೂ ಮಾನವೀಯತೆಯ ಒಂದು ಬಿಂದುವಿನಲ್ಲಿ ವೇದಗೊಳ್ಳುತ್ತವೆ. ಸಾಹಿತಿಯಾದವನ ದೃಷ್ಟಿ ಬಿಂದು ಮತ್ತು ಕಿರಣ ಕೇಂದ್ರವು ಅದೇ ಆಗಿರಬೇಕು. ''ಅನುಭವವಿಲ್ಲದ ರಚನೆ (ಸಾಹಿತ್ಯ), ಮಾರ್ಮಿಕವಲ್ಲದ ಅನುಕರಣೆ, ಸ್ವೋಪಜ್ಞತೆಯಿಲ್ಲದ ಅಭಿವ್ಯಕ್ತಿ ಇವುಗಳಿಂದ ಲೇಖಕ ವಾಚಕರ ನಡುವೆ ಕಮ್ಯುನಿಕೇಷನ್ (ಸಂವಹನ) ಸಾಧಿಸಲಾರದ ಒಂದು ಕಂದಕವಿದೆ. ಇಂದಿಗೂ ವಿಶಿಷ್ಟ ಕನಸುಗಾರರ ಬದುಕಿನಿಂದ ಅನೇಕ ಪದ ಪ್ರಯೋಗಗಳು ವಾಙ್ಮಯ ಪ್ರಚಂಚಕ್ಕೆ ಪಳಗಿ ಬಂದರೇನೇ ಭಾಷೆಗೆ ಯೋಗ್ಯ ಕೃಷಿ'', ಎನ್ನುವ ಗೌರೀಶರ ಮಾತಲ್ಲಿ ಭಾಷಾಪ್ರೇಮದ ಬಗೆಗೆ ಉಜ್ವಲ ಕಳಕಳಿಯಿದೆ. ''ರೋಮ್ಯಾಂಟಿಕ್ ಕಾವ್ಯಗಳಿಂದ ಪ್ರಭಾವಿತಗೊಂಡ ಇತರ ಪ್ರಾಂತೀಯ ಭಾಷೆಗಳಿಂದಲೂ ಕನ್ನಡದ ನವೋದಯ ಕಾವ್ಯ ಪ್ರಭಾವಿತವಾಗಿದೆ. ನಮ್ಮ ಜಾನಪದ ಪ್ರಾಚೀನ ಮಾರ್ಗೀಯ ಕಾವ್ಯದಿಂದಲೂ ರೂಪ, ರಸ, ಗಂಧ ತುಂಬಿಕೊಂಡು ನಮ್ಮ ಮಣ್ಣಿನ ಗುಣ ಹೊಂದಿ ಬೆಳೆದಿದೆ'', ಎನ್ನುತ್ತಾರೆ. ''ನನ್ನ ಗದ್ಯ ಕಾವ್ಯಗಂಧಿ, ನಿಜ. ವೈಚಾರಿಕ ಎಂದು ಟೈಪ್ ಆದದ್ದೂ ನಿಜ. ಮನೆಮಾತು ಕನ್ನಡವಲ್ಲದ ಕವಿಗಳ ಕನ್ನಡದ ಬಳಕೆಯಲ್ಲಿ ಒಂದು ವಿಶೇಷ ಒಡಪಿನ ಅಂದ, ಶೈಲಿಯಲ್ಲಿ ಸೌಷ್ಠವ, ಪದಪವಣಿಕೆಯಲ್ಲಿ ಚಾತುರ್ಯ, ಬರಲು ಅವರು ಆ ಭಾಷೆಯನ್ನು ಕಂಡರಿಯದ ಒಂದು ತೀವ್ರ ಪ್ರಜ್ಞೆಯೇ ಕಾರಣವಾಗಿರಬೇಕು. ನಾನು ಯಾವಾಗಲೂ ರೆಜಿಮೆಂಟೇಶನ್‌ಗೆ ವಿರುದ್ಧ. ಮಾರ್ಕ್ಸ್‌ವಾದಿಯಾಗಿಯೂ ನಾನು ಕಮ್ಯುನಿಸ್ಟನಲ್ಲ. ರಾಜಕೀಯ ಸೇರಿದರೂ ಯಾವುದೇ ಪಕ್ಷ ಸೇರಿದವನಲ್ಲ'' – ಇದು ಕಾಯ್ಕಿಣಿಯವರ ನಿಲುಮೆಯಾಗಿದೆ.

ಇನ್ನು 'ಗಾಂಧಿ ಮತ್ತು ಸಮಾಜವಾದ'ದ ಬಗ್ಗೆ ಗೌರೀಶರ ವಿಶ್ಲೇಷಣೆ ಹೀಗೆ: ''ಗಾಂಧಿ ಸಮಾಜವಾದ ಎಂಬುದೇ ಇಲ್ಲ. ಅದೊಂದು ಮಾತಿನ ಮೋಸ. ಗಾಂಧೀಜಿ ಎಂದೂ ಸಮಾಜವಾದಿ ಇದ್ದಿಲ್ಲ. ಬಡವರ ಬಂಧುವಾಗುವುದು, ಬಡತನ ಹಂಚಿಕೊಳ್ಳುವುದು, ಬಡತನದ ವೈಭವೀಕರಣ, ಸಮಾಜವಾದವಲ್ಲ. ಇದೂ ಅಲ್ಲದೆ ಗಾಂಧೀವಾದಕ್ಕೆ ಕಾಂಗ್ರೆಸ್ ಹಿಂದಿನಿಂದಲೂ ಶುದ್ಧವಾದ ಅವಕಾಶ ಕೊಟ್ಟಿದ್ದೇ ಇಲ್ಲ. ಚಳುವಳಿಯ ಕಾಲಕ್ಕೆ ಮಾತ್ರ ಕಾಂಗ್ರೆಸ್ ಶ್ರೇಷ್ಠಿಗಳು ಬ್ರಿಟಿಷರ ವಿರುದ್ಧ ಗಾಂಧೀಜಿಯನ್ನು ಬಳಸಿಕೊಳ್ಳುತ್ತ ಬಂದರು. ಸ್ವಾತಂತ್ರ್ಯ ಬಂದಾಗಲೇ ಗಾಂಧೀಜಿ ಅತ್ಯಂತ ದುಃಖಿತರಾಗಿದ್ದರು. ೧೯೩೬ರಲ್ಲಿಯೇ ಅವರು ಕಾಂಗ್ರೆಸ್ ಬಿಟ್ಟು ಹರಿಜನ ಕಾರ್ಯಕ್ಕೆ



ಮೀಸಲಾಗಿ ದುಡಿಯಹತ್ತಿದರು. ಅರ್ಥಾತ್ ಗಾಂಧೀಜಿ ಅಯಶಸ್ವಿಯಾದರು ಎಂಬುದರಲ್ಲಿ ಹುರುಳಿಲ್ಲ.''

ಇಂತಹ ಸಾಹಿತ್ಯ ದಿಗ್ಗಜ ಡಾ|| ಗೌರೀಶ ಕಾಯ್ಕಿಣಿಯವರ ಅಸದೃಶ ಸೃಜನಶೀಲ ಸಾಹಿತ್ಯ ಸೃಷ್ಟಿ, ಶಿಕ್ಷಣ ಸೇವೆಯನ್ನು ಗುರುತಿಸಿ ಅವರಿಗೆ ಎಂದೋ ಜ್ಞಾನಪೀಠ ಪ್ರಶಸ್ತಿಯನ್ನು ನೀಡಿ ಗೌರವಿಸಬೇಕಾಗಿತ್ತು. ಆದರೆ ಅದೇಕೋ ಲಭಿಸಲಿಲ್ಲ. ತಮ್ಮ ಎರಡೂ ಕಣ್ಣುಗಳಲ್ಲಿನ ಶಸ್ತ್ರ ಚಿಕಿತ್ಸೆಯ ಬಾಧೆಯನ್ನೂ ಲೆಕ್ಕಿಸದೆ ಕನ್ನಡದ ಶ್ರೀಮಂತ ಸಾಹಿತ್ಯ ಲೋಕಕ್ಕೆ ಮೌಲಿಕ ಕೃತಿರತ್ನ ರಾಶಿಯನ್ನು ನೀಡಿದ ಗೌರೀಶ ಕಾಯ್ಕಿಣಿಯವರು ದಿನಾಂಕ ೧೪-೧೧-೨೦೦೨ರಂದು ಗೋಕರ್ಣದ ತಂಪಿನ ಸ್ವಗೃಹದಲ್ಲಿ ತಮ್ಮ ೯೦ನೆಯ ವಯಸ್ಸಿನಲ್ಲಿ ತೀರಿಕೊಂಡರು. ಕನ್ನಡದ ಜನತೆ ಭಾವಪೂರ್ಣ ಶ್ರದ್ಧಾಂಜಲಿ ಸಲ್ಲಿಸಿತು. ಇಷ್ಟಂತೂ ಸತ್ಯ, ಅವರ ರಾಶಿ ರಾಶಿ ಮೌಲಿಕ ಗ್ರಂಥಗಳು ಅವರ ಬಗೆಗೆ ಆಪ್ತವಾದ ಸಂಸ್ಮರಣೆಯನ್ನು ಅವರ ಮನೆಯ ಹಿಂದಣ ನೀಲಿಮ ಅರಬ್ಬೀ ಕಡಲ ಅನಂತ ಅಲೆಯಂತೆ ಕನ್ನಡಿಗರ ಎದೆಯಲ್ಲಿ ಚಿರಕಾಲ ಚಿಮ್ಮಿಸುತ್ತಿರಲಿ!

ಬಿ. ಪಿ. ಶಿವಾನಂದ ರಾವ್
ನಂ. ೭೯೫, ೬ನೇ ಮುಖ್ಯರಸ್ತೆ, ೧೨ನೇ ಅಡ್ಡರಸ್ತೆ, ಎಂ.ಸಿ.ಇ.ಸಿ.ಎಚ್.ಎಸ್. ಬಡಾವಣೆ
ಶಿವರಾಮ ಕಾರಂತ ನಗರ, ಬೆಂಗಳೂರು -೫೬೦ ೦೭೭

## ಸಂವೇದನೆ

ಬದುಕು ಒಂದು ಸಂವೇದನೆ. ಅಂದರೆ, ಮೂಲತಃ ವೇದನೆ. ಹೊರ ಪ್ರಚೋದನೆಗೆ ಜೀವಿ ತೋರಿಸುವ ಪ್ರತಿಕ್ರಿಯೆ – ಒಳಗೆ ಅರಿವಾಗಿ ಹೊರಗೆ ಕ್ರಿಯೆಯಾಗಿ. ಕೆಳ ತರಗತಿಯ ಪ್ರಾಣಿಗಳಲ್ಲಿ ಅರಿವಿಗಿಂತ ಕ್ರಿಯೆಯೇ ತೀವ್ರ. ತಾತ್ಕ್ಷಣಿಕ, ಮಾನವ ಮನೋದೇಹಿಯಾದ್ದರಿಂದ ಈ ಪ್ರತಿಕ್ರಿಯೆ ಜಟಿಲ ಸಂಕೀರ್ಣ. ಜತೆಗೆ ಆಂತರಿಕತೆಯಿಂದ ಕೂಡಿದ್ದು. ಆದ್ದರಿಂದ ಈ ಆಂತರಿಕ ಅರಿವು, ಪ್ರಜ್ಞೆ ಹೊರಗಿನ ವೇದನೆಗಳನ್ನು ಆಳುತ್ತದೆ. ರೂಢಿಯಿಂದ ಇಷ್ಟಾನಿಷ್ಟತೆಗಳಿಂದ ಅವನ್ನು ಅನುಕೂಲವೋ ಪ್ರತಿಕೂಲವೋ ಆಗಿ ಮಾರ್ಪಡಿಸುತ್ತದೆ.

ಆಗ ಕೇವಲ ಇಂದ್ರಿಯ ಪಾತಳಿಯು ವೇದನೆಯ ಮುಖ್ಯ ಒಡಲಾಗುತ್ತದೆ. ಸುಖ ಮತ್ತು ದುಃಖ ಹೊಸ ಆಯಾಮಗಳನ್ನು ತಾಳುತ್ತದೆ. ಹೊರಗಿನಿಂದ ಎಷ್ಟೇ ಕಷ್ಟವಾಗಿದ್ದರೂ ಒಳಗಿನಿಂದ ಈ ವೇದನೆಗಳು ಬೇಕೆನಿಸುತ್ತವೆ. ಬೆಲೆಯುಳ್ಳವೆನಿಸುತ್ತವೆ. ಇಲ್ಲವಾದರೆ ಮಾನವನ ಇತಿಹಾಸದಲ್ಲಿ ಭೋಗದಷ್ಟೇ ತ್ಯಾಗ, ಸ್ವಾರ್ಥದಷ್ಟೇ ಹುತಾತ್ಮತೆ ಮತ್ತೆ ಮತ್ತೆ ಆಕರ್ಷಕವಾಗುತ್ತಿದ್ದಿಲ್ಲ.

ಜೀವಿಗೆ ಜಡಸೃಷ್ಟಿಯ ಅನುಭವದಲ್ಲಿ ದುಃಖವೇ ಹೆಚ್ಚು. ಭಾವಲೋಕದಲ್ಲಿಯೂ ಹೆಚ್ಚು ಹೆಚ್ಚಿಗೆ ವಿರಹ, ವಿಯೋಗ, ನಿರಾಶೆ, ಶೋಕ, ನೋವು, ನರಳಿಕೆ ಇತ್ಯಾದಿ ತಪ್ಪಿದ್ದಲ್ಲ. ಅಂದಾಗ ಸುಖವೆಂಬುದೇನು ಈ ದುಃಖಪ್ರಪಂಚದಲ್ಲಿ? ಜಗತ್ತು ದುಃಖಮಯ ನಿಜ. ಆದರೆ ಆ ದುಃಖವನ್ನು ನಾವು ಪರರಿಗಾಗಿ ವಹಿಸಿದರೆ, ಸಹಿಸಿದರೆ ಅದೇ ಸುಖ. ತಾಯಿ ಮಗುವಿಗಾಗಿ, ಗೆಳತಿ ಗೆಳೆಯನಿಗಾಗಿ, ದೇಶಭಕ್ತ ದೇಶಕ್ಕಾಗಿ ಪಡುವ ಪಾಡೆಲ್ಲ ಅವರಿಗೆ ಸುಖವೇ. ಇನ್ನೊಂದು ಸುಖ - ಒಂದು ದುಃಖಕ್ಕೆ ಪ್ರತಿ ಪ್ರಚೋದಕವಾಗಿ ಹೂಡಿದ ದುಃಖ. ಕಣ್ಣುಬೇನೆಯವಿಗೆ ಅಮೃತಾಂಜನದಂತೆ! ಒಡಕ್ಕಾಲ ಮೆಟ್ಟಿನವನಿಗೆ ಮೊಣಸುಖ ಆದಂತೆ!

– ಗೌರೀಶ ಕಾಯ್ಕಿಣಿ: (ಸಮಗ್ರ ಸಂಪುಟ ೧೧)

# ಭೋಲಾರಾಮನ ಜೀವ

ಹಿಂದಿ ಮೂಲ :
**ಹರಿಶಂಕರ ಪರಸಾಯಿ**

ಕನ್ನಡಕ್ಕೆ :
**ಎಸ್. ಮಾಲತಿ**

**ಹೀ**ಗೆಂದೂ ಆಗಿರಲಿಲ್ಲ...

ಧರ್ಮರಾಜರು ಲಕ್ಷಾಂತರ ವರ್ಷಗಳಿಂದ ಮನುಷ್ಯರಿಗೆ, ಕರ್ಮ ಮತ್ತು ಶಿಫಾರಸ್ಸಿನ ಆಧಾರದ ಮೇಲೆ ಸ್ವರ್ಗ ಅಥವಾ ನರಕದಲ್ಲಿ ನಿವಾಸ ಸ್ಥಾನ 'ಅಲಾಟ್' ಮಾಡುತ್ತ ಬರುತ್ತಿದ್ದರು – ಆದರೆ ಹೀಗೆಂದೂ ಆಗಿರಲಿಲ್ಲ

ಎದುರಿಗೆ ಕುಳಿತಿದ್ದ ಚಿತ್ರಗುಪ್ತರು ಮತ್ತೆ ಮತ್ತೆ ಕನ್ನಡಕ ಒರೆಸುತ್ತ, ಮತ್ತೆ ಮತ್ತೆ ಉಗುಳನ್ನು ಬೆರಳಿಗೆ ಸವರಿ ಪುಟಗಳನ್ನು ತೆರೆಯುತ್ತ ರಿಜಿಸ್ಟರ್ ನೋಡುತ್ತಿದ್ದರು. ತಪ್ಪು ಏನೆಂದು ಗೊತ್ತಾಗುತ್ತಿರಲಿಲ್ಲ. ಕೊನೆಯಲ್ಲಿ ಅವರು ಬೇಸರಗೊಂಡು ರಿಜಿಸ್ಟರ್‌ಅನ್ನು ಎಷ್ಟು ಜೋರಾಗಿ ಮುಚ್ಚಿದ್ದರೆಂದರೆ, ಅದರ ಪುಟಗಳಲ್ಲಿ ನೊಣ ಸಿಕ್ಕಿಹಾಕಿಕೊಂಡಿತು. ಅದನ್ನು ಓಡಿಸುತ್ತ ಅವರು ಹೇಳಿದರು : "ಮಹಾರಾಜ್, ರೆಕಾರ್ಡ್ ಎಲ್ಲ ಸರಿಯಾಗಿದೆ. ಭೋಲಾರಾಮನ ಜೀವ ಐದು ದಿನಕ್ಕೆ ಮೊದಲು ದೇಹವನ್ನು ತ್ಯಜಿಸಿತು ಮತ್ತು ಯಮದೂತನ ಸಂಗಡ ಈ ಲೋಕಕ್ಕೆ ಹೊರಟಿತು, ಆದರೆ ಇಲ್ಲಿಗೆ ಈ ತನಕ ತಲುಪಿಲ್ಲ"

ಧರ್ಮರಾಜ ಕೇಳಿದನು, "ಮತ್ತೆ ಆ ದೂತ ಎಲ್ಲಿದ್ದಾನೆ ?"

"ಮಹಾರಾಜ, ಅವನೂ ನಾಪತ್ತೆಯಾಗಿದ್ದಾನೆ."

ಇದೇ ಸಮಯದಲ್ಲಿ ದ್ವಾರ ತೆರೆದುಕೊಂಡಿತು ಮತ್ತು ಒಬ್ಬ ಯಮದೂತ ಕಂಗಾಲಾಗಿ ಅಲ್ಲಿಗೆ ಬಂದ. ಅವನು ಕುರೂಪಿ. ಪರಿಶ್ರಮ, ತೊಂದರೆ ಮತ್ತು ಭಯದ ಕಾರಣಗಳಿಂದ ಇನ್ನೂ ವಿಕೃತವಾಗಿಹೋಗಿತ್ತು ಅವನ ಮುಖ. ಅವನನ್ನು ನೋಡುತ್ತಲೇ ಚಿತ್ರಗುಪ್ತರು ಚೀರಿದರು : "ಅರೆ, ನೀನು ಇಷ್ಟು ದಿನ ಎಲ್ಲಿದ್ದೆ? ಭೋಲಾರಾಮನ ಜೀವ ಎಲ್ಲಿದೆ ?"

ಯಮದೂತ ಕೈಮುಗಿದು ಹೇಳಿದ : "ದಯಾನಿಧಿ, ಏನಾಯಿತು ಎಂದು ನಾನು ಹೇಗೆ ಹೇಳಲಿ. ಇವತ್ತಿನ ತನಕ ನಾನು ಮೋಸ ಹೋಗಿರಲಿಲ್ಲ, ಆದರೆ, ಈಸಲ ಭೋಲಾರಾಮನ ಜೀವ ನನಗೆ ಕೈಕೊಟ್ಟಿತು. ಐದು ದಿನಗಳ ಮೊದಲು ಭೋಲಾರಾಮನ ಜೀವ ಅವನ ದೇಹವನ್ನು ತ್ಯಜಿಸಿದಾಗ ನಾನು ಅದನ್ನು ಹಿಡಿದು ಈ ಲೋಕಕ್ಕೆ ಯಾತ್ರೆಯನ್ನು ಆರಂಭಿಸಿದೆ. ನಗರದ ಹೊರಗಡೆ ನಾನು ಅದನ್ನು ತೆಗೆದುಕೊಂಡು ತೀವ್ರವಾದ ವಾಯುತರಂಗದ ಮೇಲೆ ಸವಾರಿ ಮಾಡುತ್ತಿದ್ದಾಗ, ಅದು ನನ್ನ ಮುಷ್ಟಿಯಿಂದ ಹಾಗೆಯೇ ತಪ್ಪಿಸಿಕೊಂಡು ಎಲ್ಲಿ ಮಾಯವಾಯಿತೋ ಗೊತ್ತಾಗಲೇ ಇಲ್ಲ. ಈ ಐದು ದಿನಗಳಲ್ಲಿ ನಾನು ಇಡೀ ಬ್ರಹ್ಮಾಂಡವನ್ನು ಶೋಧಿಸಿದ್ದೇನೆ, ಆದರೆ ಅದರ ಪತ್ತೆ ಹತ್ತಲಿಲ್ಲ."

ಧರ್ಮರಾಜರು ಕ್ರೋಧದಿಂದ ಹೇಳಿದರು : "ಮೂರ್ಖ, ಜೀವಗಳನ್ನು ತರುತ್ತ ತರುತ್ತ ಮುದುಕನಾಗಿದ್ದೀಯ. ಆದರೂ ಒಬ್ಬ ಮಾಮೂಲಿ ಮುದುಕನ ಜೀವ ನಿನಗೆ ಕೈಕೊಟ್ಟಿತು."

ದೂತ ತಲೆತಗ್ಗಿಸಿ ಹೇಳಿದ : "ಮಹಾರಾಜ, ನನ್ನ ಜಾಗ್ರತೆಯಲ್ಲಿ ಒಂದಿಷ್ಟೂ ಕುಂದಿರಲಿಲ್ಲ, ನನ್ನ ಈ ಪಳಗಿದ ಕೈಗಳಿಂದ ದೊಡ್ಡ ದೊಡ್ಡ ವಕೀಲರು ಕೂಡ ತಪ್ಪಿಸಿಕೊಂಡಿಲ್ಲ, ಆದರೆ, ಈ ಸಲವಂತೂ ಯಾವುದೋ ಇಂದ್ರಜಾಲವೇ ಆಗಿಹೋಯಿತು."

ಚಿತ್ರಗುಪ್ತ ಹೇಳಿದನು : "ಮಹಾರಾಜ, ಇವತ್ತಿನ ದಿನಗಳಲ್ಲಿ ಪೃಥ್ವಿಯಲ್ಲಿ ಈ ತರಹದ ವ್ಯವಹಾರ ತುಂಬ ನಡೆಯುತ್ತಿದೆ. ಜನರು ಸ್ನೇಹಿತರಿಗೆ ಹಣ್ಣುಗಳನ್ನು ಕಳುಹಿಸುತ್ತಾರೆ, ಅವುಗಳನ್ನು ರಸ್ತೆಯಲ್ಲಿಯೇ ರೈಲ್ವೆಯವರು ಹಾರಿಸಿಬಿಡುತ್ತಾರೆ. ಕಾಲುಚೀಲಗಳ ಪಾರ್ಸೆಲ್‌ನಲ್ಲಿರುವ ಕಾಲುಚೀಲಗಳನ್ನು ರೈಲ್ವೆ ಅಧಿಕಾರಿಗಳು ಧರಿಸಿಕೊಳ್ಳುತ್ತಾರೆ. ಗೂಡ್ಸ್‌ಟ್ರೈನಿನ ಬೋಗಿ ಬೋಗಿಗಳೇ ರಸ್ತೆಯಲ್ಲಿ ಮಾಯವಾಗುತ್ತವೆ. ಇನ್ನೂ ಒಂದು ಸಂಗತಿ ನಡೆಯುತ್ತಿದೆ. ರಾಜಕೀಯ ಪಕ್ಷಗಳ ಮುಖಂಡರು ವಿರೋಧಿ ಮುಖಂಡರನ್ನು ಅಪಹರಿಸಿ ಎಲ್ಲೋ ಬಂಧಿಸಿ ಇಡುತ್ತಾರೆ. ಎಲ್ಲಾದರೂ ಭೋಲಾರಾಮನ ಜೀವವನ್ನು ಕೂಡ ಯಾವುದೋ ವಿರೋಧಿಯೊಬ್ಬ ಸತ್ತ ನಂತರವೂ ಕೆಡುಕು ಮಾಡಲು ಅಪಹರಿಸಿರಬಹುದಲ್ಲವೇ ?"

ಧರ್ಮರಾಜ ವ್ಯಂಗ್ಯದಿಂದ ಚಿತ್ರಗುಪ್ತನ ಕಡೆ ನೋಡುತ್ತ ಹೇಳಿದ : "ನಿನಗೂ ನಿವೃತ್ತಿಹೊಂದುವ ವಯಸ್ಸು ಬಂತು. ಭೋಲಾರಾಮನಂತಹ ಅಮುಖ್ಯ, ದೀನ ಮನುಷ್ಯನ ಜೊತೆಗೆ ಯಾರಿಗೇನು ವ್ಯವಹಾರ ಇರುತ್ತದೆ ?"

ಇದೇ ಸಮಯದಲ್ಲಿ, ಎಲ್ಲಿಂದಲೋ ತಿರುಗುತ್ತ, ಸುತ್ತುತ್ತ ನಾರದ ಮುನಿಗಳು



ಅಲ್ಲಿಗೆ ಬಂದರು. ಚಿಂತೆಯಲ್ಲಿ ಕುಳಿತಿದ್ದ ಧರ್ಮರಾಜನನ್ನ ನೋಡಿ ಹೇಳಿದರು – ''ಯಾಕೆ ಧರ್ಮರಾಜ, ಏನು ಚಿಂತೆಮಾಡುತ್ತ ಕುಳಿತಿದ್ದೀ? ಏನು, ನರಕದಲ್ಲಿ ನಿವಾಸಸ್ಥಾನದ ಸಮಸ್ಯೆ ಇನ್ನೂ ಬಗೆಹರಿದಿಲ್ಲವಾ?''

ಧರ್ಮರಾಜ ಹೇಳಿದನು: ''ಅಲ್ಲಿನ ಸಮಸ್ಯೆ ಎಂದೋ ಬಗೆಹರಿಯಿತು ಮುನಿವರ್ಯರೇ. ಕಳೆದ ವರ್ಷಗಳಲ್ಲಿ ನರಕದಲ್ಲಿ ಬಹಳ ಒಳ್ಳೆಯ ಕುಶಲಕರ್ಮಿಗಳು ಬಂದಿದ್ದಾರೆ. ಪೂರಾ ಹಣ ತೆಗೆದುಕೊಂಡು ಕೆಟ್ಟ ಕಟ್ಟಡಗಳನ್ನು ಕಟ್ಟಿಸಿದ ಹಲವು ಗುತ್ತಿಗೆದಾರರಿದ್ದಾರೆ. ಗುತ್ತಿಗೆದಾರರೊಂದಿಗೆ ಸೇರಿ ಭಾರತದ ಪಂಚವಾರ್ಷಿಕ ಯೋಜನೆಗಳ ಹಣ ತಿಂದಿರುವ ದೊಡ್ಡ ದೊಡ್ಡ ಇಂಜಿನಿಯರ್‌ಗಳು ಕೂಡ ಬಂದಿದ್ದಾರೆ. ಯಾವತ್ತೂ ಕೆಲಸಕ್ಕೆ ಬರದಿದ್ದ ಕೂಲಿ ಕಾರ್ಮಿಕರ ಹಾಜರಿ ತುಂಬಿ ದುಡ್ಡು ಹೊಡೆದ ಮೇಲ್ವಿಚಾರಕರಿದ್ದಾರೆ. ಇವರು ಬಹಳ ಬೇಗ ನರಕದಲ್ಲಿ ಬಹಳ ಕಟ್ಟಡಗಳನ್ನು ಕಟ್ಟಿದ್ದಾರೆ. ಆ ಸಮಸ್ಯೆಯೇನೋ ಬಗೆಹರಿಯಿತು. ಭೋಲಾರಾಮ ಎಂಬ ಹೆಸರಿನ ಒಬ್ಬ ಮನುಷ್ಯನ ಮೃತ್ಯು ಐದು ದಿನಗಳ ಹಿಂದೆ ಆಯಿತು. ಅವನ ಜೀವವನ್ನು ಈ ದೂತ ಇಲ್ಲಿಗೆ ತರುತ್ತಿದ್ದ. ಆ ಜೀವ ರಸ್ತೆಯಲ್ಲಿ ಇವನಿಗೆ ಕೈಕೊಟ್ಟು ಓಡಿಹೋಯಿತು. ಇವನು ಇಡೀ ಬ್ರಹ್ಮಾಂಡವನ್ನು ಶೋಧಿಸಿದ್ದಾನೆ. ಆದರೆ ಅದು ಎಲ್ಲೂ ಸಿಗಲಿಲ್ಲ. ಒಂದುವೇಳೆ ಹೀಗಾಗಲು ಆರಂಭವಾದರೆ, ಪಾಪ-ಪುಣ್ಯಗಳಿಗಿರುವ ವ್ಯತ್ಯಾಸವೇ ಅಳಿಸಿ ಹೋದಂತಾಗುವುದು.''

## 'ಕಸ'

ಹೆಣ್ಣು ಹಿಂದೆ
'ಕಾಲಕಸ'ವಾಗಿದ್ದಳು!
(ಏನನ್ಯಾಯ?)
ಈಗ ಅವಳ ಹೊಕ್ಕುಳ 'ಕಸ'
ಹಲವು ಕಾಯಿಲೆಗಳಿಗೆ
ಮದ್ದಂತೆ!

ಸಿ.ಪಿ.ಕೆ
ಮೈಸೂರು

ನಾರದ ಕೇಳಿದ: ''ಅವನ ಮೇಲೆ ಆದಾಯ ತೆರಿಗೆ ಬಾಕಿ ಇತ್ತಾ? ಆದಾಯ ತೆರಿಗೆಯ ಜನ ತಡೆಹಿಡಿದಿದ್ದಾರೋ ಏನೋ...''

ಚಿತ್ರಗುಪ್ತ ಹೇಳಿದ: ''ಆದಾಯ ಇದ್ದರೆ ತಾನೆ ತೆರಿಗೆ ಬಾಕಿ ಇರೋದು. ಅವನು ಹಸಿವಿನಿಂದ ಸಾಯುತ್ತಿದ್ದ.''

ನಾರದ ಹೇಳಿದ: ''ವಿಷಯ ಮಜವಾಗಿದೆ. ಒಳ್ಳೇದು, ಅವನ ಹೆಸರು- ವಿಳಾಸವನ್ನಾದರೂ ಹೇಳು. ನಾನು ಪೃಥ್ವಿಗೆ ಹೋಗುತ್ತೇನೆ.''

ಚಿತ್ರಗುಪ್ತ ರಿಜಿಸ್ಟರ್ ನೋಡಿ ಹೇಳಿದ: ''ಅವನ ಹೆಸರು ಭೋಲಾರಾಮ ಎಂದಿತ್ತು. ಜಬಲ್‌ಪುರ ಪಟ್ಟಣದ, ಧಮಾಪುರ ಮೊಹಲ್ಲಾದಲ್ಲಿ, ಚರಂಡಿ ಬದಿಯ ಒಂದೂವರೆ ಕೋಣೆಯ ಬಡಪಾಯಿ ಮನೆಯಲ್ಲಿ ಅವನು ಕುಟುಂಬ ಸಮೇತ ವಾಸಿಸುತ್ತಿದ್ದ. ಅವನಿಗೊಬ್ಬ ಹೆಂಡತಿಯಿದ್ದಳು. ಎರಡು ಗಂಡು ಮಕ್ಕಳು ಮತ್ತು ಒಬ್ಬ ಮಗಳು, ವಯಸ್ಸು ಸುಮಾರು ಅರವತ್ತು ವರ್ಷ. ಸರ್ಕಾರಿ ನೌಕರನಾಗಿದ್ದ, ಐದು ವರ್ಷಗಳ ಹಿಂದೆ ನಿವೃತ್ತಿ ಹೊಂದಿದ್ದ. ಒಂದು ವರ್ಷದಿಂದ ಅವನು ಮನೆಯ ಬಾಡಿಗೆ ಕೊಟ್ಟಿರಲಿಲ್ಲ. ಆದ್ದರಿಂದ ಮನೆಯ ಮಾಲೀಕ ಅವನನ್ನು ಓಡಿಸಬೇಕೆಂದಿದ್ದ. ಇಷ್ಟರಲ್ಲಿ ಭೋಲಾರಾಮ ಲೋಕವನ್ನೇ ತ್ಯಜಿಸಿದ. ಇವತ್ತಿಗೆ ಐದನೇ ದಿನ. ಮನೆಯ ಮಾಲೀಕ, ಅವನು ನಿಜವಾದ ಮನೆಯ ಮಾಲೀಕನಾಗಿದ್ದರೆ, ಭೋಲಾರಾಮ ಸಾಯುತ್ತಲೇ, ಅವನ ಕುಟುಂಬವನ್ನು ಮನೆಯಿಂದ ಬಿಡಿಸಿರುವುದು ಬಹಳ ಸಂಭವನೀಯ. ಆದ್ದರಿಂದ ತಾವು ಅವನ ಕುಟುಂಬದ ಶೋಧದಲ್ಲಿ ಬಹಳ ಸುತ್ತಾಡಬೇಕಾಗುತ್ತದೆ.''

ತಾಯಿ-ಮಗಳ ಸಮ್ಮಿಳಿತ ಆಕ್ರಂದನದಿಂದಲೇ ನಾರದರು ಭೋಲಾರಾಮನ ಮನೆಯನ್ನು ಪತ್ತೆ ಹಚ್ಚಿದರು. ಬಾಗಿಲಿಗೆ ಹೋಗಿ ಅವರು ಕೂಗಿದರು: ''ನಾರಾಯಣ... ನಾರಾಯಣ.'' ಮಗಳು ನೋಡಿ ಹೇಳಿದಳು: ''ಮುಂದೆ ಹೋಗಿ ಮಹಾಸ್ವಾಮಿ.'' ನಾರದರು ಹೇಳಿದರು: ''ನನಗೆ ಭಿಕ್ಷೆ ಬೇಡ. ನನಗೆ ಭೋಲಾರಾಮನ ಬಗ್ಗೆ ಏನನ್ನೋ ಕೇಳುವುದಿದೆ. ನಿನ್ನ ಅಮ್ಮನನ್ನು ಸ್ವಲ್ಪ ಹೊರಗೆ ಕಳುಹಿಸು ಮಗಳೇ.''

ಭೋಲಾರಾಮನ ಹೆಂಡತಿ ಹೊರಗೆ ಬಂದಳು. ನಾರದರು ಕೇಳಿದರು: ''ತಾಯಿ, ಭೋಲಾರಾಮನಿಗೆ ಏನು ಖಾಯಿಲೆ ಇತ್ತು?''

''ಏನು ಹೇಳಲಿ? ಬಡತನದ ಖಾಯಿಲೆ ಇತ್ತು. ಐದು ವರ್ಷ ಆಯ್ತು. ಪೆನ್ಶನ್‌ಗೆ ಕಾಯ್ತಾ ಇದ್ದರು. ಆದರೆ, ಪೆನ್ಶನ್ ಈವರೆಗೂ ಸಿಕ್ಕಿಲ್ಲ. ಪ್ರತಿ ಹತ್ತು-ಹದಿನೈದು ದಿನಗಳಿಗೊಮ್ಮೆ ಒಂದು ಅರ್ಜಿ ಕೊಡುತ್ತಿದ್ದರು. ಆದರೆ ಅಲ್ಲಿಂದ ಜವಾಬೇ ಬರುತ್ತಿರಲಿಲ್ಲ, ಬಂದರೂ, 'ನಿನ್ನ ಪೆನ್ಶನ್‌ನ ವಿಷಯದಲ್ಲಿ ವಿಚಾರ ಮಾಡುತ್ತಿದ್ದೇವೆ', ಎಂದಾಗಿರುತ್ತಿತ್ತು. ಈ ಐದು ವರ್ಷಗಳಲ್ಲಿ ನನ್ನ ಎಲ್ಲ ಒಡವೆಗಳನ್ನೂ ಮಾರಿ ತಿಂದುಹಾಕಿದ್ದೇವೆ. ಆನಂತರ ಪಾತ್ರೆಗಳನ್ನು ಮಾರಿದೆವು. ಈಗ ಏನೂ ಉಳಿದಿರಲಿಲ್ಲ. ಉಪವಾಸ ಮಾಡುತ್ತಿದ್ದೆವು. ಚಿಂತೆಯಲ್ಲಿ ಸವೆಯುತ್ತ, ಹಸಿವೆಯಲ್ಲಿ ಸಾಯುತ್ತ ಅವರು ಕೊನೆಯುಸಿರೆಳೆದರು.''

ನಾರದರು ಹೇಳಿದರು: ''ಏನು ಮಾಡ್ತೀಯ ತಾಯಿ? ಅವರದ್ದು ಅಷ್ಟೇ ಆಯುಷ್ಯವಿತ್ತು.''

''ಹಾಗೆ ಹೇಳಬೇಡಿ ಮಹಾಸ್ವಾಮಿ. ಆಯುಷ್ಯವೇನೋ ತುಂಬ ಇತ್ತು. ತಿಂಗಳಿಗೆ ಐವತ್ತು - ಅರವತ್ತು ರೂಪಾಯಿ ಪೆನ್ಶನ್ ಸಿಕ್ಕಿದ್ದರೆ, ಬೇರೆ ಇನ್ನೇನೋ ಕೆಲಸ ಮಾಡಿ ಜೀವನ ಸಾಗುತ್ತಿತ್ತು. ಆದರೆ ಏನು ಮಾಡೋದು? ನೌಕರಿಯಿಂದ ನಿವೃತ್ತಿಯಾಗಿ ಐದು ವರ್ಷಗಳಾದರೂ ಈವರೆಗೂ ಒಂದು ಕಾಸೂ ಸಿಗಲಿಲ್ಲ.''

ದುಃಖದ ಕಥೆಯನ್ನು ಕೇಳುವಷ್ಟು ಪುರಸೊತ್ತು ನಾರದರಿಗಿರಲಿಲ್ಲ. ಅವರು ವಿಷಯಕ್ಕೆ ಬಂದರು. ''ತಾಯಿ, ಅವರಿಗೆ ಇಲ್ಲಿ ಯಾರೊಂದಿಗಾದರೂ

ವಿಶೇಷ ಪ್ರೇಮವಿತ್ತೇ... ಅದರಲ್ಲಿ ಅವರ ಮನಸ್ಸು ತೊಡಗಿತ್ತೇ? ಅದನ್ನಾದರೂ ಹೇಳು.''

ಪತ್ನಿ ಹೇಳಿದಳು: ''ಮಹಾಸ್ವಾಮಿ, ವಿಶೇಷ ಪ್ರೇಮವೇನಿದ್ದರೂ ತನ್ನ ಮಕ್ಕಳು-ಮರಿಯೊಂದಿಗೆ ಇರುತ್ತದೆ.''

''ಅಲ್ಲ, ಕುಟುಂಬದ ಹೊರಗೆಯೂ ಇರಲಿಕ್ಕೆ ಸಾಧ್ಯವಿದೆ. ಅಂದರೆ, ಯಾವುದಾದರೂ ಹೆಂಗಸು...''

ಹೆಂಡತಿ ನಾರದರತ್ತ ದುರುಗುಟ್ಟಿ ನೋಡಿ ಹೇಳಿದಳು: ''ಅಪದ್ಧ ಮಾತಾಡಬೇಡಿ ಮಹಾಸ್ವಾಮಿ. ನೀವು ಸಾಧುಗಳು, ಯಾರೋ ಲುಚ್ಚ- ಲಫಂಗರಲ್ಲ. ಜೀವನವಿಡೀ ಅವರು ಬೇರೆ ಸ್ತ್ರೀಯರನ್ನು ಕಣ್ಣೆತ್ತಿಯೂ ನೋಡಲಿಲ್ಲ.''

ನಾರದರು ನಕ್ಕು ಹೇಳಿದರು: ''ಹಾಂ, ನೀನು ಹೀಗೆ ಯೋಚಿಸುವುದು ಸರಿಯಾಗಿದೆ. ಈ ಭ್ರಮೆಯೇ ಒಳ್ಳೆ ಗಾರ್ಹಸ್ಥ್ಯಕ್ಕೆ ಆಧಾರ. ಒಳ್ಳೇದು ತಾಯಿ, ನಾನು ಹೊರಟೆ.''

ಹೆಂಡತಿ ಹೇಳಿದರು: ''ಮಹಾಸ್ವಾಮಿ, ತಾವು ಸಾಧುಗಳು, ಸಿದ್ಧಿಪುರುಷರು. ಅವರ ಹಿಡಿದಿಟ್ಟಿರುವ ಪೆನ್ಶನ್ ಸಿಗುವ ಹಾಗೆ ಏನಾದರೂ ಮಾಡಲಾರಿರಾ? ಕೆಲವು ದಿನಗಳಿಗಾದರೂ ಈ ಮಕ್ಕಳ ಹೊಟ್ಟೆ ತುಂಬುತ್ತದೆ.''

ನಾರದರಿಗೆ ದಯೆ ಬಂತು. ಅವರು ಹೇಳಲು ಆರಂಭಿಸಿದರು: ''ಸಾಧುಗಳ ಮಾತನ್ನು ಯಾರು ಒಪ್ಪುತ್ತಾರೆ? ಇಲ್ಲಿ ನನಗ್ಯಾವ ಮಠವೂ ಇಲ್ಲ. ಆದರೂ ನಾನು ಸರ್ಕಾರಿ ಕಛೇರಿಗೆ ಹೋಗಿ ಪ್ರಯತ್ನ ಮಾಡುತ್ತೀನಿ.''

ಅಲ್ಲಿಂದ ಹೊರಟು ನಾರದರು ಸರ್ಕಾರಿ ಕಛೇರಿ ತಲುಪಿದರು. ಅಲ್ಲಿ ಮೊದಲನೇ ಕೋಣೆಯಲ್ಲಿ ಕುಳಿತಿದ್ದ ಬಾಬುವಿನ ಜೊತೆ ಅವರು ಭೋಲಾರಾಮನ ಕೇಸ್ ಬಗ್ಗೆ ಮಾತನಾಡಿದರು. ಆ ಬಾಬು ಅವರನ್ನು ಗಮನವಿಟ್ಟು ನೋಡಿ ಹೇಳಿದ: ''ಭೋಲಾರಾಮ ಅರ್ಜಿಗಳನ್ನೇನೋ ಕಳಿಸಿದ್ದ, ಆದರೆ ಅದರ ಮೇಲೆ ಭಾರ ಇಟ್ಟಿರಲಿಲ್ಲ. ಆದ್ದರಿಂದ ಅವು ಎಲ್ಲೋ ಹಾರಿಹೋಗಿರಬೇಕು.''

ನಾರದರು ಹೇಳಿದರು: ''ಭಾಯೀ, ಇಲ್ಲಿ ಬಹಳ ಪೇಪರ್‌ವೈಟ್ ಇಟ್ಟಿದ್ದೀರಿ. ಇವನ್ನ್ಯಾಕೆ ಇಡಲಿಲ್ಲ?''

ಬಾಬು ನಗುತ್ತಾ, ''ತಾವು ಸಾಧುಗಳು. ತಮಗೆ ಈ ಜಗತ್ತಿನ ರಿವಾಜುಗಳು ಅರ್ಥವಾಗೋದಿಲ್ಲ. ಅರ್ಜಿಗಳು ಪೇಪರ್‌ವೈಟ್‌ನಿಂದ ಗಟ್ಟಿಯಾಗಿ ಕೂರುವುದಿಲ್ಲ... ಸರಿ. ತಾವು ಆ ಕೋಣೆಯಲ್ಲಿ ಕುಳಿತಿರುವ ಬಾಬುವಿನೊಂದಿಗೆ ಭೇಟಿ ಮಾಡಿ'' ಎಂದ.

ನಾರದರು ಆ ಬಾಬುವಿನ ಬಳಿ ಬಂದರು. ಅವನು ಮೂರನೆಯವರ ಬಳಿ ಕಳುಹಿಸಿದ, ಮೂರನೆಯವನು ನಾಲ್ಕನೆಯವನ ಬಳಿ, ನಾಲ್ಕನೆಯವನು ಐದನೆಯವನ ಬಳಿ. ನಾರದರು ಇಪ್ಪತ್ತೈದು-ಮೂವತ್ತು ಬಾಬುಗಳು ಮತ್ತು ಅಧಿಕಾರಿಗಳ ಬಳಿ ಸುತ್ತಿ ಬಂದಾಗ, ಒಬ್ಬ ಜವಾನ ಹೇಳಿದ: ''ಮಹಾಸ್ವಾಮಿ, ಈ ಜಂಜಾಟದಲ್ಲಿ ನೀವೇಕೆ ಬಿದ್ದಿರಿ. ಒಂದು ವೇಳೆ ತಾವು ವರ್ಷವಿಡೀ ಸುತ್ತಿದರೂ ಕೆಲಸ ಆಗೋದಿಲ್ಲ. ತಾವು ನೇರವಾಗಿ ದೊಡ್ಡ ಸಾಹೇಬರನ್ನು ಕಾಣಿ. ಅವರನ್ನು ಖುಷಿ ಪಡಿಸಿದಿರೋ ಈಗಲೇ ಕೆಲಸ ಆಗತ್ತೆ.''

ನಾರದರು ದೊಡ್ಡ ಸಾಹೇಬರ ಕೋಣೆಗೆ ಬಂದರು. ಹೊರಗೆ ಜವಾನ ತೂಕಡಿಸುತ್ತಿದ್ದ. ಆದ್ದರಿಂದ ಅವರನ್ನು ಯಾರೂ ತಡೆಯಲಿಲ್ಲ. ಅವರು ವಿಸಿಟಿಂಗ್ ಕಾರ್ಡ್ ಕಳುಹಿಸದೆ ಬಂದದ್ದನ್ನು ನೋಡಿ ಸಾಹೇಬರಿಗೆ ಬಹಳ ಕೋಪ ಬಂತು. ''ಇದನ್ನೇನು ದೇವಸ್ಥಾನ- ಗೀವಸ್ಥಾನ ಅಂತ ತಿಳಿದುಕೊಂಡಿದ್ದೀಯೇನು? ಧಡ ಧಡ ಒಳಗೆ ಬಂದಿದ್ದೀಯ. ಚೀಟಿ ಯಾಕೆ ಕಳಿಸಲಿಲ್ಲ?''

ನಾರದರು ಹೇಳಿದರು: ''ಹೇಗೆ ಕಳಿಸಲಿ? ಜವಾನ ನಿದ್ದೆ ಮಾಡುತ್ತಿದ್ದಾನೆ.''

''ಏನಾಗಬೇಕಿತ್ತು?'' ಸಾಹೇಬ ಜಬರ್ದಸ್ತಿನಿಂದ ಕೇಳಿದ.

ನಾರದರು ಭೋಲಾರಾಮನ ಪೆನ್ಶನ್ ಕೇಸ್ ಹೇಳಿದರು.

ಸಾಹೇಬರು ಹೇಳಿದರು: ''ತಾವು ವಿರಾಗಿ ಇದ್ದೀರಿ. ಕಛೇರಿಗಳ ರೀತಿ-ರಿವಾಜುಗಳು ನಿಮಗೆ ಗೊತ್ತಿಲ್ಲ. ನಿಜ ಹೇಳಬೇಕೆಂದರೆ ಭೋಲಾರಾಮ ತಪ್ಪು ಮಾಡಿದ್ದಾನೆ. ಇದೂ ಒಂದು ಮಂದಿರ. ಇಲ್ಲೂ ದಾನ-ಪುಣ್ಯ ಮಾಡಬೇಕಾಗುತ್ತದೆ, ಕಾಣಿಕೆ ಕೊಡ ಬೇಕಾಗುತ್ತದೆ. ತಾವು ಭೋಲಾರಾಮನ ಆತ್ಮೀಯರಂತೆ ಕಾಣುತ್ತೀರಿ. ಭೋಲಾರಾಮನ ಅರ್ಜಿಗಳು ಹಾರಿಹೋಗುತ್ತಿವೆ, ಅವುಗಳ ಮೇಲೆ ಭಾರ ಇಡಿರಿ.''

ಮತ್ತೆ ಇಲ್ಲಿ ಭಾರದ ಸಮಸ್ಯೆ ಬಂದಿತಲ್ಲ ಎಂದು ನಾರದರು ಯೋಚಿಸಿದರು. ಸಾಹೇಬರು ಹೇಳಿದರು: ''ಭಾಯೀ, ಸರ್ಕಾರಿ ಹಣದ ವಿಚಾರ ಇದು. ಪೆನ್ಶನ್‌ನ ಕೇಸು ಇಪ್ಪತ್ತು ಕಛೇರಿಗಳಿಗೆ ಹೋಗುತ್ತೆ, ತಡವಾಗೇ ಆಗುತ್ತದೆ. ಒಂದೇ ಮಾತನ್ನು ಇಪ್ಪತ್ತು ಸಲ ಇಪ್ಪತ್ತು ಜಾಗಗಳಲ್ಲಿ ಬರೆಯಬೇಕಾಗುತ್ತದೆ, ಆಗ ಕೆಲಸ ಆಗುತ್ತದೆ. ಎಷ್ಟು ಪೆನ್ಶನ್ ಸಿಗುತ್ತದೋ ಅಷ್ಟೇ ಬೆಲೆಯ ಸ್ಟೇಷನರಿ ಖರ್ಚಾಗುತ್ತದೆ. ಹಾಂ... ಬೇಗ ಕೂಡ ಆಗಬಹುದು, ಆದರೆ...''

ನಾರದರು, ''ಆದರೆ... ಏನು'', ಎಂದು ಕೇಳಿದರು.

ಸಾಹೇಬ ಕುಟಿಲ ಮುಗುಳ್ನಗೆಯೊಂದಿಗೆ ಹೇಳಿದ: ''ಆದರೆ ಭಾರ ಬೇಕು. ತಮಗೆ ತಿಳಿಯಲಿಲ್ಲ. ಈ ನಿಮ್ಮ ಸುಂದರ ವೀಣೆ ಇದೆಯಲ್ಲ, ಇದರ ಭಾರವನ್ನು ಭೋಲಾರಾಮನ ಅರ್ಜಿಗಳ ಮೇಲೆ ಇಡಬಹುದಾಗಿದೆ. ನನ್ನ ಮಗಳೂ ಸಂಗೀತ ಕಲಿಯುತ್ತಾಳೆ. ಇದನ್ನು ನಾನು ಅವಳಿಗೆ ಕೊಡುತ್ತೇನೆ. ಸಾಧುಗಳ ವೀಣೆಯಿಂದಂತೂ ಇನ್ನೂ ಒಳ್ಳೆಯ ಸ್ವರ ಹೊರಡುತ್ತದೆ. ಹುಡುಗಿ ಬೇಗನೆ ಸಂಗೀತ ಕಲಿತರೆ, ಅವಳ ಮದುವೆ ಆಗುತ್ತದೆ.''

ತನ್ನ ವೀಣೆಯ ಮೇಲೆ ಕಣ್ಣು ಹಾಕಿದ್ದನ್ನು ಕಂಡು ನಾರದರು ಗಾಬರಿಗೊಂಡರು. ಆದರೆ ಸಾವರಿಸಿಕೊಂಡು ವೀಣೆಯನ್ನು ಮೇಜಿನ ಮೇಲಿಟ್ಟು ಹೇಳಿದರು: ''ಇದೋ ತಗೊಳ್ಳಿ. ಈಗ ಸ್ವಲ್ಪ ಬೇಗ ಅವನ ಪೆನ್ಶನ್ ಆರ್ಡರ್ ತೆಗೆದುಕೊಡಿ.''

ಸಾಹೇಬರು ಪ್ರಸನ್ನತೆಯಿಂದ ಅವರಿಗೊಂದು ಕುರ್ಚಿ ಕೊಟ್ಟರು, ವೀಣೆಯನ್ನು ಒಂದು ಮೂಲೆಯಲ್ಲಿರಿಸಿ ಗಂಟೆ ಬಾರಿಸಿದರು. ಜವಾನ ಹಾಜರಾದ.

ಸಾಹೇಬರು ಅಪ್ಪಣೆ ಕೊಟ್ಟರು: ''ದೊಡ್ಡ ಬಾಬುವಿನಿಂದ ಭೋಲಾರಾಮನ ಕೇಸಿನ ಫೈಲ್ ತೆಗೆದುಕೊಂಡು ಬಾ.''

ಸ್ವಲ್ಪಹೊತ್ತಿನ ನಂತರ ಜವಾನ ನೂರು-ನೂರೈವತ್ತು ಅರ್ಜಿಗಳಿರುವ ಭೋಲಾರಾಮನ ಫೈಲನ್ನು ತಂದ. ಅದರಲ್ಲಿ ಪೆನ್ಶನ್‌ನ ಪತ್ರಗಳೂ ಇದ್ದವು. ಸಾಹೇಬರು ಫೈಲಿನ ಮೇಲಿರುವ ಹೆಸರು ನೋಡಿ, ದೃಢಪಡಿಸಿಕೊಳ್ಳಲು ಕೇಳಿದರು: ''ಏನು ಹೆಸರು ಹೇಳಿದ್ರಿ ನೀವು, ಸಾಧೂಜಿ?''

ಸಾಹೇಬರಿಗೆ ಕೊಂಚ ಕಿವಿ ದೂರವೆಂದು ನಾರದರಿಗೆ ತಿಳಿಯಿತು. ಆದ್ದರಿಂದ ಜೋರಾಗಿ ಹೇಳಿದರು: ''ಭೋಲಾರಾಮ್''. ತಕ್ಷಣ ಫೈಲ್‌ನಿಂದ ದನಿ ಬಂತು: ''ಯಾರು ಕರೆಯುತ್ತಿದ್ದಾರೆ ನನ್ನ? ಪೋಸ್ಟ್‌ಮ್ಯಾನ್ ಏನು? ಹಾಗಾದರೆ ಪೆನ್ಶನ್‌ನ ಆರ್ಡರ್ ಬಂತು.''

ಸಾಹೇಬರು ಹೆದರಿ ಕುರ್ಚಿಯಿಂದ ಕೆಳಗೆ ಬಿದ್ದರು. ನಾರದರಿಗೂ ಆಶ್ಚರ್ಯವಾಯಿತು. ಆದರೆ ಮತ್ತೊಂದು ಕ್ಷಣದಲ್ಲಿ ಅವರಿಗೆ ಅರ್ಥವಾಯಿತು. ಹೇಳಿದರು: ''ಭೋಲಾರಾಮ, ನೀನು ಭೋಲಾರಾಮನ ಜೀವ ಏನು?''

''ಹೂ'' ಎಂದು ದನಿ ಬಂತು.

ನಾರದರು ಹೇಳಿದರು: ''ನಾನು ನಾರದ. ನಾನು ನಿನ್ನನ್ನು ಕರೆದುಕೊಂಡು ಹೋಗಲು ಬಂದಿದ್ದೇನೆ. ನಡಿ, ಸ್ವರ್ಗದಲ್ಲಿ ನಿನಗಾಗಿ ಕಾಯುತ್ತಿದ್ದಾರೆ.''

ದನಿ ಎಂದಿತು, ''ನಾನು ಬರೋದಿಲ್ಲ. ನಾನು ಪೆನ್ಶನ್‌ನ ಅರ್ಜಿಗಳಲ್ಲಿ ಸಿಕ್ಕಿಹಾಕಿ ಕೊಂಡಿದ್ದೇನೆ. ನನ್ನ ಮನಸ್ಸೆಲ್ಲ ಇಲ್ಲೇ ಇದೆ. ನಾನು ನನ್ನ ಅರ್ಜಿಗಳನ್ನು ಬಿಟ್ಟು ಬರಲಾರೆ.''

ಹಿಂದಿ ಮೂಲ : ಹರಿಶಂಕರ ಪರಸಾಯಿ ಕನ್ನಡಕ್ಕೆ : ಎಸ್. ಮಾಲತಿ
'ಮಹಾಲಸ ನಿಲಯ', ಜೋಗ ರಸ್ತೆ, ಸಾಗರ - ೫೭೭ ೪೦೧, ಶಿವಮೊಗ್ಗ ಜಿಲ್ಲೆ

ಡಾ॥ ವೀರೇಶ ಬಡಿಗೇರ



# ಅಜಿತನಾಥ ಪುರಾಣ ನನ್ನ ಓದು

> ಅಜಿತ ತೀರ್ಥಂಕರ ಪುರಾಣವು ಜೈನ ತೀರ್ಥಂಕರ ಪುರಾಣವೂ ಆಗಿರುವುದರ ಜೊತೆಗೆ ಕನ್ನಡ ನಾಡಿನ ಆವರಣವನ್ನು ಕಟ್ಟಿಕೊಡುವ ಕಥಾನಕವೂ ಆಗಿ ಮುಖ್ಯವಾಗುತ್ತದೆ. ಅತ್ತಿಮಬ್ಬೆಯ ಸಂಕಥನವೊಂದನ್ನು ಕಟ್ಟಿಕೊಡುವ ಮೂಲಕ ಪುರಾಣ ಕಾವ್ಯಕ್ಕೆ ಚಾರಿತ್ರಿಕ ಸಂಬಂಧವನ್ನು ಕಲ್ಪಿಸಿಕೊಡುತ್ತಾನೆ ರನ್ನ.



ಒಂದನೇ ಗುಣವರ್ಮ ಲೌಕಿಕ (ಶೂದ್ರಕ) ಹಾಗೂ ಆಗಮಿಕ (ಹರಿವಂಶ) ಎನ್ನುವ ವರ್ಗೀಕೃತ ಸಾಹಿತ್ಯ ಮಾದರಿಯೊಂದನ್ನು ಆರಂಭಿಸಿದ ಮೊದಲಿಗ. ಕನ್ನಡದಲ್ಲಿ ಈ ಮಾದರಿಯನ್ನು ಹೊಸ ರೀತಿಯಲ್ಲಿ ಬಳಸಿದವನು ಪಂಪ. ರಾಜಕೀಯ ಹಾಗೂ ಜಾತಿ ನೆಲೆಯಲ್ಲೇ ನಾಯಕನನ್ನು ಸೃಷ್ಟಿಸುವ, ಅನುಯಾಯಿಗಳನ್ನು ಬೆಳೆಸುವ, ಆಡಳಿತ ನಡೆಸುವ ಕ್ರಮಗಳು ಚರಿತ್ರೆಯಲ್ಲಿ ಢಾಳಾಗಿ ಕಾಣುತ್ತವೆ. ಈ ಭೇದ ಕಲ್ಪನೆಗೆ ಲೌಕಿಕ ಹಾಗೂ ಆಗಮಿಕ ಎನ್ನುವ ವಿಂಗಡಣಾ ಕ್ರಮಗಳು ಹೇಳಿ ಮಾಡಿಸಿದಂತೆ ದೊರೆತವು. ಲೌಕಿಕ ಕೃತಿಗಳು ಆಶ್ರಯದಾತ ರಾಜನ ಜೀವನ ಚರಿತೆ ತತ್ಕಾಲೀನ ರಾಜಕೀಯ ಹಾಗೂ ಸಾಮಾಜಿಕ ಜೀವನವನ್ನು ತಿಳಿಸುವಲ್ಲಿ ಗಮನ ಹರಿಸಿದರೆ. ಆಗಮಿಕ ಕಾವ್ಯಗಳು ತೀರ್ಥಂಕರರು, ಚಕ್ರವರ್ತಿಗಳು, ಮಹಾಪುರುಷರು ಇವರ ಜೀವನ ಚರಿತ್ರೆಗೆ, ಜೈನಧರ್ಮ ಪ್ರಸಾರಕ್ಕೆ ವಾಹಕಗಳಾದವು. ಈ ವಿಭೇದ ಕಲ್ಪನೆ ಪಂಪನ ನಂತರ ಬಂದ ಪೊನ್ನ, ರನ್ನರಲ್ಲೂ ಬೆಳೆದುಬಂದಿತು.

ತೀರ್ಥಂಕರರ ಚರಿತೆಗಳನ್ನು, ಪುರಾಣಗಳನ್ನಾಗಿ ರೂಪಿಸುವಲ್ಲಿ ಎದುರಾಗದ ಬಿಕ್ಕಟ್ಟು ವೈದಿಕ ಪರಂಪರೆಯ ರಾಮಾಯಣ, ಮಹಾಭಾರತಗಳ ಕಥಾವಸ್ತುಗಳನ್ನು ಆರಿಸಿಕೊಂಡು ಅದರಲ್ಲೂ ವೈದಿಕ ಆಳರಸರ ಆಶ್ರಯದಲ್ಲಿದ್ದು ಅವರು ಸಂಪ್ರೀತಗೊಳ್ಳುವಂತೆ ಕಥಾನಾಯಕರೊಂದಿಗೆ ಸಮೀಕರಿಸಿ ಕೃತಿ ರಚಿಸುವ ಬಹುದೊಡ್ಡ ಆತಂಕಗಳನ್ನು ಪಂಪನಂತೆ ರನ್ನನೂ ಎದುರಿಸಬೇಕಾಯಿತು.

ರನ್ನನು 'ಸಾಹಸಭೀಮ ವಿಜಯ'ದಲ್ಲಿ ಸತ್ಯಾಶ್ರಯನ ವೀರಗುಣವನ್ನು, ಅಜಿತ ತೀರ್ಥಂಕರ ಪುರಾಣದಲ್ಲಿ ಅತ್ತಿಮಬ್ಬೆಯ ದಾನಗುಣವನ್ನು ವಿವರಿಸಿದ್ದಾನೆ. ಆ ಕಾಲದ ಪ್ರಮುಖ ಮೌಲ್ಯಗಳಾದ ವೀರ ಹಾಗೂ ತ್ಯಾಗ ಗುಣಗಳ ಪ್ರತಿಮೆಯನ್ನಾಗಿ ತನ್ನೆರಡು ಕಾವ್ಯಗಳನ್ನು ರನ್ನ ರಚಿಸಿದ್ದಾನೆ. ಆ ಮೂಲಕ ಆಶ್ರಿತ ಚಕ್ರವರ್ತಿ ಇಱೆವಬೆಡಂಗ ಸತ್ಯಾಶ್ರಯನ ರಾಜಾಶ್ರಯ ಮತ್ತು ದಾನಚಿಂತಾಮಣಿ ಅತ್ತಿಮಬ್ಬೆಯ ಕೃಪಾಶ್ರಯಗಳ ಸಮಾನ ಪ್ರೀತಿಗೆ ಪಾತ್ರನಾಗಿದ್ದಾನೆ. ಇಱೆವಬೆಡಂಗ ಮತ್ತು ಮಹಾಭಾರತದ ಭೀಮನ ಪಾತ್ರಗಳ ಸಮೀಕರಣವು ಸಾಹಸ ಭೀಮವಿಜಯದ ಪರಿಕಲ್ಪನೆಯಾದರೆ, ಜೈನ ಪುರಾಣ ಕಾವ್ಯದ ಒಳಗೆ ಅತ್ತಿಮಬ್ಬೆಯ ಚರಿತೆಯನ್ನು ಅಳವಡಿಸಿ ಶಾಂತಿ ಹಾಗೂ ದಾನದ ಸಮೀಕರಣವನ್ನು ರನ್ನ ಮಾಡಿರುವುದು ಮತ್ತೊಂದು ಗಮನಾರ್ಹ ಸಂಗತಿ. ಅಂದರೆ ಭೋಗ-ವೈರಾಗ್ಯ ಹಾಗೂ ತ್ಯಾಗಗಳನ್ನು ಒಂದೇ ವೇದಿಕೆಯಲ್ಲಿ ಪರಸ್ಪರ ಮುಖಾಮುಖಿಯಾಗಿಸುವ ಹಾಗೂ ಸಂವಾದಕ್ಕೆ ಅಣಿಗೊಳಿಸುವ ಕೆಲಸವನ್ನು ರನ್ನ ಸೂಕ್ಷ್ಮವಾಗಿ ಮಾಡಿದ್ದಾನೆ.

ಲೌಕಿಕ, ಆಗಮಿಕ ಎನ್ನುವ ಕಾವ್ಯ ಮತ್ತು ಪುರಾಣ ನಿರ್ಮಾಣದ ಒಂದು ಪರಂಪರೆಯೇ ಕನ್ನಡದಲ್ಲಿ ಬೆಳೆಯಿತು. ವಿಶೇಷವಾಗಿ ಆಗಮಿಕ ಕಾವ್ಯಗಳಾದ ತೀರ್ಥಂಕರ ಪುರಾಣ ಕೃತಿಗಳ ನಿರ್ಮಾಣ ಒಂದು ನೋಂಪಿಯಂತೆ ನಡೆಯಿತು. ಮತ್ತೊಂದೆಡೆ ನಯಸೇನ, ಬ್ರಹ್ಮಶಿವ, ಜನ್ನ, ವೃತ್ತವಿಲಾಸರಂಥ ಕವಿಗಳು ಲೌಕಿಕ ಕಥೆಗಳಿಗೆ ಜೈನ ಧಾರ್ಮಿಕ ಆವರಣವನ್ನು ನಿರ್ಮಾಣ ಮಾಡಿ ಲೌಕಿಕ, ಧಾರ್ಮಿಕಗಳನ್ನು ಒಂದುಗೂಡಿಸುವ ವಿಶಿಷ್ಟ ಕಲೆಗಾರಿಕೆಯನ್ನು ಮೆರೆಯುತ್ತಾರೆ. ಒಂದೆಡೆ ಜೈನ ಧರ್ಮದ ಚೌಕಟ್ಟಿನೊಳಗೆ ಕತೆಗಳು ಮಾಧ್ಯಮವಾಗಿ ಬಳಕೆಯಾದರೆ, ಇನ್ನೊಂದೆಡೆ, ಜೈನ ಧರ್ಮದ ಮೇಲ್ಮೈಗಾಗಿ ಸಾಧನೆ ಮಾಡಿದ ಸಾಂಸ್ಕೃತಿಕ ವ್ಯಕ್ತಿಯ ಸುತ್ತ ಕಥನವೊಂದು ನಿರ್ಮಾಣವಾಗುತ್ತಿದ್ದ ಸಂದರ್ಭಗಳನ್ನು ಇಲ್ಲಿ ನೋಡುತ್ತೇವೆ.

ಲೌಕಿಕ - ಅಲೌಕಿಕ, ಧಾರ್ಮಿಕ - ರಾಜಕೀಯ, ಸಾಮಾಜಿಕ ಎಂಬಿತ್ಯಾದಿಯಾಗಿ ಹೇಳುವುದೆಲ್ಲವೂ ನಾವು ಮಾಡಿಕೊಂಡ ವಿಭಾಗ ಕ್ರಮಗಳಷ್ಟೆ. ಆದರೆ ಬದುಕಿನಲ್ಲಿ ಎಲ್ಲವೂ ಎಲ್ಲದರೊಡನೆ ಬೆರೆತೇ ಇರುತ್ತದೆ. ಭೋಗದೊಡಲೊಳಗೆ ವೈರಾಗ್ಯ ಅಥವಾ ಸಾವಿನ ಭೀತಿ ವೈರಾಗ್ಯದೊಡನೆಯೇ ಭೋಗದ ನೆನಪು, ತ್ಯಾಗದ ನೆಲೆ, ಧರ್ಮದ ಜೊತೆಗೆ ರಾಜ್ಯ ವ್ಯವಸ್ಥೆ ದಿನ ಬದುಕಿನೊಂದಿಗೆ ಬೆರೆತಿರುವ ಪ್ರಣಯ, ರಾಜ್ಯಾಧಿಕಾರದ ಬಯಕೆ, ಭಯ, ಬಿಡುಗಡೆಯ ಆಸೆ ಎಲ್ಲವೂ ಸೇರಿದ ಪುರಾಣ ಕತೆ ಅಜಿತ ತೀರ್ಥಂಕರ ಪುರಾಣವಾಗಿದೆ. ಬದುಕಿನೊಳಗಡೆಯಿಂದಲೇ ಹುಟ್ಟುವ ದ್ವಂದ್ವಗಳು, ಆ ದ್ವಂದ್ವಗಳನ್ನು ಮೆಟ್ಟಿ ನಿಲ್ಲಬೇಕಾದ ಮನೋಸ್ಥೈರ್ಯ, ಇವುಗಳ ತೀವ್ರ ಶೋಧ ಈ ಕೃತಿಯಲ್ಲಿ ಮುಖ್ಯವಾಗಿದೆ.

**ಅಜಿತನಾಥ ಪುರಾಣ**

ಹನ್ನೆರಡು ಆಶ್ವಾಸಗಳ ೭೯೧ ಪದ್ಯಗಳು ಮತ್ತಷ್ಟು ಗದ್ಯವೂ ಇರುವ ಅಜಿತ ತೀರ್ಥಂಕರ ಪುರಾಣವನ್ನು ಶಾಸ್ತ್ರದಾನಿ ಎಂದು ಹೆಸರಾದ ಅತ್ತಿಮಬ್ಬೆ ರನ್ನನಿಂದ (ಕ್ರಿ. ಶ. ಸು. ೯೯೩ರಲ್ಲಿ) ಬರೆಸಿದಳು. ರನ್ನನು ಎರಡನೇ ತೀರ್ಥಂಕರನಾದ ಅಜಿತನಾಥನನ್ನು ಕಥಾನಾಯಕನನ್ನಾಗಿ ಆಯ್ಕೆಮಾಡಿಕೊಂಡಿರುವುದರ ಮುಖ್ಯ ಕಾರಣ ಆಶ್ರಯದಾತೆಯಾದ ಅತ್ತಿಮಬ್ಬೆಯ ಮನೆ ದೇವರು ಅಜಿತನಾಥ ತೀರ್ಥಂಕರನಾಗಿದ್ದುದು. ಜೈನರ ಶಾಸನದೇವಿಯಾದ ರೋಹಿಣಿಯಕ್ಷಿಗೆ ಅತ್ತಿಮಬ್ಬೆಯನ್ನು

ಕೊಟ್ಟಿದ್ದಾನೆ. ಪಂಪನಿಗೆ ಒಬ್ಬನೆ ಆಶ್ರಯದಾತ ರಾಜನಿದ್ದರೆ ರನ್ನನಿಗೆ ಆಶ್ರಯ ನೀಡಿದವರು ಇಬ್ಬರು. ಹೀಗಾಗಿ ಲೌಕಿಕ ಆಗಮಿಕದ ಭೇದಗಳನ್ನು ಸರಿದೂಗಿಸುವಲ್ಲಿ ಪಂಪನಿಗಿಂತ ರನ್ನನೇ ಹೆಚ್ಚು ಹೈರಾಣಾದಂತೆ ತೋರುತ್ತದೆ. ಕವಿಯ ಸ್ವಾತಂತ್ರ್ಯಕ್ಕಿಂತ ಅಪಾರ ಋಣ ಇಲ್ಲಿ ಎದ್ದು ತೋರುತ್ತದೆ. ಇಡೀ ಕಾವ್ಯವನ್ನು ಅತ್ತಿಮಬ್ಬೆಯ ಸಂಕೀರ್ತನಕ್ಕೆ ಮೀಸಲಿರಿಸಿದ್ದು ಹಾಗೂ ಅದರ ಮತೀಯ ಉದ್ದೇಶಗಳು ಅಜಿತ ತೀರ್ಥಂಕರ ಪುರಾಣವನ್ನು ಸಮಸ್ತ ಜನರ ಕಾವ್ಯವೆನಿಸಲಿಕ್ಕೆ ಬಿಡಲಿಲ್ಲ ಎನ್ನುವ ಮಾತುಗಳಿವೆ.

**ಕಥಾಸಾರಾಂಶ** : ಸುನೀಮಾ ನಗರದ ವಿಮಲವಾಹನ ರಾಜನು ತನ್ನ ಕೆನ್ನೆಯಲ್ಲಿ ನರೆಗೂದಲನ್ನು ನೋಡಿ ವೈರಾಗ್ಯದಿಂದ ತಪಸ್ಸಿಗೆ ತೆರಳಿದನು. ಮರಣಾನಂತರ ಆತ ಸಾಕೇತಪುರದ ಜಿತಶತ್ರು ಹಾಗೂ ಜಯಸೇನಾದೇವಿ ದಂಪತಿಗೆ ಅಜಿತನಾಥನಾಗಿ ಹುಟ್ಟುತ್ತಾನೆ. ಪ್ರಾಪ್ತ ವಯಸ್ಸಿನಲ್ಲಿ ವಿವಾಹಬಂಧ ಹಾಗೂ ಪಟ್ಟಬಂಧವಾಗುತ್ತದೆ. ಹೀಗಿರಲಾಗಿ ಒಂದು ದಿನ ಉಲ್ಕಾಪಾತವನ್ನು ಕಂಡು ವೈರಾಗ್ಯ ಮೂಡಿ ತಪವೆಸಗಿ ಕೇವಲ ಜ್ಞಾನ ಪಡೆಯುತ್ತಾನೆ.

ತೀರ್ಥಂಕರ ಚರಿತೆಗೆ ಪರಿಶಿಷ್ಟವಾಗಿ ಇದೇ ಅವಧಿಯಲ್ಲಿ ಆಗಿಹೋದ ಸಗರ ಚಕ್ರವರ್ತಿಯ ಚರಿತೆಯನ್ನು ಹೇಳಲಾಗಿದೆ. ಸಗರನ ಹಿಂದಿನ ಭವಗಳ ಹಿತೈಷಿಯಾದ ಮಣಿಕೇತು ಬ್ರಾಹ್ಮಣ ರೂಪದಲ್ಲಿ ಬಂದು ಸಗರನಲ್ಲಿ ವೈರಾಗ್ಯ ಮೂಡಿಸುವ ಸಂಗತಿ ಅಭ್ಯಾಸಾರ್ಹವಾದುದು. ಹಿಂದಿನ ಮೂರು ಜನ್ಮಗಳಿಂದ ಸಗರನ ವೃತ್ತಾಂತ ಆರಂಭವಾಗುತ್ತದೆ. ಸಗರ ಚಕ್ರವರ್ತಿ ೯೬೦೦೦ ಹೆಂಡಿರು ಹಾಗೂ ಅರವತ್ತು ಸಾವಿರ ಮಕ್ಕಳು ಇರುವ ದೊಡ್ಡ ಕುಟುಂಬದ ಸಂಸಾರಸ್ಥ. ಇಂಥವನನ್ನು ವಿವಿಧ ಇಕ್ಕಟ್ಟುಗಳಿಗೆ ಸಿಕ್ಕಿಸುವ ಮೂಲಕ ವೈರಾಗ್ಯಕ್ಕೆ ಇಳಿಸಲಾಗುತ್ತದೆ.

**ಅಜಿತನಾಥ ಪುರಾಣದ ಆಕರ ಹಾಗೂ ಹೊಸ ದೃಷ್ಟಿ**

ಸಂಸ್ಕೃತ ಮಹಾಪುರಾಣದ ಎರಡನೆಯ ಭಾಗವಾದ ಉತ್ತರ ಪುರಾಣ ಅಜಿತನಾಥ ಪುರಾಣದ ಮೂಲ ಆಕರ. ಗುಣಭದ್ರಾಚಾರ್ಯರು ೧೪೩ ಶ್ಲೋಕಗಳಲ್ಲಿ ಈ ಕಥೆಯನ್ನು ನಿರೂಪಿಸಿದ್ದಾರೆ. ರನ್ನನು ಮೂಲದ ನೀರಸ ಸಂಕ್ಷಿಪ್ತ ನಿರೂಪಣೆಯನ್ನೇ ಯಥೋಚಿತವಾಗಿ ಬೆಳೆಸಿದ್ದರೂ ತನ್ನ ಪ್ರತಿಭೆಯ ಮೂಲಕ ಅದಕ್ಕೊಂದು ಹೊಸ ಆಯಾಮ ನೀಡಿದ್ದಾನೆ.

ಅಜಿತ ತೀರ್ಥಂಕರನ ವರ್ಣನೆ ಪ್ರಾರಂಭವಾಗುವುದು ಎರಡನೇ ಆಶ್ವಾಸದಿಂದ. ಸಾಮಾನ್ಯವಾಗಿ ಧಾರ್ಮಿಕ ಕಾವ್ಯಗಳೆಂದರೆ, ಅದರಲ್ಲೂ ಜೈನ ಧಾರ್ಮಿಕ ಕಾವ್ಯಗಳಲ್ಲಿ ಹಾಗೂ ಸಂಪ್ರದಾಯಗಳಲ್ಲಿ, ಭವಾವಳಿಗಳೇ ಪ್ರಧಾನ ಪಾತ್ರ ವಹಿಸುತ್ತವೆ. ಸಿಂಹಾವಲೋಕನ ಪ್ರಿಯನಾದ ರನ್ನ ಈ ಕೃತಿಯಲ್ಲಿ ಭವಾವಳಿಗಳ ಗೊಡವೆಗೆ ಹೋಗದಿರುವುದು ಆಶ್ಚರ್ಯ ಹುಟ್ಟಿಸುತ್ತದೆ. ವಡ್ಡಾರಾಧನೆಯಂಥ ಗದ್ಯ ಹಾಗೂ ಲೌಕಿಕ ಪ್ರಧಾನ ಪಠ್ಯಗಳೇ ಭವಾವಳಿಗಳಿಂದ ಮುಪ್ಪುರಿಗೊಂಡಿದ್ದನ್ನು ನೋಡಿದರೆ ಅಜಿತನಾಥ ತೀರ್ಥಂಕರನಂಥ ಧಾರ್ಮಿಕ ವ್ಯಕ್ತಿತ್ವ ಕುರಿತು ಬರೆಯುವಾಗ ಭವಾವಳಿಗಳನ್ನು ರನ್ನ ದೂರವಿರಿಸಿದ್ದು ಕುತೂಹಲವೆನಿಸುತ್ತದೆ.

ಇಲ್ಲಿ ಬರುವ ವೈರಾಗ್ಯ ಬೋಧನೆಯ ಪದ್ಯಗಳು ಭಾವಗೀತೆಯಂತೆ ಕಾಣಿಸುತ್ತವೆ. (೨-೫೬ ರಿಂದ ೬೬) ಅದರಲ್ಲೂ ವಿಶೇಷವಾಗಿ ಸಗರ ಚಕ್ರವರ್ತಿಯ ಕಥಾಭಾಗ ಸ್ವತಂತ್ರ ನಾಟಕದಂತೆ ಉಜ್ವಲವಾಗಿ ಮೂಡಿಬಂದಿದೆ. ಮೂಲದ ಗುಣಭದ್ರಾಚಾರ್ಯರ ಉತ್ತರ ಪುರಾಣದಲ್ಲಿ ಇಲ್ಲದೆ ಇರುವ ಬುದ್ಧಿಸಾಗರನೆಂಬ ಮಂತ್ರಿಯ ಪಾತ್ರವನ್ನು ಕನ್ನಡದ ಈ ಕವಿ ಹೊಸದಾಗಿ ಸೃಷ್ಟಿಸಿದ್ದಾನೆ. ಈ ಪಾತ್ರದ ಮೂಲಕ ಮಣಿಕೇತು ಹೇರುವ ಒತ್ತಾಯದ ವೈದಿಕ ಪ್ರಣೀತ ವೈರಾಗ್ಯದ ಪರಿಕಲ್ಪನೆಗಳನ್ನು ರನ್ನ ತೀಕ್ಷ್ಣ ವಿಮರ್ಶೆಗೆ ಗುರಿಮಾಡುತ್ತಾನೆ. ಒಂದು ರೀತಿಯಲ್ಲಿ ಧರ್ಮ ಹಾಗೂ ಕಾವ್ಯಧರ್ಮದ ನಡುವಿನ ಅನುಸಂಧಾನವನ್ನು ಇಲ್ಲಿ ಕಾಣಬಹುದು. ಹಾಗೇ ಕಾವ್ಯದ ಸಹಜತೆ ಹಾಗೂ ಕರ್ಮಕೌಶಲದ ಕೃತಕತೆಗಳ ಸಂಘರ್ಷವನ್ನು ಇಲ್ಲಿ ನೋಡಬಹುದು.



ಸಗರ ಚಕ್ರವರ್ತಿಯ ಹಿಂದಿನ ಜನ್ಮದ ಗೆಳೆಯನಾದ ಮಣಿಕೇತು ಸಗರನನ್ನು ವೈರಾಗ್ಯಪರನನ್ನಾಗಿಸುವ ಹಂಬಲ ಉಳ್ಳವನು. ದೊಡ್ಡ ಕುಟುಂಬದ ಯಜಮಾನ ಹಾಗೂ ಭೋಗಿಯಾದ ಸಗರ ಇದನ್ನು ನಿರಾಕರಿಸುತ್ತಾನೆ. ಆಗ ಹಠ ಬಿಡದ ಮಣಿಕೇತು ದೃಷ್ಟಿವಿಷೋರಗದ ರೂಪದಿಂದ ಸಗರನ ಅರವತ್ತು ಸಹಸ್ರ ಮಕ್ಕಳೆಲ್ಲರೂ ಸತ್ತು ಹೋಗುವಂತೆ ಮಾಡುತ್ತಾನೆ. ನಂತರ ಬ್ರಾಹ್ಮಣ ವೇಷದಿಂದ ರಾಜನ ಬಳಿಗೆ ಬಂದು ಸತ್ತ ತನ್ನ ಮಗನನ್ನು ಬದುಕಿಸಿಕೊಡುವಂತೆ ಬೇಡುತ್ತಾನೆ. ಆಗ ರಾಜನ ಪುರೋಹಿತನಾದ ಬುದ್ಧಿಸಾಗರನು, ''ಹುಟ್ಟಿದ ಪ್ರತಿಯೊಂದು ಜೀವಿಗೂ ಸಾವು ಅನಿವಾರ್ಯ'' ಎಂದು ಮನ ಮುಟ್ಟುವಂತೆ ಹೇಳುತ್ತಾನೆ. ಆಗ ಬುದ್ಧಿಸಾಗರ, ಹಾಗೂ ಮಣಿಕೇತು ಇಬ್ಬರ ನಡುವೆ ಸಾವು ಹಾಗೂ ಬದುಕು ಕುರಿತು ಒಂದು ವೈಚಾರಿಕ ಸಂವಾದವೇ ನಡೆಯುತ್ತದೆ. ಬುದ್ಧಿಸಾಗರನು ಮಣಿಕೇತುವನ್ನು ಕುರಿತು 'ತಮ್ಮೊಳೋರೋರ್ವರಪ್ಪೊಡಂ ಸತ್ತಱಿಯದರ ಮನೆಯ ಪುಲ್ಲಂ ಕಿರ್ಚುಮಂ ಕೊಂಡು ಬರ್ಪುದು, ಮೇಣ್ ಬರ್ಪೊಡಂ ನಿನ್ನ ಮಗನಂ ಪಡೆವೆನೆಂದೊಡಾ ನುಡಿಯನಱಿದು. ಮಱೆಯಂದತೆ ಕಿಱಿದಂತರಂಬರಂ ಪೋಗಿ ಮಗುಳೆ ಬಂದೆಲ್ಲಿಯುಂ ಪಡೆದೆನಿಲ್ಲೆಂಬುದುಂ...' (ಪುಟ ೭೨-೭೩, ಪದ್ಯ ೧೭) ಈ ಪ್ರಸಂಗ ರನ್ನನ ಒಂದು ವಿನೂತನ ಸೃಷ್ಟಿ ಎಂದು ಡಾ|| ಹಂಪನಾ ಅವರು ಅಭಿಪ್ರಾಯಪಡುತ್ತಾರೆ. ಈ ಘಟನೆ ಬುದ್ಧ ಜಾತಕ ಕತೆಗಳ ಕಿಸಾಗೌತಮಿ ಪ್ರಸಂಗವನ್ನು ನೆನಪಿಗೆ ತರುತ್ತದೆ.

*''ಅರಸ ಕೃತಾಂತನುಯ್ದು ಸುತರಂ ಪಡೆದೀಯಮಗೆಂದು ಕಾಂತೆಯರ್*
*ನುಡಿದಪರ್; ಎನ್ನ ಮಗನಂ ಪಡೆದೀಯನಗೆಂದು ಪಾರ್ವನುಂ*
*ನುಡಿದಪನ್; ಅಯ್ಯ ಸತ್ತವರನೆತ್ತು*
*ವರಾರ್ ? ಮತಿಗೆಟ್ಟ ರಕ್ಷಟಾ*
*ಖಿಡವುಗಳೀ ಕುಲಾಂಗನೆಯರ್ ಈ ಬಡಪಾರ್ವನ ನೆಂಟರಾಗರೆ''*

– ಎಂದು ಮುಗುಳ್ನಗುತ್ತಾ ತನ್ನ ಸಮಸ್ತ ರಾಜ್ಯಭೋಗಗಳನ್ನು ಬಿಟ್ಟು ತಪಸ್ಸಿಗೆ ಹೋಗುತ್ತಾನೆ. ಈ ಎಲ್ಲ ಘಟನೆಗಳಲ್ಲಿ ಕವಿ ಪ್ರತಿಭೆ ಧರ್ಮದ ಸಂಕೋಚ ಪ್ರವೃತ್ತಿಯಿಂದ ಹೊರಬಂದು ವಿಶ್ವಾತ್ಮಕವಾಗುವುದನ್ನು ಕಾಣಬಹುದಾಗಿದೆ. ಮತಧರ್ಮದ ಸಂಕೋಲೆಯನ್ನು ಮೀರಿ ಸ್ವಾತಂತ್ರ್ಯ ವಹಿಸುವ ಕವಿಪ್ರತಿಭೆಯನ್ನು ಇಲ್ಲಿ ಗಮನಿಸಬಹುದು. ಧಾರ್ಮಿಕ ಭಾವನೆಗಳನ್ನು, ಮತಪ್ರಕ್ರಿಯೆಗಳನ್ನು ಈ ಕಾವ್ಯದಲ್ಲಿ ಹೇಳುವುದು ಅನಿವಾರ್ಯವಾದಾಗಲೂ ಅದನ್ನು ಮೀರುವ ಹವಣಿಕೆಯನ್ನು ಅಜಿತ ಪುರಾಣದಲ್ಲಿ ರನ್ನ ಮಾಡುತ್ತಾನೆ.

ರನ್ನ ಕಾಲಕ್ರಮವನ್ನು ಮೀರುವ ಗುಣವುಳ್ಳವ. ಜೈನ ದರ್ಶನಗಳ ಪ್ರಕಾರ ಸಂಸಾರ ನಶ್ವರ, ನಿಜ. ಆದರೆ ಅದು ವೈವಿಧ್ಯಮಯ ಎಂದು ತೋರಿಸುವುದು ಕೂಡ ಅದರ ಇನ್ನೊಂದು ಗುಣ. ಮನುಷ್ಯ ಮತ್ತು ಅವರ ಕರ್ಮಗಳ ನಡುವಿನ ಸಂಬಂಧದ ನೈತಿಕತೆ ಮತ್ತು ಹೊಣೆಗಾರಿಕೆಗಳು ಕಾಮ ಹಾಗೂ ಸಾವು, ಇವು ರನ್ನನಲ್ಲಿ ಆಳವಾದ ಚಿಂತನೆಯ ಸ್ವರೂಪವನ್ನು ಪಡೆದುಕೊಳ್ಳುತ್ತವೆ. ಈ ಮನುಷ್ಯನ ಪ್ರಕ್ಷುಬ್ಧತೆಗಳಿಗೆ ಕಾರಣವಾಗುವ ಸಂಗತಿಗಳ ತೀವ್ರ ಶೋಧವನ್ನು ಅಜಿತ ತೀರ್ಥಂಕರ ಪುರಾಣದ ಮೂಲಕ ರನ್ನ ಮಾಡುತ್ತಾನೆ.

ಅಜಿತ ಪುರಾಣವು ಹಲವು ದೃಷ್ಟಿಯಿಂದ ವಿಶೇಷವೆನಿಸುತ್ತದೆ. ಅದಕ್ಕೆ ರನ್ನನ ಕವಿಪ್ರತಿಭೆ ಕಾರಣವೆಂಬುದನ್ನು ಮರೆಯಲಾಗದು. ತೀರ್ಥಂಕರರ ಪಂಚಕಲ್ಯಾಣಗಳಾದ ಸುರಲೋಕಾವತರೋತ್ಸವ (ಸ್ವರ್ಗಾವತರಣ ಕಲ್ಯಾಣ ಅಥವಾ ಗರ್ಭಕಲ್ಯಾಣ), ಜನ್ಮಾಭಿಷೇಕೋತ್ಸವ (ಜನ್ಮಾಭಿಷೇಕ ಕಲ್ಯಾಣ), ಪರಿನಿಷ್ಕ್ರಾಂತಿ ಮಹೋತ್ಸವ (ಪರಿನಿಷ್ಕ್ರಮಣ ಕಲ್ಯಾಣ), ಕೈವಲ್ಯ ಬೋಧೋತ್ಸವ (ಕೇವಲ ಜ್ಞಾನ ಕಲ್ಯಾಣ) ಹಾಗೂ ಪರಿನಿರ್ವಾಣ ಮಹೋತ್ಸವ (ಪರಿ ನಿರ್ವಾಣ ಕಲ್ಯಾಣ) ಎನ್ನುವ ಐದು ಕಲ್ಯಾಣಗಳು ಅಜಿತ ಪುರಾಣದಲ್ಲಿ ಪ್ರಭಾವಶಾಲಿಯಾಗಿ ಮೂಡಿಬಂದಿವೆ. ಜಿನ ಜನ್ಮಾಭಿಷೇಕದ ಈ ವರ್ಣನೆ ಪುನ್ನಾಟ ಸಂಘ ಜಿನಸೇನರ (೭೮೩) ಹರಿವಂಶ ಪುರಾಣದಲ್ಲಿ, ಸೇನಸಂಘ ಜಿನಸೇನಾಚಾರ್ಯರ (೮೫೦) ಆದಿಪುರಾಣದಲ್ಲಿ, ಪಂಪನ (೯೪೧) ಆದಿಪುರಾಣದಲ್ಲಿ, ಪೊನ್ನ (೯೬೦)ನ ಶಾಂತಿ ಪುರಾಣದಲ್ಲಿ ಬಂದಿದೆ. ಅಲ್ಲಿ ಎರಡು ರೀತಿಯ ಜಲದ ವರ್ಣನೆ ಮಾತ್ರ ಬರುತ್ತದೆ. ಆದರೆ ರನ್ನ ಈ ವರ್ಣನೆಯನ್ನು ಮಿಕ್ಕೆಲ್ಲವುಗಳಿಗಿಂತ ವೈವಿಧ್ಯಮಯವಾಗಿ ತಂದಿರುವನಲ್ಲದೆ ನಾಲ್ಕು ಆಶ್ವಾಸಗಳನ್ನು ಜನ್ಮಾಭಿಷೇಕ ವರ್ಣನೆಗೆ ಮೀಸಲಿರಿಸಿದ್ದಾನೆ. ಅಲ್ಲದೆ ಮೊದಲ ಬಾರಿಗೆ ಒಂಬತ್ತು ರೀತಿಯ ಅಭಿಷೇಕಗಳನ್ನು ಹೇಳುತ್ತಾನೆ. ರನ್ನನ ಈ ವರ್ಣನೆಗೆ ಬಹುಶಃ

೯೮೧-೮೨ರಲ್ಲಿ ಚಾವುಂಡರಾಯ ಗೊಮ್ಮಟನಿಗೆ ಮಾಡಿಸಿದ ಮಹಾಮಸ್ತಕಾಭಿಷೇಕ ಕಾರಣವಾಗಿರಬಹುದು.

ಅಜಿತ ಪುರಾಣದಲ್ಲಿ ಕಾಣುವ ಇಂಥ ಅಭಿಷೇಕದ ವರ್ಣನೆಗಳು, ಇಂದ್ರ ಪೂಜೆಯ ವರ್ಣನೆಗಳು, ಅಜಿತನಾಥನ ತಪಸ್ಸಿನ ವರ್ಣನೆಗಳು ಇವೆಲ್ಲ ಕಥನ ಕ್ರಿಯೆಯಲ್ಲಿ ಶೂನ್ಯವನ್ನು ತುಂಬಲು ಬರುತ್ತವೆ ಮತ್ತು ಒಮ್ಮೊಮ್ಮೆ ಅನಿರೀಕ್ಷಿತವಾದುದನ್ನು ಸ್ಫುರಿಸುತ್ತವೆ. ಕಥೆಯನ್ನು ಹಿಡಿದು ನಿಲ್ಲಿಸುವ ಹಾಗೂ ಕಥೆಗೆ ಪರ್ಯಾಯವಾಗಿ ಕಾಣುವ ಇವು ಅಂತಹ ಪರಿಣಾಮಕಾರಿ ಸಂಗತಿಗಳೇನಲ್ಲ. ಉದಾಹರಣೆಗೆ, ಬೆಳದಿಂಗಳ ವರ್ಣನೆ ನೋಡಬಹುದು (ಅ. ೬-೪೫-೧೫೯). ವರ್ಣನೆ ಮುಗಿದೊಡನೆ ವಿದ್ಯಾಧರನೊಡನೆ ಓಲಗದೊಳಿದ್ದ ಅಜಿತನಾಥ ದಿಕ್ಕನ್ನು ನೋಡುತ್ತಾನೆ. ಉಲ್ಕಾಪಾತ ಕಣ್ಣಿಗೆ ಕಾಣುತ್ತದೆ. ಇದರಿಂದಾಗಿ ಅವನಿಗೆ ನಿರ್ವೇಗ ಉಂಟಾಗುತ್ತದೆ. ವಾಸ್ತವವಾಗಿ ಇವೆರಡಕ್ಕೂ ಸಂಬಂಧವಿಲ್ಲ.

ನೆರೆ ಹಾಗೂ ಉಲ್ಕಾಪಾತದ ಕಾರಣವಾಗಿ ಉಂಟಾಗುವ ನಿರ್ವೇಗದ ಸಂಗತಿಗಳು ಲಯ ತಪ್ಪಿದ ಬದುಕಿನ ಪ್ರತೀಕಗಳಾಗಿವೆ. ಅತಿಯಾದ ಆಸೆಗಳು ಹಾಗೂ ಭೋಗಗಳು ಬದುಕಿನ ದಿಕ್ಕನ್ನೇ ಬದಲಿಸಿಬಿಡಬಲ್ಲವು. ರನ್ನನ ಕಾಲದ ಎರಡು ಪ್ರಮುಖ ಮೌಲ್ಯಗಳೆಂದರೆ ವೀರ ಹಾಗೂ ತ್ಯಾಗ. ವೀರಗುಣಕ್ಕೆ ಎಲ್ಲವೂ ಅನಿವಾರ್ಯವಾದಂತೆ ಸರ್ವಸಂಗ ಪರಿತ್ಯಾಗಿಗೆ ಯಾವುದೂ ಬೇಡ ಎನ್ನುವ ಉದಾಸೀನತೆ ಕಾಣುತ್ತದೆ. ಆದರೆ ಇವೆರಡೂ ಹುಟ್ಟುವುದೇ ವ್ಯಕ್ತಿಪ್ರಧಾನ ನೆಲೆಯಲ್ಲಿ ಎನ್ನುವುದು ಬಹುಮುಖ್ಯ. ಅತಿಭೋಗ ಹಾಗೂ ಪರಿತ್ಯಾಗ ಎರಡು ಬೇರೆ ಬೇರೆಯಲ್ಲ. ಬದುಕಿನಲ್ಲಿ ಎಲ್ಲವೂ ಎಲ್ಲದರೊಡನೆ ಬೆರೆತೇ ಇರುತ್ತವೆ.

ಇಡೀ ಕಾವ್ಯದಲ್ಲಿ ಶೃಂಗಾರ, ಕಾಮ, ನೆನಪು, ಸಾವು, ವೈರಾಗ್ಯ ಇತ್ಯಾದಿ ಸಂಗತಿಗಳು ಸ್ಥಾನ ಪಡೆದಿವೆ. ವ್ಯಕ್ತಿಯ ಪ್ರಕ್ಷುಬ್ಧತೆಗೆ ಕಾರಣವಾಗುವ ಕಾಮ-ಸಾವುಗಳ ಶೋಧವನ್ನು ಅಜಿತನಾಥ ತೀರ್ಥಂಕರ ಕೃತಿಯಲ್ಲಿ ಕಾಣುತ್ತೇವೆ. ತ್ಯಾಗ, ದಾನಗಳ ಮೂಲಕ ಅಂಥ ಪ್ರಕ್ಷುಬ್ಧತೆಯನ್ನು ಮೀರಿ ನಿಲ್ಲಬಹುದು ಎನ್ನುವ ಆಶಯ ಇಲ್ಲಿನ ಮುಖ್ಯ ಭಿತ್ತಿ. ಅದಕ್ಕೆ ಅತ್ತಿಮಬ್ಬೆಯ ಚರಿತ್ರೆ ಉತ್ತಮ ನಿದರ್ಶನವಾಗಿದೆ. ಹೀಗೆ ಅಜಿತನಾಥ ತೀರ್ಥಂಕರ ಪುರಾಣವು ಕಾವ್ಯವಾಗಿ, ಪುರಾಣವಾಗಿ, ಇತಿಹಾಸವಾಗಿ, ಸಂಪ್ರದಾಯವಾಗಿ, ಬದುಕಿನ ನಿಗೂಢತೆಯ ಶೋಧವಾಗಿ ರನ್ನನ ಪ್ರಖರ ಕವಿತಾ ಪ್ರತಿಭೆಯಲ್ಲಿ ಹೊಸ ರೀತಿಯಲ್ಲಿ ಮೂಡಿಬಂದಿರುವುದು ವಿಶೇಷ.

**ಮತ್ತೊಂದು ಮಗ್ಗಲು**

ಅಜಿತನಾಥ ಪುರಾಣಕ್ಕೆ ಜೈನ ಪುರಾಣಗಳ ಸಾಲಿನಲ್ಲಿ ವಿಶೇಷ ಸ್ಥಾನವಿದ್ದಂತೆ ಅತ್ತಿಮಬ್ಬೆಯ ಚರಿತೆಯನ್ನು ಅನ್ಯಾದೃಶ್ಯವಾಗಿ ಚಿತ್ರಿಸಿದ ಕಾರಣಕ್ಕಾಗಿ ಕನ್ನಡ ಕಾವ್ಯಪರಂಪರೆಯಲ್ಲಿ ಅದಕ್ಕೊಂದು ಮಹತ್ವ ಬಂದಿದೆ. ಸಮಕಾಲೀನ ಚಾರಿತ್ರಿಕ ಕಾರಣಗಳಿಂದಾಗಿ ಧಾರ್ಮಿಕವಾಗಿದ್ದ ಅಜಿತ ಪುರಾಣಕ್ಕೆ ಐತಿಹಾಸಿಕ ಮಹತ್ವ ಬಂದಿದೆ. ಅತ್ತಿಮಬ್ಬೆಯ ಉಜ್ವಲ ವ್ಯಕ್ತಿತ್ವದ ಜೊತೆಗೆ ಆಕೆಯ ತವರು ಹಾಗೂ ಗಂಡನ ಮನೆಯ ವಂಶವೃಕ್ಷವನ್ನೇ ರನ್ನ ನೀಡಿದ್ದಾನೆ. ತೈಲಪ, ಸತ್ಯಾಶ್ರಯ, ಮಲ್ಲಪ, ಪುನ್ನಮಯ್ಯ, ದಲ್ಲಪ, ನಾಗದೇವ ಇವರೆಲ್ಲರೂ ಅತ್ತಿಮಬ್ಬೆಯ ಸಂಬಂಧದ ಹಂದರದ ಕುಡಿಗಳು. ಮಗ ಅಣ್ಣಿಗದೇವ, ಭೂತುಗ, ಮರುಳದೇವ, ಮಾರಸಿಂಹ, ಚಾವುಂಡರಾಯ, ಶಂಕರಗಂಡ, ಪಾಂಚಾಲದೇವ, ಮಲ್ಲಪ ಇವರೆಲ್ಲರೂ ರನ್ನನ ಕವಿತಾ ಶಕ್ತಿಯಲ್ಲಿ ಮೂಡಿಬಂದ ಆ ಕಾಲದ ರಾಜಕಾರಣದ ಪ್ರತೀಕಗಳು. ಹೀಗಾಗಿ ಇದೊಂದು ಚಾರಿತ್ರಿಕ ಕಾವ್ಯವೂ ಹೌದು.

ಒಟ್ಟು ಕಾವ್ಯವನ್ನು ಓದಿದಾಗ ಅದು ಮೇಲ್ನೋಟಕ್ಕೆ ಅಜಿತ ತೀರ್ಥಂಕರರ ಹಾಗೂ ಅತ್ತಿಮಬ್ಬೆಯ ಸ್ತುತಿ ಹಾಗೂ ವರ್ಣನೆಗೆ ಮೀಸಲಾದ ಮತೀಯ ಕಾವ್ಯದಂತೆ ಕಾಣುತ್ತದೆ. ಮತ್ತು ಈ ಕೃತಿಯ ಬಗೆಗೆ ನಡೆದ ಅಲ್ಪ-ಸ್ವಲ್ಪ ಅಧ್ಯಯನಗಳೂ ಅದರ ಧಾರ್ಮಿಕ ಆವರಣವನ್ನೇ ವೈಭವೀಕರಿಸಿವೆ. ಕಾರಣ ಕಾವ್ಯದ ಆರಂಭ ಹಾಗೂ ಅಂತ್ಯದಲ್ಲಿ ಬರುವ ಮಾಹಿತಿಗಳು ಅದನ್ನೊಂದು ಮಂಗಲಕರ ಕೃತಿಯನ್ನಾಗಿ ತೋರಿಸುತ್ತವೆ.

ಆದರೆ ಸೂಕ್ಷ್ಮವಾಗಿ ಕಾವ್ಯವನ್ನು ಓದಿದಾಗ ರನ್ನ ಇಂಥ ಬಿಕ್ಕಟ್ಟುಗಳನ್ನು ಮುರಿದು ಹೊರಬರುವ ಹವಣಿಕೆಯಲ್ಲಿರುವಂತೆ ಕಾಣುತ್ತದೆ. ಕನ್ನಡದಲ್ಲಿ ಕಾವ್ಯಕ್ರಿಯೆಯನ್ನು ಸ್ತುತಿದಾಯಕವಾದ ಮಂಗಲಕರ ಚಿಂತನೆಯನ್ನಾಗಿ ದೈವೀ ವಿಚಾರದ ಅವಶ್ಯಕತೆಯಾಗಿ ವ್ಯಾಖ್ಯಾನಿಸುತ್ತಾ ಬರಲಾಗಿದೆ. ಇಂಥಲ್ಲಿ ಭಾಷೆಯನ್ನು ಧಾರ್ಮಿಕವಾಗಿಸುವ, ಬರಹವನ್ನು ದೈವೀಕರಿಸುವ ಆಸ್ತಿಕತೆಯೇ ಬಲಿಯುತ್ತ ಬಂದಿತು. ಇಂಥ ಆಶಯಕ್ಕೆ ಹೊರತಾದ ಸಂವೇದನೆಗಳನ್ನು ಉಪೇಕ್ಷಿಸುತ್ತ ಬರಲಾಗಿದೆ. ಧಾರ್ಮಿಕವಾದ ಕವಿ ಹಾಗೂ ಕೃತಿ ಮಾತ್ರ ಮಾನಿತವಾಗಬಲ್ಲುದು ಎನ್ನುವ ಕಲ್ಪನೆಯೇ ಲೌಕಿಕ ಹಾಗೂ ಆಗಮಿಕ ಎನ್ನುವ ದ್ವಂದ್ವ ಭಾವವನ್ನು ಹುಟ್ಟುಹಾಕಿರಬೇಕೆನಿಸುತ್ತದೆ. ಹಾಗೂ ಇಂಥ ಹಂಬಲಗಳನ್ನು ರಕ್ಷಿಸುವಂತೆ ನಡೆದ ಸ್ಥಿರ ಮಾದರಿಯ ಅಧ್ಯಯನಗಳೂ ಇದಕ್ಕೆ ಕಾರಣವಾಗಿವೆ.

ಹೀಗಾಗಿ ಕವಿ ಹಾಗೂ ಅವನ ಕೃತಿಯನ್ನು ದೈವಿಕ ಕೊಡುಗೆಯಾಗಿ ಮನ್ನಿಸುತ್ತ ಬರಲಾಗಿದೆ. ಆದರೆ ಪಂಪ, ರನ್ನರಂತಹ ಪ್ರತಿಭಾನ್ವಿತ ಕವಿಗಳು ಧಾರ್ಮಿಕ ಹಾಗೂ ರಾಜಕೀಯವಾದ ಸ್ಥಿರ ಮಾದರಿಗಳನ್ನು ಮೀರುವ ಪ್ರಯತ್ನ ಮಾಡಿದ್ದು ಗಮನಾರ್ಹ. ಜಾತಿ ಮಾದರಿಯೊಂದನ್ನು ಪೋಷಣೆ ಮಾಡಿಕೊಂಡು ಬಂದ ಸಾಮಾಜಿಕ ವ್ಯವಸ್ಥೆಯಲ್ಲಿ ಆಶ್ರಯ ಪಡೆದಿದ್ದರೂ ಅದನ್ನು ಮೀರುವ ಕ್ರಿಯಾಶೀಲ ನೆಲೆಗಳನ್ನು ರನ್ನನ ಅಜಿತ ತೀರ್ಥಂಕರ ಪುರಾಣದಲ್ಲಿ ಕಾಣಬಹುದಾಗಿದೆ.

ಅಜಿತ ತೀರ್ಥಂಕರ ಪುರಾಣವು ಜೈನ ತೀರ್ಥಂಕರ ಪುರಾಣವೂ ಆಗಿರುವುದರ ಜೊತೆಗೆ ಕನ್ನಡ ನಾಡಿನ ಆವರಣವನ್ನು ಕಟ್ಟಿಕೊಡುವ ಕಥಾನಕವೂ ಆಗಿ ಮುಖ್ಯವಾಗುತ್ತದೆ. ಅತ್ತಿಮಬ್ಬೆಯ ಸಂಕಥನವೊಂದನ್ನು ಕಟ್ಟಿಕೊಡುವ ಮೂಲಕ ಪುರಾಣ ಕಾವ್ಯಕ್ಕೆ ಚಾರಿತ್ರಿಕ ಸಂಬಂಧವನ್ನು ಕಲ್ಪಿಸಿಕೊಡುತ್ತಾನೆ ರನ್ನ. ಜೈನ ಪುರಾಣಗಳ ಪಾತ್ರಗಳ ಲೌಕಿಕ ಜಗತ್ತಿನ ಮನುಷ್ಯ ವ್ಯಾಪಾರಗಳಲ್ಲಿ ತೊಡಗಿರುವ ಸನ್ನಿವೇಶ ಒಂದೆಡೆಯಾದರೆ, ಮನುಷ್ಯಳಾಗಿ ಜೀವಿಸಿದ್ದ ಅತ್ತಿಮಬ್ಬೆ ತನ್ನ ದಾನ ಹಾಗೂ ಶಾಂತಿ ಗುಣಗಳಿಂದಾಗಿ ದೈವತ್ವಕ್ಕೇರುವುದು ಮತ್ತೊಂದೆಡೆ ಕಾಣುತ್ತದೆ. ಹೀಗೆ ಪುರಾಣ ಹಾಗೂ ಸಮಕಾಲೀನ ಬದುಕಿನ ಅನುಸಂಧಾನದ ಮಾದರಿಯನ್ನು ಇಲ್ಲಿ ಕಾಣುತ್ತೇವೆ.

ಅಜಿತ ತೀರ್ಥಂಕರ, ಸಗರ ಚಕ್ರವರ್ತಿ, ಅತ್ತಿಮಬ್ಬೆ ಈ ಮೂವರ ಚರಿತ್ರೆಯನ್ನು ಒಂದಾಗಿ ಬೆಸೆಯುವ ಪ್ರಯತ್ನವನ್ನು, ರನ್ನನಲ್ಲಿ ಕಾಣುತ್ತೇವೆ. ಭೋಗ-ವೈರಾಗ್ಯಗಳ ಮುಂದೆ ತ್ಯಾಗದ ಮಹತ್ವವನ್ನು, ಅದರ ದಿವ್ಯತೆಯನ್ನು ತೋರುವ ಹಂಬಲವನ್ನಿಲ್ಲಿ ನೋಡುತ್ತೇವೆ. ಭೋಗ, ವೈರಾಗ್ಯ-ತ್ಯಾಗಗಳು ಮನುಷ್ಯನ ನೆಲೆಯಿಂದಲೇ ಮೈದಳೆಯುವಂಥವು ಹಾಗೂ ಮನುಷ್ಯನ ಎಲ್ಲ ಚಾಂಚಲ್ಯಗಳಿಗೆ ಕಾರಣವಾಗುವಂಥವು ಎನ್ನುವ ಶೋಧಗುಣ ಇಲ್ಲಿ ಮುಖ್ಯವಾಗಿದೆ. ವೈಯಕ್ತಿಕ ಬದುಕಿನ ನೆಲೆಗಳನ್ನು ಸಮಷ್ಟಿಯ ಸ್ಥಿತಿಗತಿಗಳಿಗೆ ಹೊಂದಿಸಿಕೊಳ್ಳುವುದು ಹೇಗೆ ಎನ್ನುವ ಮುಖ್ಯ ಹುಡುಕಾಟವನ್ನು ರನ್ನನಲ್ಲಿ ಕಾಣಬಹುದಾಗಿದೆ. ಭೋಗ, ವೈರಾಗ್ಯ, ತ್ಯಾಗ, ಈ ಮೂರೂ ಮಾದರಿಗಳನ್ನು ರನ್ನ ಅಜಿತ ತೀರ್ಥಂಕರ ಪುರಾಣದಲ್ಲಿ ಕಟೆದು ನಿಲ್ಲಿಸಿದ್ದಾನೆ. ಅತ್ತಿಮಬ್ಬೆಯ ಅಕಳಂಕಿತ ವ್ಯಕ್ತಿತ್ವದ ಮೂಲಕ ತ್ಯಾಗದಿಂದಾಗುವ ಲೋಕಹಿತಾರ್ಥವನ್ನು ಎತ್ತಿ ತೋರಿಸಿದ್ದಾನೆ. ಅದಕ್ಕೊಂದು ಲಿಂಗಾತೀತ ಹಾಗೂ ಜಾತ್ಯತೀತ ನೆಲೆಗಟ್ಟನ್ನು ನೀಡಿದ್ದಾನೆ.

ಪರಂಪರಾಗತ ಜೈನಪುರಾಣಗಳಲ್ಲಿರುವ ಭವಾವಳಿಯನ್ನು ನಿವಾರಿಸಿಕೊಂಡು ಮೂಲಪುರಾಣಗಳಲ್ಲಿ ಇಲ್ಲದಿರುವ ಸಗರ ಚಕ್ರವರ್ತಿಯ ಕಥೆಯನ್ನು ತಂದಿರುವ ಪ್ರಯೋಗ ಕುತೂಹಲಕಾರಿಯಾದುದು. ಇಲ್ಲಿನ ಬುದ್ಧಿವಂತ ಹಾಗೂ ಮಣಿಕೇತುವಿನ ಸಂವಾದ ನಾಟಕೀಯ ಗುಣವನ್ನು ಹೊಂದಿದೆ.

ರನ್ನನ ಕಥನ ಕ್ರಮ ಸಂಪೂರ್ಣ ಭಿನ್ನವಾದದ್ದು. ಆ ಕಥನ ಕ್ರಮ ಓದುಗನನ್ನು ಗತಕಾಲದ ಸಂಗತಿಗಳಲ್ಲಿ ತೊಡಗಿಸುವುದಿಲ್ಲ, ಕಾರಣ ಅದು ಕಥೆಯೇ ಅಲ್ಲ, ಅದೊಂದು ವರ್ಣನಕ್ರಮ, ಕತೆಗೆ ಆದಿ, ಅಂತ್ಯ ಎನ್ನುವ ಗತಿಯಿರುವಂತೆ ವರ್ಣನೆಗೆ ಇರುವುದಿಲ್ಲ, ವರ್ಣನೆಗಳ ಮೂಲಕ ಕಥೆಯ ಉದ್ದೇಶವನ್ನು ನಿರ್ವಹಿಸುತ್ತಾನೆ ಎನ್ನುವ ಕುರ್ತುಕೋಟಿಯವರ ಮಾತು ಗಮನಾರ್ಹ. ಅಜಿತ ಪುರಾಣದಲ್ಲಿ ಬರುವ ವರ್ಣನೆಗಳು ಕಥನ ಕ್ರಿಯೆಯಲ್ಲಿಯ ಶೂನ್ಯವನ್ನು ತುಂಬಲು ಬರುತ್ತವೆ.

ಇಲ್ಲಿ ಕಾಣುವ ಬೌದ್ಧ ಜಾತಕ ಕಥೆಗಳ ಪ್ರಭಾವ, ಅತ್ತಿಮಬ್ಬೆಯ ಶೈವ ಬ್ರಾಹ್ಮಣ ಹಿನ್ನೆಲೆ, ಗುಂಡಮಬ್ಬೆಯು ಪತಿಯ ಸಾವಿನ ನಂತರ ಸಲ್ಲೇಖನದ ಬದಲಿಗೆ ಸತಿ ಹೋಗುವ ಸಂಗತಿ, ರನ್ನ ತರುವ ಹೊಸ ತರಹದ ಒಂಭತ್ತು ರೀತಿಯ ಅಭಿಷೇಕದ ಕ್ರಮಗಳು, ವಿಜಯ-ಸೇನಾದೇವಿಯ ಯೌವನದ ವರ್ಣನೆಗಳು ಇವೆಲ್ಲವೂ ಅಜಿತನಾಥ ಪುರಾಣದ ಧಾರ್ಮಿಕ ಆವರಣವನ್ನು ಮೀರಿ ಸೇರ್ಪಡೆಯಾಗಿರುವುದನ್ನು ನೋಡಿದರೆ ಜೈನ ಧರ್ಮ ಈ ಹೊತ್ತಿಗೆ ಶಿಥಿಲವಾಗುತ್ತಿದ್ದುದು ಸ್ಪಷ್ಟವಾಗುತ್ತದೆ. ಸಗರ ಚಕ್ರವರ್ತಿ ಹಾಗೂ ಬ್ರಾಹ್ಮಣರೂಪಿ ಮಣಿಕೇತು ಇಬ್ಬರ ನಡುವೆ ನಡೆಯುವ ವೈರಾಗ್ಯ ಕುರಿತ ಮಾತುಗಳು, ಅಜಿತನಾಥನ ವೈರಾಗ್ಯಕ್ಕೆ ಕಾರಣವಾಗುವ ಧೂಮಕೇತುವಿನ ಕಾಣ್ಕೆ ಮುಂತಾದ ಸಂಗತಿಗಳು ವೈದಿಕ ಪ್ರಧಾನ ಆಚರಣೆ ಹಾಗೂ ಮನೋಧರ್ಮಗಳ ಪ್ರಭಾವವನ್ನು ಸೂಚಿಸುತ್ತವೆ. ಒಟ್ಟು ಶಿಥಿಲಗೊಂಡ ಹಾಗೂ ಬೌದ್ಧ, ವೈದಿಕದಂತಹ ಅನ್ಯ ಧರ್ಮದ ಪ್ರಭಾವಗಳಿಗೆ ಒಳಗಾಗಿ ಹೊಸ ರೂಪದತ್ತ ವಾಲುತ್ತಿರುವ ಜೈನ ಧಾರ್ಮಿಕ ಆವರಣವನ್ನು ಇಲ್ಲಿ ಸ್ಪಷ್ಟವಾಗಿ ಕಾಣಬಹುದಾಗಿದೆ.

**ಡಾ|| ವೀರೇಶ ಬಡಿಗೇರ**
ಪ್ರಾಧ್ಯಾಪಕರು, ಹಸ್ತಪ್ರತಿಶಾಸ್ತ್ರ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ,
ವಿದ್ಯಾರಣ್ಯ - ೫೮೩ ೨೭೬, ಹೊಸಪೇಟೆ ತಾಲೂಕು, ಬಳ್ಳಾರಿ ಜಿಲ್ಲೆ

# ಬೇಂದ್ರೆಯವರ 'ಶ್ರದ್ಧಾಂಜಲಿ' ಹಾಗೂ ಕೋಮುವಾದ ವಿರೋಧಿ ಸೃಜನಾತ್ಮಕ ನೆಲೆ

ಎಂ. ಡಿ. ಒಕ್ಕುಂದ

**'ಕೋ**ಮುವಾದ' ಭಾರತದಲ್ಲಿ ರೂಪಗೊಳ್ಳುವಲ್ಲಿ ವಸಾಹತುಶಾಹಿ ಚರಿತ್ರೆಯ ನಿರ್ವಚನಗಳ ಪಾತ್ರ ದೊಡ್ಡದು. ಅವುಗಳನ್ನು ನಿರಾಕರಿಸಿ ಪ್ರಗತಿಪರ ನೆಲೆಯಿಂದ ಚರಿತ್ರೆಯನ್ನು ಪುನರ್‌ಸೃಷ್ಟಿಸುತ್ತ ಕೋಮುವಾದ ವಿರೋಧಿ ತಾತ್ವಿಕತೆಯನ್ನು ನಿರೂಪಿಸುವ ಪ್ರಕ್ರಿಯೆ ಭಾರತದಲ್ಲಿ ಆರಂಭವಾದದ್ದು ಇಪ್ಪತ್ತನೇ ಶತಮಾನದ ಉತ್ತರಾರ್ಧದಲ್ಲಿ - ಕೋಸಾಂಬಿ ಮೊದಲಾದವರಿಂದ. ಬಿಪನ್ ಚಂದ್ರ, ರಣಬೀರ್ ಸಿಂಗ್, ಅಚಿನ್ ವೆನಾಯಕ್, ಹರ್ಬನ್ಸ್ ಮುಖಿಯಾ, ರೋಮಿಲಾ ಥಾಪರ್ ಮೊದಲಾದ ವಿದ್ವಾಂಸರು ಗತಕಾಲದ ವೈಭವೀಕರಣ ಹಾಗೂ ಮಧ್ಯಕಾಲೀನ ಚರಿತ್ರೆಯ ವಿಕೃತೀಕರಣಗಳನ್ನು ನಿರಾಕರಿಸುವ ಸೌಹಾರ್ದತಾ ಚರಿತ್ರೆಯನ್ನು ೨೦ನೇ ಶತಮಾನದ ಕೊನೆಯ ದಶಕಗಳಲ್ಲಿ ರೂಪಿಸಿದರು. ಆದರೆ ಈ ಯಾವುದೇ ವೈಚಾರಿಕ, ಚಾರಿತ್ರಿಕ ನಿರ್ವಚನಗಳ ಕಲ್ಪನೆ ಇರಲಾರದೆ ಕಾವ್ಯ ಸಂವೇದನೆಯ ಭಾಗವಾಗಿಯೇ ಇಂಥ ಚಿಂತನೆಗಳು ಅಸ್ಪಷ್ಟವಾಗಿ ಕನ್ನಡ ಕಾವ್ಯದಲ್ಲಿ ಮೂಡಿಬಂದಿವೆ. ಸಾಮಾನ್ಯವಾಗಿ ಸಂಕರಶೀಲ ಪ್ರತಿಭೆಗಳು ಈ ಮಾದರಿಯ ಕಾವ್ಯವನ್ನು ಸೃಜಿಸಿವೆ. ಜಗತ್ತಿನ ಎಲ್ಲ ಬಗೆಯ ಧಾರ್ಮಿಕ, ಆಧ್ಯಾತ್ಮಿಕ, ರಾಜಕೀಯ, ಸಾಮಾಜಿಕ ಚಿಂತನಾಧಾರೆಗಳನ್ನು ಮುಕ್ತವಾಗಿ ಸ್ವೀಕರಿಸಿ ಒಂದು ಬಗೆಯ ಸಂಕರಶೀಲ ಮನಃಸ್ಥಿತಿಯನ್ನು ರೂಪಿಸಿಕೊಂಡ ಪ್ರತಿಭೆಗಳು ಕೋಮುವಾದದ ಏಕಾಕಾರಿ ಚಿಂತನೆಗಳನ್ನು ನಿರಾಕರಿಸುತ್ತವೆ. ಬಹುತ್ವವನ್ನು ಪ್ರತಿಪಾದಿಸುತ್ತವೆ. ಇದು ಆ ಕಾಲದ ಒಂದು ವೈಚಾರಿಕ ವ್ಯವಸ್ಥೆಯೂ ಆಗಿರಬಹುದು. ಈ ನೆಲೆಯಿಂದ ಕೋಮುವಾದಿಗಳ ಹಿಂಸೆಯನ್ನು ವಿರೋಧಿಸುವ ಕವಿತೆಗಳು ಬರೆಯಲ್ಪಟ್ಟಿವೆ. ಗಾಂಧೀಜಿಯವರ ಸಾವನ್ನು ಕುರಿತಾದ ಉದಾರವಾದಿ ಬರವಣಿಗೆಗೂ, ಮತೀಯ ನಿರ್ಮತೀಯ ರಾಷ್ಟ್ರೀಯತೆಯ

> ಬೇಂದ್ರೆಯವರ 'ಶ್ರದ್ಧಾಂಜಲಿ' ಮತ್ತು ಗಾಂಧಿಯನ್ನು ಕುರಿತಾದ ಕವಿತೆಗಳು ಅವರ ರಾಜಕೀಯ ನಿಲುವುಗಳನ್ನು ಸ್ಪಷ್ಟಪಡಿಸುತ್ತವೆ. ಸೌಹಾರ್ದತೆಯ ಪ್ರತಿಪಾದನೆ ಇಲ್ಲಿ ಉದಾರವಾಗಿ ಮಾನವೀಯ ನೆಲೆಯಿಂದ ಪ್ರತಿಪಾದನೆಗೊಂಡಿಲ್ಲ. ಕೋಮುಹಿಂಸೆಯ ಚಾರಿತ್ರಿಕ ಗ್ರಹಿಕೆಯಿಂದ ಪ್ರತಿಪಾದನೆಗೊಂಡಿದೆ. ಬೇಂದ್ರೆಯವರ ಈ ಚಾರಿತ್ರಿಕ ಪ್ರಜ್ಞೆ ಹಾಗೂ ರಾಜಕೀಯ ನಿಲುವುಗಳನ್ನು ಅಪರೂಪಕ್ಕೆ ಅವರ ಕಾವ್ಯದಲ್ಲಿ ಹಣಿಕಿಹಾಕುವ ಗತಕಾಲದ ವೈಭವೀಕರಣ, ಮುಸ್ಲಿಮರ ಬಗ್ಗೆ ತಿರಸ್ಕಾರ, ಹಿಂದೂ ಆಕರಗಳ ಬಳಕೆಯಂಥ ಸಂಗತಿಗಳನ್ನು ದೂರ ಸರಿಸುತ್ತವೆ. ಆದರೆ ಕುವೆಂಪು ಅವರ ವಿಷಯದಲ್ಲಿ ಇದೇ ಮಾತನ್ನು ಹೇಳಲಾಗದು.
>
> ಬೇಂದ್ರೆಯವರು ಸಾವಿನ ಮೂಲಕ ಗಾಂಧಿಯನ್ನು ಹೆಚ್ಚು ಪ್ರವೇಶಿಸುವುದರಿಂದೋ ಏನೋ ಗಾಂಧಿ ವ್ಯಕ್ತಿತ್ವ ಚಿಂತನೆಗಳಲ್ಲಿರುವ ವೈರುಧ್ಯಗಳನ್ನು ಗ್ರಹಿಸಲು ಅವರಿಗೆ ಸಾಧ್ಯವಾಗಿಲ್ಲ. 'ಗಾಂಧಿಯುಗದಲ್ಲಿ ಬದುಕಿದವರು ತಾವು' ಎಂದು ಹೆಮ್ಮೆಪಟ್ಟುಕೊಳ್ಳುವ ಬೇಂದ್ರೆಯವರಿಂದ ಅದನ್ನು ನಿರೀಕ್ಷಿಸುವುದು ಸಾಧುವೂ ಅಲ್ಲ.

ಅನುಸಂಧಾನದ ಅಭಿವ್ಯಕ್ತಿಗೂ, ಸಂಕರಶೀಲ ನೆಲೆಯಿಂದ ವಿರೋಧಿಸುವ ಕಾವ್ಯಕ್ಕೂ, ವ್ಯತ್ಯಾಸವಿದೆ. ಬೇಂದ್ರೆಯವರು 'ಗಾಂಧೀಜಿ'ಯವರನ್ನು ಕುರಿತಾಗಿ 'ಶ್ರದ್ಧಾಂಜಲಿ'ಯಂಥ ಕವಿತೆಯನ್ನು ಬರೆಯಲು ಸಾಧ್ಯವಾಗಿದ್ದು ಬಹುತ್ವವನ್ನು ಒಪ್ಪುವ ಸಂಕರಿತ ಪ್ರಜ್ಞೆಯ ನೆಲೆಯಿಂದ. ಇದನ್ನು ಕೋಮುವಾದ ವಿರೋಧಿ ಸೃಜನಶೀಲ ನೆಲೆ ಎಂದು ಗುರುತಿಸಬಹುದಾಗಿದೆ.



### ದ. ರಾ. ಬೇಂದ್ರೆಯವರ ಕವಿತೆ 'ಶ್ರದ್ಧಾಂಜಲಿ'

ಕನ್ನಡದಲ್ಲಿ ಬೇಂದ್ರೆಯವರ ಕಾವ್ಯವನ್ನು ಕುರಿತಾಗಿ ಒಂದು ವಿಮರ್ಶಾ ಪರಂಪರೆಯೇ ನಿರ್ಮಾಣವಾಗಿದೆ. ಬೇಂದ್ರೆಯವರ ಕಾವ್ಯದಲ್ಲಿ ಪ್ರಕೃತಿ, ಕಾಮ, ಧರ್ಮ, ಅನುಭಾವ, ಸಮಾಜ, ದಾಂಪತ್ಯ ದರ್ಶನಗಳು ಹೀಗೆ ಹಲವಾರು ಮಗ್ಗುಲುಗಳಿಂದ ಗಂಭೀರವಾದ ಅಧ್ಯಯನಗಳು ನಡೆದಿವೆ. ಆದರೆ ಬೇಂದ್ರೆಯವರ ರಾಜಕೀಯ ಪ್ರಜ್ಞೆ ಹಾಗೂ ನಿಲುವುಗಳನ್ನು ಕುರಿತಾದ ವಿಮರ್ಶೆ ಇಲ್ಲವೆನ್ನುವಷ್ಟು ಕಡಿಮೆ. ವಸಾಹತುಶಾಹಿ ಹಾಗೂ ವಸಾಹತೋತ್ತರ ಭಾರತದಲ್ಲಿ ಮುಕ್ಕಾಲು ಶತಮಾನ ಬದುಕಿದ ಬೇಂದ್ರೆಯವರು ವಸಾಹತುಶಾಹಿ ಹಾಗೂ ವಸಾಹತೋತ್ತರ ಬದುಕಿಗೆ ನೀಡಿದ ರಾಜಕೀಯ ಪ್ರತಿಕ್ರಿಯೆಯ ವಿನ್ಯಾಸವನ್ನು ರೂಪಿಸಬೇಕಿದೆ. ಬೇಂದ್ರೆಯವರ ಕಾವ್ಯದಲ್ಲಿಯ ಧರ್ಮ, ದರ್ಶನ, ಅನುಭಾವ ಹಾಗೂ ಅವುಗಳ ಹಿಂದಿನ ಬೌದ್ಧಿಕ ವ್ಯವಸ್ಥೆಗಳ ಸ್ವರೂಪವನ್ನು ಕುರಿತು ನಡೆದ ಅಧ್ಯಯನಗಳಲ್ಲಿ ಬೇಂದ್ರೆಯವರು ಭಾರತದ ರಾಷ್ಟ್ರೀಯ ಹೋರಾಟ ಹಾಗೂ ಸ್ವಾತಂತ್ರ್ಯೋತ್ತರ ಭಾರತದ ಕೋಮುವಾದಿ ಚಿಂತನೆಗಳಿಗೆ ಪ್ರತಿಕ್ರಿಯಿಸಿದ ಬಗೆಯನ್ನು ಚರ್ಚಿಸದೆ ಇರುವುದಕ್ಕೆ ಬೇಂದ್ರೆಯವರ ಕಾವ್ಯದಲ್ಲಿ ವ್ಯಕ್ತವಾದ ಅವರ ರಾಜಕೀಯ ಚಿಂತನೆಗಳನ್ನು ಗಂಭೀರವಾಗಿ ಪರಿಗಣಿಸದೇ ಇರುವದು ಕಾರಣವಾಗಿರಬಹುದು. ನವೋದಯ ಸಂದರ್ಭದ ಯಾವುದೇ ಕವಿಗಳಿಗಿಂತಲೂ ಬೇಂದ್ರೆಯವರ ಕಾವ್ಯ ಹೆಚ್ಚು ನಿರ್ಮತೀಯವಾದಿಯಾಗಿರುವದಕ್ಕೆ ಅವರ ರಾಜಕೀಯ ಒಳನೋಟಗಳು ಕಾರಣವಾಗಿವೆ. ಈ ಹಿನ್ನೆಲೆಯಲ್ಲಿ ಗಾಂಧೀಜಿಯವರ ಕೊಲೆಯನ್ನು ಕುರಿತಾದ 'ಶ್ರದ್ಧಾಂಜಲಿ' ಎಂಬ ಕವಿತೆಯನ್ನು ಇಲ್ಲಿ ಚರ್ಚೆಗೆ ಎತ್ತಿಕೊಳ್ಳಲಾಗಿದೆ. ಈ ಕವಿತೆಯು ಬೇಂದ್ರೆಯವರ ೧೯೫೬ರಲ್ಲಿ ಪ್ರಕಟವಾದ 'ಸೂರ್ಯಪಾನ' ಸಂಕಲನದಲ್ಲಿದೆ.

**ಬೇಂದ್ರೆ ಎಂಬ ಸಂಕರಶೀಲ ಪ್ರತಿಭೆ**

ಭಾರತದ ಸಂಸ್ಕೃತಿಯ ಸಂಕರಶೀಲತೆ ಹಾಗೂ ವೈವಿಧ್ಯತೆಗಳನ್ನು ಅಸಂಖ್ಯ ಆಯಾಮಗಳಲ್ಲಿ ಮೈದುಂಬಿಕೊಂಡು ಬರೆದ ಕವಿ ಬೇಂದ್ರೆಯವರು. ಅವರು ಗಾಯತ್ರಿ, ಉಷಾ, ಸರಸ್ವತಿ, ಅಗ್ನಿ, ಗಣಪತಿ ಮೊದಲಾದ ವೇದೋಕ್ತ ದೇವತೆಗಳನ್ನು ಕುರಿತು ಸ್ತುತಿಪದ್ಯಗಳನ್ನು ಬರೆಯಬಲ್ಲರು. ರಾಮಕೃಷ್ಣರ ಅವತಾರಗಳನ್ನು ಹಾಡಿ ಹೊಗಳಬಲ್ಲರು. ಬುದ್ಧ, ಜಿನ, ಬಸವರಂಥ ವೈದಿಕ ವಿರೋಧಿ ಚಿಂತಕರನ್ನು ಕುರಿತು ಕವಿತೆ ರಚಿಸಬಲ್ಲರು. ವಿಟ್ಠಲ, ಜ್ಞಾನೇಶ್ವರ, ಚಾಂಗದೇವ, ಸ್ವಾಮಿ ಸಮರ್ಥಾನಂದ, ಮೋರೋಪಂತ, ಕೇಶವಸುತರಂಥ ಕೆಳವರ್ಗದ ಧಾರ್ಮಿಕ ನಾಯಕರು ಹಾಗೂ ತತ್ವ ಪ್ರತಿಪಾದಕರಿಂದ ಪ್ರೇರಣೆ ಪಡೆಯಬಲ್ಲರು. ಖಲೀಲ್ ಗಿಬ್ರಾನ್, ರಮಣ ಮಹರ್ಷಿ, ರಾಮಕೃಷ್ಣ ಪರಮಹಂಸ, ವಿವೇಕಾನಂದ, ಶ್ರೀ ಅರವಿಂದರು, ಶ್ರೀಮಾತಾ, ಜಿಡ್ಡು ಕೃಷ್ಣಮೂರ್ತಿ ಮೊದಲಾದ ಅನುಭಾವಿಗಳಿಂದ ಸ್ಫೂರ್ತಿ ಪಡೆಯಬಲ್ಲರು. ಸತ್ಯಸಾಯಿಬಾಬಾ ಕೂಡ ಅವರಿಗೆ ಆರಾಧನಾಶಕ್ತಿಯಾಗುತ್ತಾರೆ. ಗಾಂಧಿ ಹಾಗೂ ಟಿಳಕರನ್ನು ಕುರಿತು ಬರೆಯಬಲ್ಲರು. ಸಾಹಿತ್ಯ ಪರಂಪರೆಯಿಂದ ಪ್ರೇರಣೆ ಪಡೆಯುವಲ್ಲಿಯೂ ಅವರದು ಇದೇ ಮಾರ್ಗ. ಸಂಸ್ಕೃತ, ಇಂಗ್ಲಿಷ್, ಕನ್ನಡ ಭಾಷೆಯ ಬಹುತೇಕ ಮಹತ್ತರ ಕವಿಗಳಿಂದ ಪ್ರಭಾವಗಳನ್ನು ಸ್ವೀಕರಿಸಬಲ್ಲರು. ಈ ಬಗೆಯ ಸ್ವೀಕಾರಕ್ಕೆ ಅವರಿಗೆ ಧರ್ಮ, ಮತ, ಪಂಥ, ಭಾಷೆ, ಜನಾಂಗ, ಶಿಷ್ಟ, ಗ್ರಾಮ್ಯ, ಆಸ್ತಿಕ, ನಾಸ್ತಿಕ... ಇತ್ಯಾದಿ ಯಾವುದೇ ಕಟ್ಟುಪಾಡುಗಳಿಲ್ಲ. ಅಸಂಖ್ಯ ವೈವಿಧ್ಯಗಳು ಹಾಗೂ ಅನೇಕ ವೈರುಧ್ಯಗಳ ನೆಲೆಗಳನ್ನು ಏಕೀಭವಿಸುವ ಅವರ ಈ ಗುಣವನ್ನು ಡಿ. ಆರ್. ನಾಗರಾಜ ಹೀಗೆ ಗುರುತಿಸುತ್ತಾರೆ: ''ಅತ್ಯಂತ ಆಳದಲ್ಲಿ ಹೊಂದಿಕೆಯಾಗದ ಸೂಕ್ಷ್ಮ ವ್ಯತ್ಯಾಸಗಳಿರುವ, ಕೆಲವೊಮ್ಮೆ ಅಂತಿಮ ಪರಿಣಾಮದಲ್ಲಿ ವಿರುದ್ಧ ನಿಲುವುಗಳಿಗೆ ಕೂಡ ತಳ್ಳಬಲ್ಲ ವಿವಿಧ ಬೌದ್ಧಿಕ ವ್ಯವಸ್ಥೆಗಳು ಬೇಂದ್ರೆಯವರನ್ನು ಪ್ರಭಾವಗೊಳಿಸಿವೆ. ಉಪನಿಷತ್ತುಗಳು, ಸಾಂಖ್ಯ, ಅನುಭಾವ, ಅರವಿಂದರ ವಿಚಾರಧಾರೆ– ಈ ಎಲ್ಲ ಮುಖ್ಯ ಪ್ರಭಾವಗಳೂ ಕೂಡ ಅತ್ಯಂತ ಸೂಕ್ಷ್ಮ ಹಂತದಲ್ಲಿ ಬೇರೆಯೇ ಆದವುಗಳು ಎಂಬುದನ್ನು ತೌಲನಿಕ ತತ್ವಜ್ಞಾನ ಹಾಗೂ ತೌಲನಿಕ ಧರ್ಮ ಮೀಮಾಂಸೆಗಳ ವಿದ್ಯಾರ್ಥಿಗಳಿಗೆ ವಿವರಿಸಬೇಕಿಲ್ಲ...'' ಬೇಂದ್ರೆಯವರು ಈ ಸಮಸ್ಯೆಯನ್ನು ಪರಿಹರಿಸಿಕೊಂಡಿದ್ದು ಒಂದು ವಿಶಾಲವಾದ ವೈಯಕ್ತಿಕ ತತ್ವಜ್ಞಾನವನ್ನು ಮತ್ತು ಅನುಭವ ವಿಶ್ಲೇಷಣಾ ವಿಧಾನವನ್ನು ರೂಪಿಸಿಕೊಳ್ಳುವುದರ ಮೂಲಕ. ಯೇಟ್ಸನ ಹಾಗೆ ಬೇಂದ್ರೆಯವರು ಕೂಡ ಬೌದ್ಧಿಕ ವ್ಯವಸ್ಥೆಯನ್ನು ವೈಯಕ್ತಿಕ ಹಂತದಲ್ಲಿ ರೂಪಿಸಿಕೊಂಡರು. ಈ ಬೌದ್ಧಿಕ ವ್ಯವಸ್ಥೆಯನ್ನು ಸಂಕರಶೀಲ ಬೌದ್ಧಿಕ ವ್ಯವಸ್ಥೆ ಎಂದು ಕರೆಯಬಹುದು. ಸಂಕರಶೀಲತೆಯೆನ್ನುವುದು ತನಗೆ ಬೇಕಾದುದನ್ನು ಸ್ವೀಕರಿಸುವ'' ಬೇಡವಾದುದನ್ನು ಬಿಡುವ ಪ್ರಕ್ರಿಯೆಯೂ ಹೌದು. ಬೇಂದ್ರೆಯವರು ಮೇಲೆ ಉಲ್ಲೇಖಿಸಿದ ಎಲ್ಲ ಆಕರಗಳಿಂದಲೂ ತಮ್ಮ ವೈಯಕ್ತಿಕ ಬೌದ್ಧಿಕ ವ್ಯವಸ್ಥೆಗೆ ಬೇಕಾದುದನ್ನು ಮಾತ್ರ ಸ್ವೀಕರಿಸಿ ಬೇಡವಾದುದನ್ನು ಬಿಟ್ಟರು. ಟಿಳಕರ ಮತೀಯ ರಾಜಕಾರಣದ ನೆಲೆಯನ್ನು ಬಿಟ್ಟು 'ಸ್ವರಾಜ್ಯ' ಕಲ್ಪನೆಯನ್ನು ಸ್ವೀಕರಿಸಲು, ಅರವಿಂದರ ಅನುಭಾವಿಕ ನೆಲೆಯನ್ನು ಮಾತ್ರ ಕೇಂದ್ರೀಕರಿಸಲು ಸಾಧ್ಯವಾದದ್ದನ್ನು ಉದಾಹರಿಸಬಹುದು. ಅವರ ಆಧ್ಯಾತ್ಮಿಕ ಚಿಂತನೆಗಳೆಲ್ಲ ಗಾಢವಾದ ಆಸ್ತಿಕತೆಯಿಂದಲೇ ಆರಂಭವಾಗುತ್ತವೆ. ಅವರ ಪ್ರಾರ್ಥನೆಗಳಲ್ಲಿ ಆತ್ಮಕಲ್ಯಾಣ ಮತ್ತು ಲೋಕಕಲ್ಯಾಣಗಳೇ ಉದ್ದಿಷ್ಟ ಫಲಗಳಾಗಿವೆ. ಆತ್ಮಕಲ್ಯಾಣ ಹಾಗೂ ಲೋಕ ಕಲ್ಯಾಣಗಳಿಗಾಗಿ ಸಮಸ್ತಧಾರೆಗಳನ್ನು ತನ್ನ ಬೌದ್ಧಿಕ ವ್ಯವಸ್ಥೆಗೆ ಸ್ವೀಕರಿಸುವ ಈ ಸಂಕರಶೀಲ ಗುಣ, ಲೋಕ ವಿರೋಧಿಯಾದ ನೆಲೆಗಳನ್ನು ವಿರೋಧಿಸುವಲ್ಲಿಯೂ ನಿಷ್ಠುರತೆಯನ್ನು ಹೊಂದಿರುತ್ತದೆ. ಭಾರತೀಯ ಸಂಸ್ಕೃತಿಯ ಬಹುಮುಖತೆ ಹಾಗೂ ಸಂಕರಶೀಲತೆಗಳು ಬೇಂದ್ರೆ ವ್ಯಕ್ತಿತ್ವದ ಜೀವದ್ರವ್ಯ. ಗಾಂಧಿಯನ್ನು ಅದರ ಪ್ರತಿನಿಧಿಯಾಗಿ ಗ್ರಹಿಸುವ ಬೇಂದ್ರೆಯವರು ಈ ತತ್ವಕ್ಕೆ ವಿರುದ್ಧವಾದ ಕೋಮುವಾದ ವಿರೋಧಿಯಾದ ನಿಲುವನ್ನು ಖಚಿತವಾಗಿ ವ್ಯಕ್ತಪಡಿಸುವದನ್ನು ಮುಂದೆ ವಿಶ್ಲೇಷಿಸಲಾಗುವದು.

**ಬೇಂದ್ರೆ ಮತ್ತು ನಿರ್ಮತೀಯ ರಾಷ್ಟ್ರೀಯವಾದಿ ಚಿಂತನೆಗಳು**

ನವೋದಯದ ಪ್ರಮುಖ ಕವಿಗಳ ಕಾವ್ಯದಲ್ಲಿ ಮತೀಯ ರಾಷ್ಟ್ರೀಯವಾದಿ ಚಿಂತನೆಗಳು ಸಹಜ ಸಂವೇದನೆಗಳಾಗಿ ಅಭಿವ್ಯಕ್ತಿ ಪಡೆದಿವೆ. ಗತಕಾಲದ ವೈಭವೀಕರಣ ಹಾಗೂ ಮಧ್ಯಕಾಲೀನ ಚರಿತ್ರೆಯ ವಿಕೃತೀಕರಣಗಳು ಈ ಸಂವೇದನೆಯನ್ನು ರೂಪಿಸಿವೆ ಮತ್ತು ಇಲ್ಲಿ ವಸಾಹತುಶಾಹಿ ಚರಿತ್ರೆಯ ಪ್ರಭಾವವೂ ಇದೆ. ಆದರೆ ಬೇಂದ್ರೆಯವರು ತಮ್ಮ ಕವಿತೆಗಳಲ್ಲಿ ಉದ್ದೇಶಪೂರ್ವಕವಾಗಿ ಈ ಮಿತಿಯನ್ನು ಮೀರಲು ಯತ್ನಿಸುತ್ತಾರೆ. ಇಂಥ ರಾಜಕೀಯ ನಿಲುವನ್ನು ಕುವೆಂಪು ಕೂಡ ಪ್ರಕಟಿಸಲಿಲ್ಲ. ಭಾರತದ ಸಂದರ್ಭದಲ್ಲಿಯಾಗಲಿ, ಕರ್ನಾಟಕ ಇಲ್ಲವೇ ಕನ್ನಡದ ಸಂದರ್ಭದಲ್ಲಾಗಲೀ ಅವರು ಸಮಕಾಲೀನ ಚರಿತ್ರೆಯ ನಿರ್ಮಾಣದ ವಿಧಾನವನ್ನೂ ಸಂಶೋಧನಾ ವಿಧಾನದಲ್ಲಿರುವ ಭೂತಾರಾಧನೆ ಮತ್ತು ಮತೀಯ ನೆಲೆಗಳನ್ನೂ ವಿರೋಧಿಸುತ್ತಾರೆ: ''ಹುಗಿದೆವೆಂದು ಬಗೆದು ನಾಳೆ ಅಗಿದು ತೆಗೆವರು, ಅದು ಸಂಸ್ಕೃತಿ ದರ್ಶನ ಪಾಂಡಿತ್ಯ ಪ್ರದರ್ಶನ'', ''ಇದ್ದ ಜಗಳ ಸಾಲದೆಂದು ಹಳೆದ ಹಡ್ಡಿ ತೆಗೆವರು, ಈ ಕುರುಬರು ಬರುವರು ಎಲ್ಲೋ ದುಷ್ಕೃತಿ ಮಾಸವಾ ಹೊಗಳಿಕೊಳ್ಳುವೆ ದಾನವಾ ನಿಲಿಸು ಕ್ಷುದ್ರ ಗಾನವಾ'', ''ಹಿಂದಿನ ಇತಿಹಾಸ ಪುರಾಣ ಓದಿ ಓದಿ, ಮಂಕಾಯಿತು ನಮ್ಮ ಬುದ್ಧಿ, ಇರಲಿಲ್ಲ ನಮಗ ಶುದ್ಧಿ, ಹೊಯ್ದಾಡಿದ್ದೇ ಆಯ್ತು ನಮ್ಮ ಹಾದಿ''.

ಗತಕಾಲದ ಇತಿಹಾಸವನ್ನು ಬಗೆದು ಅಲ್ಲಿಯ ಹಿಂಸೆಗೆ ವಾರಸುದಾರರಾಗಿ ಸಂಭ್ರಮಿಸುವುದನ್ನೇ ಸಂಸ್ಕೃತಿಯೆಂದು ಬಿಂಬಿಸುವ ಮತೀಯ ಚರಿತ್ರೆಯ ಬಗ್ಗೆ ಬೇಂದ್ರೆ ತೀಕ್ಷ್ಣವಾಗಿ ಪ್ರತಿಕ್ರಿಯಿಸಿದ್ದಾರೆ. ವಸಾಹತುಶಾಹಿ ಚರಿತ್ರೆ ಗತಕಾಲವನ್ನು ಮಧ್ಯಕಾಲಕ್ಕೆ ವೈರಿಯಾಗಿ ನಿಲ್ಲಿಸುವ ಕೋಮುವಾದಿ ಚಿಂತನೆಯ ಬಗ್ಗೆ ಕಾವ್ಯದ ಮೂಲಕ ಪ್ರತಿಕ್ರಿಯಿಸಿದ ಕವಿ ಬೇಂದ್ರೆ ಅವರೇ ಇರಬೇಕು. ಮಧ್ಯಯುಗದ ಚರಿತ್ರೆಯ ಬಗ್ಗೆ ಕೂಡ ಅವರಿಗೆ ಸ್ಪಷ್ಟ ಕಲ್ಪನೆಗಳಿವೆ. 'ನಾ ಕವಿತಾ ಬರೀಬಾರ್ದಿತ್ತು' ಎಂಬ ಕವಿತೆಯಲ್ಲಿ ಮುಸ್ಲಿಂ ಅರಸರು ಮುಸ್ಲಿಮರನ್ನೂ ಹಿಂದೂ ಅರಸರು ಹಿಂದುಗಳನ್ನೂ ಕೊಂದ ಚರಿತ್ರೆಯ ಸತ್ಯಗಳನ್ನು ನೆನಪಿಸುತ್ತಾರೆ. ಅಮೆರಿಕಾ, ಜರ್ಮನಿ, ಕೊರಿಯಾ, ಚೈನಾ, ವಿಯಟ್ನಾಂ, ಇಂಡಿಯಾ, ಪಾಕಿಸ್ತಾನ, ಆಫ್ರಿಕಾಗಳನ್ನು ಒಡೆದುಹಾಕಿದ ಸಾಮ್ರಾಜ್ಯಶಾಹಿ ರಾಜಕಾರಣದ ಪ್ರಸ್ತಾಪವನ್ನು ಅವರು ಮಾಡುತ್ತಾರೆ. 'ಏಷಿಯಾ ಖಂಡ ತುಂಡ ತುಂಡ ಮಾಡದಿದ್ದರ ಯುರೋಪಿನ ತುಂಟ ಪುಂಡರ ಬಳ್ಳಿ ಉಳಿದೀತ್ಯಾಕ!' ಭಾರತ-ಪಾಕಿಸ್ತಾನ ಯುದ್ಧದಲ್ಲಿ ಅಮೆರಿಕಾದ ಪಾತ್ರವನ್ನು ನೆನಪಿಸುತ್ತಾ ಅದರೊಂದಿಗೆ ಮಧ್ಯಯುಗೀನ ಚರಿತ್ರೆಯನ್ನು ಕುರಿತಾದ ವಸಾಹತುಶಾಹಿ ಒಡೆದಾಳುವ ನೀತಿಗೆ ಸಂಬಂಧ ಕಲ್ಪಿಸುತ್ತಾರೆ. ಚರಿತ್ರೆಯ ಮತೀಕರಣದ ಬಗ್ಗೆ ಅವರಿಗೆ ಸ್ಪಷ್ಟವಾದ ರಾಜಕೀಯ ಕಲ್ಪನೆಗಳಿದ್ದುವು.

ಇಷ್ಟಾಗಿಯೂ ಅವರ ಕಾವ್ಯದಲ್ಲಿ ಅತೀ ಕಡಿಮೆ ಪ್ರಮಾಣದಲ್ಲಿ ಮತೀಯ ರಾಷ್ಟ್ರೀಯತೆಯು ಹಣಕಿಹಾಕುತ್ತದೆ. ಆದರೆ ಅದರ ವಿರುದ್ಧ ನಿಲುವುಗಳನ್ನು ದಾಖಲಿಸುವ ಮೂಲಕ ಅವರು ಸಾಮರಸ್ಯವಾದಿ ರಾಜಕೀಯ ನಿಲುವನ್ನು ವ್ಯಕ್ತಪಡಿಸುತ್ತಾರೆ. ಈ ಎರಡು ಸಂಗತಿಗಳು ಬೇಂದ್ರೆಯವರ 'ಶ್ರದ್ಧಾಂಜಲಿ' ಕವಿತೆಯ ಚರ್ಚೆಗೆ ಅಗತ್ಯ ಪ್ರವೇಶಿಕೆಗಳಾಗಿವೆ.

**ಬೇಂದ್ರೆ ಕಾವ್ಯದಲ್ಲಿ ಗಾಂಧಿ ಕೊಲೆಯ ಮಹಾರೂಪಕ**

ಬೇಂದ್ರೆಯವರು ಗಾಂಧೀಜಿಯವರನ್ನು ಕುರಿತು ಸುಮಾರು ಹದಿನೆಂಟು ಕವಿತೆಗಳನ್ನು ಬರೆದಿದ್ದಾರೆ. ಅವುಗಳಲ್ಲಿ ಸುಮಾರು ಹತ್ತು ಕವಿತೆಗಳು ಗಾಂಧೀಜಿಯವರ ಕೊಲೆ ಮತ್ತು ಮರಣವನ್ನೇ ಕೇಂದ್ರೀಕರಿಸುತ್ತವೆ. ಡಾ|| ಜಿ. ಎಸ್. ಅಮೂರ್ ಅವರು ಗುರುತಿಸುವಂತೆ ''ಗಾಂಧೀಜಿಯವರನ್ನು ಕುರಿತು ಬೇಂದ್ರೆಯವರು ಬರೆದ ಕವಿತೆಗಳಲ್ಲಿ ಹೆಚ್ಚಿನವು ಮರಣದ ನಂತರ ಬರೆದವು.'' ಸುಮಾರು ನಾಲ್ಕು ಕವಿತೆಗಳಲ್ಲಿ ಮರಣ ಪ್ರಸ್ತಾಪಗೊಳ್ಳುತ್ತದೆ. ಗಾಂಧೀಜಿಯವರ ಕೊಲೆ, ಕೊಂದವರ ಹಿಂಸಾಗುಣ, ಅದಕ್ಕೆ ಜನತೆಯ ಪ್ರತಿಕ್ರಿಯೆ ಮುಂತಾದ ಸಂಗತಿಗಳನ್ನು ಹಿಂಸೆ-ಅಹಿಂಸೆಯ ಪರಿಭಾಷೆಯಲ್ಲಿ ಮಾತ್ರ ಚರ್ಚಿಸದೆ ಕೋಮುವಾದ ಮತ್ತು ಧಾರ್ಮಿಕ ಸಾಮರಸ್ಯದ ಸಂಘರ್ಷದ ನೆಲೆಗೂ ವಿಸ್ತರಿಸುತ್ತಾರೆ. ಗಾಂಧೀಜಿಯವರ ಸಾವಿನ ದಿನದಿಂದ ಹಿಡಿದು ೧೯೮೦ರಲ್ಲಿ ಪ್ರಕಟವಾದ 'ಬಾಪೂಜಿ-ಪೂಜಿ' ಕವಿತೆಯವರೆಗೂ ಮರಳಿ ಮರಳಿ ಅದನ್ನು ನೆನಪಿಸುತ್ತಾ ಹೋಗುತ್ತಾರೆ. ಗಾಂಧಿ ಹತ್ಯೆಯ ಆಘಾತವನ್ನು ತನ್ನ ಸೃಜನಶೀಲತೆಯ ಬಹುಮುಖ್ಯ ರೂಪಕವಾಗಿ ಸ್ವೀಕರಿಸುವುದು, ಗಾಂಧಿ ಮತ್ತು ಗೋಡ್ಸೆ ವೈರುಧ್ಯಗಳನ್ನು ನಿರಂತರವಾಗಿ ಮುಖಾಮುಖಿಯಾಗಿಸುವುದು, ಜನತೆಯ ತಲ್ಲಣ ಸಂಕಟಗಳನ್ನು ಮರಳಿ ಮರಳಿ ಅಭಿವ್ಯಕ್ತಿಸುವುದು, ಸೌಹಾರ್ದತೆಯ ಗಾಂಧೀ ಚಿಂತನೆಗಳನ್ನು ಎತ್ತಿಹಿಡಿಯುವುದು, ಬೇಂದ್ರೆಯವರ ಗಾಂಧಿ ಕವಿತೆಗಳ ಲಕ್ಷಣಗಳಾಗಿವೆ. ಕವಿಯೊಬ್ಬ ಕೋಮುವಾದದ ವಿರುದ್ಧ ತೋರಿದ ಪ್ರಖರ ರಾಜಕೀಯ ಪ್ರತಿಭಟನೆಯ ಕಾವ್ಯಾತ್ಮಕ ಮಾದರಿ ಇದು.

**ಕೋಮುವಾದ ಹಾಗೂ ಸಾಮರಸ್ಯವಾದಗಳ ಸಂಘರ್ಷದ ಸ್ವರೂಪ**

*ಹಿಂಸೆ ಕೊನೆಗ ಹಿಂಸೆಯನ್ನು ಗುಂಡುಹಾಕಿ ಕೊಂದಿತೋ ?*
*ತನ್ನ ಕೊಲೆಯ ಕೊನೆಗಾಣಿಸಿ ಇವಗೆ ಶರಣು ಬಂದಿತೋ ?*
*ಅಯ್ಯೋ ಇವನು ಅಮರ 'ನಾನೇ ತಾನೇ ಸತ್ತೆ' ಎಂದಿತೋ ?*
*ನಾನೆ ಸತ್ತೆ ಎಂದಿತೋ ?*

ಗಾಂಧಿ ಮತ್ತು ಗೋಡ್ಸೆ ಇಬ್ಬರನ್ನೂ ಕವಿ ಅಹಿಂಸೆ ಮತ್ತು ಹಿಂಸೆಯ ಪ್ರತಿನಿಧಿಗಳಾಗಿ ಗ್ರಹಿಸುತ್ತಾರೆ. 'ಕೊನೆಗೆ' ಎಂಬ ಪದ ಭಾರತದ ರಾಜಕಾರಣದಲ್ಲಿ ಈ ಎರಡೂ ಮೌಲ್ಯಗಳ ನಡುವೆ ನಡೆದ ಸಂಘರ್ಷದ ಒಂದು ತಾರ್ಕಿಕ ಅಂತ್ಯವನ್ನು ಸೂಚಿಸುತ್ತದೆ. ಗಾಂಧೀಜಿಯವರ ಭಾರತದ ರಾಜಕೀಯ ಪ್ರವೇಶದಿಂದಾಗಿ ಕಾಂಗ್ರೆಸ್‌ನಲ್ಲಿ ಹಿಂದೂ ಮೂಲಭೂತವಾದಿ ಶಕ್ತಿಗಳ ಬಲ ಕಡಿಮೆಯಾಗಿ ಆರ್.ಎಸ್.ಎಸ್. ಹುಟ್ಟಿ ಸಾವರ್ಕರ್ ಅವರ ಮೂಲಕ ಹಿಂದುತ್ವದ ಸಿದ್ಧಾಂತವಾಗಿ ಮಾರ್ಪಟ್ಟಿತು. ಭಾರತದ ರಾಷ್ಟ್ರೀಯತೆಯನ್ನು ಧರ್ಮಾಧಾರಿತವಾಗಿ ನಿರೂಪಿಸುವ ಕೋಮುವಾದಕ್ಕೆ ಪ್ರತಿಯಾಗಿ ಗಾಂಧೀಜಿಯವರು ಎಲ್ಲ ಧರ್ಮದವರನ್ನು

ಸಮಾನವಾಗಿ ಒಳಗೊಳ್ಳುವ ಚಿಂತನೆಗಳನ್ನು ಬೆಳೆಸಲು ತಮ್ಮ ಜೀವವನ್ನು ಹಲವಾರು ಬಾರಿ ಪಣಕ್ಕಿಟ್ಟಿದ್ದರು. ಮುಸ್ಲಿಂ ಮೂಲಭೂತವಾದ ಇಷ್ಟೇ ಅಪಾಯಕಾರಿಯಾಗಿ ಬೆಳೆದು, ಅಸಹಾಯಕತೆಯ ಕಟ್ಟಕಡೆಯ ಗಳಿಗೆಯಲ್ಲಿ ಗಾಂಧಿ ದೇಶ ವಿಭಜನೆಗೆ ಸಮ್ಮತಿಸಿದರು. ಕೋಮುವಾದಿಗಳು ಕೋಮುಗಲಭೆಗಳ ಮೂಲಕ ಹಿಂಸೆಯನ್ನು ಹುಟ್ಟುಹಾಕಿದರೆ ಗಾಂಧೀಜಿಯವರು ಉಪವಾಸಗಳ ಮೂಲಕ ಅವುಗಳನ್ನು ಮೆಟ್ಟನಿಂತರು. ಹೀಗಾಗಿ ಭಾರತದ ರಾಷ್ಟ್ರೀಯ ಹೋರಾಟ ಕೋಮುವಾದ ಮತ್ತು ಗಾಂಧಿವಾದದ ನಡುವಿನ ಸಂಘರ್ಷದ ಕಥನವಾಗಿತ್ತು. ಗಾಂಧೀಜಿಯವರ ಕೊಲೆಯು 'ಹಿಂಸೆ ಕೊನೆಗಹಿಂಸೆಯನ್ನು ಗುಂಡು ಹಾಕಿ ಕೊಂದಿತೋ ?' – ಎಂಬ ಕವಿತೆಯ ಸಾಲಿಗೆ ಕಾರಣವಾಗುತ್ತದೆ. ಈ ವಿಶ್ಲೇಷಣೆಗೆ ಸಮರ್ಥನೆಗಳನ್ನು ಬೇಂದ್ರೆಯವರ ಗಾಂಧಿ ಕುರಿತಾದ ಹಲವಾರು ಕವಿತೆಗಳು ಒದಗಿಸುತ್ತವೆ.

''ಹೂವಿಗೆ ಬೇಗೆ ಹಚ್ಚಿದರು ಅದರ ಸೌಂದರ್ಯ ಮೆಚ್ಚಿದರು, ಸಂಸ್ಕೃತಿ ಜಂಭ ಕೊಚ್ಚಿದರು''

''ರೇಸಿಮೆಯ ತೊಟ್ಟವರು ಬಂಗಾರ ಇಟ್ಟವರು ಬೆರಳಾಡಿಸಿದಲ್ಲೆಲ್ಲ 'ವಂದೇ ಮಾತರಂ' ಗೀತ.''

''ಕೊಲ್ಲುವವ ಸಾವಿಗೆ ತಾನೆ ಔತಣ ಕೊಡುವ ಧೃತರಾಷ್ಟ್ರ ಸಂತತಿಗೆ ಇಲ್ಲ ಸಾಮ್ಯದ ನೇತ್ರ''

ಗಾಂಧೀಜಿಯವರನ್ನು ಕೊಂದವರ ಕ್ರೌರ್ಯ, ಅರ್ಥಿಕತೆ, ಮತಾಂಧತೆಗಳನ್ನು ಬೇಂದ್ರೆಯವರು ಗ್ರಹಿಸಲು ಸಾಧ್ಯವಾಗಿದೆ. ''ನಿನ್ನಹಿಂಸೆಗಾ ಹಿಂಸೆ ಕಾಣಿಕೆಯೇ ? ಯಾವ ನ್ಯಾಯ ನೀತಿ ? ಎಂಥ ಪೌರುಷದ ಏನು ನೀತಿ ಇದು ? ಯಾರ ವೀರ ಜಾತಿ ?'' – ಎನ್ನುವಲ್ಲಿ 'ವೀರ' ಎಂಬ ಪದವನ್ನು ಶ್ಲೇಷಪ್ರಿಯ ಹಾಗೂ ಶಬ್ದ ಗಾರುಡಿಗ ಬೇಂದ್ರೆಯವರು ಸಾವರ್ಕರರನ್ನು



ಉದ್ದೇಶಿಸಿ ಬಳಸಿರುವಂತಿದೆ. ''ಹಿಂಸಾ ವೀರರ ಸಂಧಿಯೊಳಗ ಅಮರರಾಗೋದು ಅಷ್ಟ ಸುಲಭಾನೂ ಅಲ್ಲ'' ಎಂಬ ಬೇಂದ್ರೆಯವರ ಸಾಲಿನಲ್ಲಿ 'ಹಿಂಸೆ' ಎಂಬ ಪದ ಸಾಮಾನ್ಯಾರ್ಥದಲ್ಲಿರದೆ ಕೋಮು ಹಿಂಸೆಯನ್ನು ಕುರಿತಾದದ್ದು ಎಂಬುದನ್ನು ಸ್ಪಷ್ಟಪಡಿಸುತ್ತದೆ.

''ಇವ ಬಿಳಿಯ, ಕರಿಯ, ಇಸ್ಲಾಮಿ, ಹಿಂದು, ಆರ್ಯನು ಅನಾರ್ಯನೆಂದು !
ಜೀವಬಾಂಧವ್ಯ ಒರೆಗೆ ಹತ್ತಿರಲು ಪರಸ್ಪರರ ಕೊಂದು
ಮೃತ್ಯುಧ್ಯಾನವೇ ಮೂಡುತಿರುವ ರೌದ್ರಿಕರ ನಡುವೆ ನಡೆದೆ
ದಾಯಾದಿತನದ ಸಾಗರದ ಮಥನದಿಂದೆದ್ದ ವಿಷವ ಕುಡಿದೆ''

– ಯಾವುದನ್ನು ವೈಚಾರಿಕ ಪರಿಭಾಷೆಯಲ್ಲಿ ಕೋಮು ಹಿಂಸೆ ಮತ್ತು ಮತೀಯ ಸೌಹಾರ್ದತೆ ಎಂದು ಹೇಳಲಾಗುತ್ತದೋ ಅವುಗಳಿಗೆ ಬರೆದ ಕಾವ್ಯಾತ್ಮಕ ವ್ಯಾಖ್ಯಾನದಂತಿವೆ ಮೇಲಿನ ಸಾಲುಗಳು. ಬಣ್ಣ, ಧರ್ಮ, ಜನಾಂಗಾಧಾರಿತವಾಗಿ ಹಿಂಸೆಯನ್ನು ಬಿತ್ತುವ ರೌದ್ರಿಕರು ಒಂದು ಕಡೆ; ದಾಯಾದಿ ಮಥನದ ವಿಷ ಕುಡಿವ ಶಿವಸ್ವರೂಪಿ ಗಾಂಧಿ ಇನ್ನೊಂದೆಡೆ. ತಾತ್ವಿಕ ಗೆಲುವು ಸಾಧ್ಯವಾಗದಾದಾಗ ಹಿಂಸೆ ವಿಜೃಂಭಿಸಿತು. ಗಾಂಧೀಜಿಯವರನ್ನು ಬಲಿ ತೆಗೆದುಕೊಂಡಿತು.

ಇದೇ ವೇಳೆಯಲ್ಲಿ ಬೇಂದ್ರೆಯವರ ಕವಿತೆಗಳು ಗಾಂಧೀಜಿಯವರ ಕೊಲೆಯನ್ನು ಧರ್ಮ, ಜಾತಿ, ಜನಾಂಗಾಧಾರಿತವಾದ ಹಿಂಸೆಗೆ ಬಲಿಯಾದ ವಿಶ್ವದ ಶಾಂತಿದೂತರ ಸಾವಿನೊಂದಿಗೆ ಸಮೀಕರಿಸುತ್ತವೆ. 'ಶ್ರದ್ಧಾಂಜಲಿ' ಕವಿತೆಯಲ್ಲಿ ಗಾಂಧೀಜಿಯನ್ನು ಕೊಲ್ಲುವುದರ ಮೂಲಕ ತಾವು ಗೆಲ್ಲಬಹುದೆಂದು ಭ್ರಮಿಸಿದ ಕೋಮುವಾದಿ ಶಕ್ತಿಗಳು ಅಲ್ಲಿಯೂ ಸೋತವು ಎಂದು ತಿಳಿಸಲು ಯತ್ನಿಸುತ್ತಾರೆ. ಗಾಂಧಿಯನ್ನು ಕೊಂದ ಕಾರಣಕ್ಕೆ ದಶಕಗಳವರೆಗೆ ಕೋಮುವಾದಿ ಶಕ್ತಿಗಳಿಗೆ ಭಾರತದ ಸಮಾಜದಲ್ಲಿ ತಲೆ ಎತ್ತಲು ಸಾಧ್ಯವಾಗಿರಲಿಲ್ಲ.

**ಗಾಂಧಿ ಸತ್ತರೂ ಸೌಹಾರ್ದತೆ ಅಳಿಯಲಿಲ್ಲ**

ಬೇಂದ್ರೆಯವರು ಗಾಂಧೀಜಿಯವರ ಕೊಲೆಯ ಸಂದರ್ಭದ ಭಾರತದ ಚರಿತ್ರೆಗೆ ತೀವ್ರವಾಗಿ ಸ್ಪಂದಿಸಿದ್ದಾರೆ. ಗಾಂಧೀಜಿಯವರ ಕೊಲೆಯು ದೇಶವನ್ನು ಭಯಂಕರ ತಲ್ಲಣಕ್ಕೆ ಈಡುಮಾಡಿತ್ತು. ಪ್ರಧಾನಿ ಜವಾಹರಲಾಲ್ ನೆಹರು ಅವರು ಗದ್ಗದಿತರಾಗಿ ದೇಶಕ್ಕೆ ಸಮಾಧಾನ ಹೇಳಿದ್ದರು. ''ನಮ್ಮ ಬಾಳಿನ ಬೆಳಕು ಆರಿಹೋಯಿತು, ಎಲ್ಲೆಲ್ಲೂ ಕಗ್ಗತ್ತಲೆ ಕವಿದಿದೆ... ಆರಿಹೋಯಿತೆಂದೆ. ಅದು ತಪ್ಪು. ಈ ದೇಶವನ್ನು ಬೆಳಗಿಸಿದ ಆ ಬೆಳಕು ಸಾಮಾನ್ಯವಾದ ಬೆಳಕಲ್ಲ. ಸಾವಿರಾರು ವರ್ಷಗಳು ಆ ಬೆಳಕು ಕಾಣಿಸುತ್ತಲೇ ಇರುತ್ತದೆ.'' 'ಶ್ರದ್ಧಾಂಜಲಿ' ಕವಿತೆಯು ಜವಾಹರಲಾಲರ ಮಾತಿಗೆ ನೀಡಿದ ಅಭಿವ್ಯಕ್ತಿಯಂತಿದೆ.

ಕೋಮುವಾದ ಗಾಂಧಿವಾದವನ್ನು ಕೊಂದೆನೆಂದುಕೊಂಡಿದ್ದರೆ ಗಾಂಧಿವಾದ ಆ ಕ್ಷಣಕ್ಕೆ ಕೋಮುವಾದವನ್ನು ನಾಶಪಡಿಸಿತು. ಅದು ಭಾರತ ಮಾತ್ರವಲ್ಲ, ವಿಶ್ವದ ಮತೀಯ ಹಿಂಸೆಯ ಕತ್ತಲೆಯನ್ನು ಕಳೆಯಿತು. 'ಗಾಂಧಿಗಂಧ'ವಾಗಿ ಮತೀಯ ಸಾಮರಸ್ಯವು ವಿಶ್ವವನ್ನು ವ್ಯಾಪಿಸಿತು ಎನ್ನುವುದು ಬೇಂದ್ರೆಯವರ ಗ್ರಹಿಕೆಯಾಗಿದೆ.

ವಲ್ಲಭಭಾಯಿ ಪಟೇಲ್ ಕೂಡ ತಮ್ಮ ಭಾಷಣದಲ್ಲಿ ''ಅವರನ್ನು ಕೊಂದ ಹುಚ್ಚು ಯುವಕ ದಿವ್ಯ ಸಂದೇಶಗಳನ್ನು ಧ್ವಂಸ ಮಾಡಿದನೆಂದು ಭಾವಿಸಿದ್ದರೆ ಅದು ಶುದ್ಧ ತಪ್ಪು. ಬಹುಶಃ ಭಗವಂತ, ಗಾಂಧೀಜಿಯು ತಮ್ಮ ಮರಣದ ಮೂಲಕ ತಮ್ಮ ದೈವೀ ಕಾರ್ಯವನ್ನು ಈಡೇರಿಸಬೇಕೆಂದು ಇಚ್ಛಿಸಿದ್ದನೋ ಏನೋ'' ಎಂದು ಹೇಳುತ್ತಾರೆ. 'ಸೋಲನೆಲ್ಲ ಗೆಲವುಗೊಳಿಸಿ ಮುಕ್ತನಾದ ಭೂಪನು', ವಲ್ಲಭಭಾಯಿ ಪಟೇಲರ ಮಾತಿಗೂ ಬೇಂದ್ರೆ ಅಭಿವ್ಯಕ್ತಿ ನೀಡಿದ್ದಾರೆ.

ದೇಶ ವಿಭಜನೆಗೆ ಪೂರ್ವದಲ್ಲಿಯೇ ಹಿಂದೂ-ಮುಸ್ಲಿಂ ಮತೀಯ ಶಕ್ತಿಗಳ ಅಟ್ಟಹಾಸದಿಂದ ಕಲ್ಕತ್ತಾ, ನವಖಾಲಿಗಳಲ್ಲಿ ಮಾರಣಹೋಮ ನಡೆದಿತ್ತು. 'ಕಲ್ಕತ್ತೆಯ ರಕ್ತದ ಕೆಸರಿನಲ್ಲಿ ಕೋಲೂರಿಕೊಂಡು ಜತೆಗೆ ಯಾವ ಅಂಗರಕ್ಷಕರೂ ಇಲ್ಲದೇ ಗಾಂಧಿ ಬೀದಿಬೀದಿಯಲ್ಲಿ ನಡೆದು ಜನರಿಗೆ ಹಿಂದೂ-ಮುಸ್ಲಿಂ ಮೈತ್ರಿ ಸಂದೇಶವನ್ನು ಸಾರಿದರು'. ದೇಶ ವಿಭಜನೆಯ ಸಂದರ್ಭದಲ್ಲಿಯಂತೂ ಲಾಹೋರ್ ಹಾಗೂ ದೆಹಲಿಗಳ ಗಟಾರಗಳಲ್ಲಿ ಅಕ್ಷರಶಃ ರಕ್ತ ಹರಿಯುತ್ತಿತ್ತು. ಇದರ ಶಮನಕ್ಕೆ ಗಾಂಧಿ ಶಕ್ತಿ ಮೀರಿ ಪ್ರಯತ್ನಿಸಿದ್ದರು. ಆದರೂ ದೇಶದಾದ್ಯಂತ ಸೌಹಾರ್ದತಾ ವಾತಾವರಣ ಸಂಪೂರ್ಣ ನಿರ್ಮಾಣವಾಗಿರಲಿಲ್ಲ. ಮತಗಳನ್ನು ಮತೀಯತೆಯಿಂದ ಶುದ್ಧೀಕರಿಸುವ ಯಜ್ಞವನ್ನೇ ಬದುಕಾಗಿಸಿಕೊಂಡ ಗಾಂಧಿ ಅಸಹಾಯಕರಾಗಿದ್ದರು. ತಮ್ಮ ಜೀವಿತಾವಧಿಯ ಎಲ್ಲ ಪ್ರಯತ್ನಗಳೂ ಸಂಪೂರ್ಣ ಗೆಲುವನ್ನು ನೀಡಿರಲಿಲ್ಲ. ಬದುಕಿನ ಸೋಲನ್ನೆಲ್ಲ ಕೊಲೆಗೀಡಾಗುವದರ ಮೂಲಕ ಗೆಲುವಾಗಿ ಪರಿವರ್ತಿಸಿದ್ದರು. ಗಾಂಧಿ ಸಾವಿನ ಸಾರ್ಥಕತೆಯ ಬಗ್ಗೆ ಬೇಂದ್ರೆ ಹಲವಾರು ಬಾರಿ ಉದ್ಗಾರ ತೆಗೆಯುತ್ತಾರೆ. ಸತ್ತು ಸೌಹಾರ್ದತೆ ಸಾಧಿಸಿದ ಸಾವದು. ಬೇಂದ್ರೆಯವರ ಕವಿತೆ ಅಂತಿಮವಾಗಿ ಧಾರ್ಮಿಕ ಸೌಹಾರ್ದತೆಯ ಕರೆಯನ್ನು ನೀಡುತ್ತದೆ. ಸೌಹಾರ್ದತೆಯ ಪಣತಿ ಶಾಶ್ವತವಾಗಿ ಉರಿಯಲು ಗಾಂಧಿ ಬಿಟ್ಟುಹೋದ ಬೆಳಕಿನಿಂದ ಹೊಸ ಬತ್ತಿ, ಹೊಸ ಸ್ನೇಹಗಳ ಎಣ್ಣೆಯನ್ನು ತುಂಬುತ್ತ, ಹೊತ್ತಿಸುತ್ತ ಹೋಗಬೇಕೆಂಬುದು ಕವಿಯ ಸ್ಪಷ್ಟ ಸಂದೇಶ.

ಬೇಂದ್ರೆಯವರ 'ಶ್ರದ್ಧಾಂಜಲಿ' ಮತ್ತು ಗಾಂಧಿಯನ್ನು ಕುರಿತಾದ ಕವಿತೆಗಳು ಅವರ ರಾಜಕೀಯ ನಿಲುವುಗಳನ್ನು ಸ್ಪಷ್ಟಪಡಿಸುತ್ತವೆ. ಸೌಹಾರ್ದತೆಯ ಪ್ರತಿಪಾದನೆ ಇಲ್ಲಿ ಉದಾರವಾಗಿ ಮಾನವೀಯ ನೆಲೆಯಿಂದ ಪ್ರತಿಪಾದನೆಗೊಂಡಿಲ್ಲ. ಕೋಮು ಹಿಂಸೆಯ ಚಾರಿತ್ರಿಕ ಗ್ರಹಿಕೆಯಿಂದ ಪ್ರತಿಪಾದನೆಗೊಂಡಿದೆ. ಬೇಂದ್ರೆಯವರ ಈ ಚಾರಿತ್ರಿಕ ಪ್ರಜ್ಞೆ ಹಾಗೂ ರಾಜಕೀಯ ನಿಲುವುಗಳನ್ನು ಅಪರೂಪಕ್ಕೆ ಅವರ ಕಾವ್ಯದಲ್ಲಿ ಹಣಿಕಿಹಾಕುವ ಗತಕಾಲದ ವೈಭವೀಕರಣ, ಮುಸ್ಲಿಮರ ಬಗ್ಗೆ ತಿರಸ್ಕಾರ, ಹಿಂದೂ ಆಕರಗಳ ಬಳಕೆಯಂಥ ಸಂಗತಿಗಳನ್ನು ದೂರ ಸರಿಸುತ್ತವೆ. ಆದರೆ ಕುವೆಂಪು ಅವರ ವಿಷಯದಲ್ಲಿ ಇದೇ ಮಾತನ್ನು ಹೇಳಲಾಗದು.

ಬೇಂದ್ರೆಯವರು ಸಾವಿನ ಮೂಲಕ ಗಾಂಧಿಯನ್ನು ಹೆಚ್ಚು ಪ್ರವೇಶಿಸುವುದರಿಂದೋ ಏನೋ ಗಾಂಧಿ ವ್ಯಕ್ತಿತ್ವ, ಚಿಂತನೆಗಳಲ್ಲಿರುವ ವೈರುಧ್ಯಗಳನ್ನು ಗ್ರಹಿಸಲು ಅವರಿಗೆ ಸಾಧ್ಯವಾಗಿಲ್ಲ. 'ಗಾಂಧಿಯುಗದಲ್ಲಿ ಬದುಕಿದವರು ತಾವು' ಎಂದು ಹೆಮ್ಮೆ ಪಟ್ಟುಕೊಳ್ಳುವ ಬೇಂದ್ರೆಯವರಿಂದ ಅದನ್ನು ನಿರೀಕ್ಷಿಸುವುದು ಸಾಧುವೂ ಅಲ್ಲ.

**ಕಾವ್ಯವೇ ರಾಜಕೀಯ ಅಸ್ತ್ರ**

ಕುವೆಂಪು ಮತ್ತು ಬೇಂದ್ರೆ ನವೋದಯದ ಇಬ್ಬರು ಮಹತ್ವದ ಕವಿಗಳು. ಕುವೆಂಪು ಅವರ ಕಾವ್ಯದ ರಾಜಕೀಯ ಚಿಂತನೆಗಳನ್ನು ಕುರಿತು ಬಹಳಷ್ಟು ಚರ್ಚೆ ನಡೆದರೆ ಬೇಂದ್ರೆಯವರ ಕಾವ್ಯದ ರಾಜಕೀಯ ನಿಲುವುಗಳ ಬಗ್ಗೆ ತುಂಬ ಕಡಿಮೆ ಚರ್ಚೆ ನಡೆದಿದೆ. ಇದಕ್ಕೆ ಕಾರಣ ಇವರ ಕಾವ್ಯದ ಅಭಿವ್ಯಕ್ತಿಯ ಸ್ವರೂಪ. ಕುವೆಂಪು ಅವರದು ಎಚ್ಚೆತ್ತ ಶುದ್ಧ ಪ್ರಜ್ಞೆ. ಅವರು ವೈಚಾರಿಕತೆಯ ಮೂಲಕ ಬದುಕನ್ನು ಪ್ರವೇಶಿಸುತ್ತಾರೆ. ಚಿಂತನೆಗಳನ್ನು ಒಂದು

ಗಾಢವಾದ ಧ್ಯಾನದಲ್ಲಿ ಸಂವೇದನೆಯನ್ನಾಗಿಸಲು ಯತ್ನಿಸುತ್ತಾರೆ. ಬೇಂದ್ರೆಯವರದು 'ನೇರವಾಗಿ' ಬದುಕಿಗೆ ಧುಮುಕುವ ಮನೋಧರ್ಮ. ಅನುಭವ ಮತ್ತು ಸಂವೇದನೆಗಳನ್ನು ಕಟ್ಟಿಕೊಡುತ್ತಲೇ ಅದಕ್ಕೊಂದು ವೈಚಾರಿಕ ಚೌಕಟ್ಟನ್ನು ಅವರು ರೂಪಿಸುತ್ತಾರೆ. ವಿಚಾರವು ಸಂವೇದನೆಯಾಗುವ ಮಾರ್ಗದಲ್ಲಿ ಸಂವೇದನೆಯಾದರೂ, ಆಗದಿದ್ದರೂ ತನ್ನ ಬೌದ್ಧಿಕ ವ್ಯವಸ್ಥೆಯನ್ನು ಸರಳವಾಗಿ ಬಿಟ್ಟುಕೊಡುತ್ತದೆ. ಸಂವೇದನೆ ವೈಚಾರಿಕ ಆಕೃತಿಯನ್ನು ಪಡೆದರೂ ಪಡೆಯದೇ ಹೋದರೂ ಅದು ತನ್ನ ಸ್ವರೂಪದಲ್ಲಿ ಒಂದು ಬಗೆಯ ನಿಗೂಢತೆಯನ್ನು ಒಳಗೊಂಡಿರುತ್ತದೆ. ಈ ಎರಡೂ ವಿಧಾನಗಳು ಇಬ್ಬರಲ್ಲಿ ಕಂಡುಬರುತ್ತವೆಯಾದರೂ ಬಹುಪಾಲು ಅಭಿವ್ಯಕ್ತಿಯನ್ನಾಧರಿಸಿ ಮೇಲಿನಂತೆ ವರ್ಗೀಕರಿಸಲಾಗಿದೆ. ಈ ಹಿನ್ನೆಲೆಯಿಂದ ಬೇಂದ್ರೆಯವರ ಕಾವ್ಯದ ರಾಜಕೀಯ ನಿಲುವುಗಳು ಸೂಕ್ಷ್ಮವೂ ನಿಗೂಢವೂ ಅಸ್ಪಷ್ಟವೂ ಆಗಿರುವ ಸಾಧ್ಯತೆ ಇದೆ. ಹೀಗಾಗಿ ಅವರ ಕೋಮುವಾದ ವಿರೋಧಿ ಚಿಂತನೆಗಳನ್ನು ವಾಚ್ಯವಾಗಿ ಗ್ರಹಿಸಲು ಸಾಧ್ಯವಾಗುವುದಿಲ್ಲ. 'ಸಂವೇದನೆ' 'ವಿಚಾರ'ವಾಗುವ ಹಾದಿಯಲ್ಲಿ ಭಾಷೆಯು ಧ್ವನ್ಯಾರ್ಥದಿಂದ ವಾಚ್ಯಾರ್ಥವನ್ನೂ 'ವಿಚಾರ' 'ಸಂವೇದನೆ' ಆಗುವ ಅಭಿವ್ಯಕ್ತಿಗಳಲ್ಲಿ ವಾಚ್ಯಾರ್ಥ ಧ್ವನ್ಯಾರ್ಥವನ್ನೂ ಪಡೆಯುತ್ತದೆ, ಪ್ರೇರಕವಾಗುತ್ತದೆ. 'ಹಿಂಸೆ ಕೊನೆಗ ಹಿಂಸೆಯನ್ನು ಗುಂಡು ಹಾಕಿ ಕೊಂದಿತೋ?' – ಗಾಂಧಿ ಕೊಲೆಯ ಸಂದರ್ಭದಲ್ಲಿ ಗಾಂಧಿ ಮತ್ತು ಗೋಡ್ಸೆ ಎಂಬ ಪದಗಳನ್ನು ಬಳಸಿದ್ದರೆ ಅದು ಅಹಿಂಸೆ ಮತ್ತು ಹಿಂಸೆ ಎಂಬ ಧ್ವನ್ಯಾರ್ಥವನ್ನು ಪಡೆಯುತ್ತಿತ್ತು. ಆದರೆ ಹಿಂಸೆ-ಅಹಿಂಸೆಯೆಂಬ ಪದಗಳ ಬಳಕೆಯಿಂದ ಗೋಡ್ಸೆ ಮತ್ತು ಗಾಂಧಿ ಎಂಬ ವಾಚ್ಯಾರ್ಥ ಲಭ್ಯವಾಗುತ್ತದೆ. ವಿಚಾರ ಪ್ರತಿಪಾದನೆಗೆ ಕಾವ್ಯ ಮಾಧ್ಯಮವಾಗುವ ಮಾದರಿ ಇದಲ್ಲ. ಕಾವ್ಯವೇ ರಾಜಕೀಯ ಅಸ್ತ್ರವಾಗುವ ದಾರಿ.

**ಚಿಹ್ನೆಗಳ ಸಮರ್ಥ ಬಳಕೆ**

ಕಾವ್ಯದಲ್ಲಿ ಅಲ್ಪವಿರಾಮ, ಪೂರ್ಣವಿರಾಮ, ಪ್ರಶ್ನಾರ್ಥಕ ಉದ್ಗಾರಗಳೆಲ್ಲವೂ ಕವಿತೆಯ ಶಿಲ್ಪಕ್ಕೆ, ಅರ್ಥಸ್ಫುರಣೆಗೆ, ಮಹತ್ವದ ಸಲಕರಣೆಗಳು. ಬೇಂದ್ರೆಯವರು ಈ ಕವಿತೆಯಲ್ಲಿ ಪ್ರಶ್ನಾರ್ಥ ಚಿಹ್ನೆಯನ್ನು ಬಳಸುವ ಮೂಲಕ ಕವಿತೆಗೆ ಹೊಸ ಅರ್ಥವನ್ನು ನೀಡುತ್ತಾರೆ.

*'ಹಿಂಸೆ ಕೊನೆಗಹಿಂಸೆಯನ್ನು ಗುಂಡು ಹಾಕಿ ಕೊಂದಿತೋ ?'*
*'ತನ್ನ ಕೊಲೆಯ ಕೊನೆಗಾಣಿಸಿ ಇವಗೆ ಶರಣು ಬಂದಿತೋ ?'*
*'ಅಯ್ಯೋ ಇವನು ಅಮರ ನಾನೆ ತಾನೆ ಸತ್ತೆ ಎಂದಿತೋ ?'*

ಇಲ್ಲಿ ಪ್ರಶ್ನಾರ್ಥಕ ಚಿಹ್ನೆ ನಿಷೇಧಾತ್ಮಕವಾಗಿಯೂ ಬಳಕೆಯಾಗಿದೆ. ಹಿಂಸೆಯು ಅಹಿಂಸೆಯನ್ನು ಗುಂಡು ಹಾಕಿ ಕೊಲ್ಲಲು ಸಾಧ್ಯವಿಲ್ಲ, ಕೋಮುವಾದಕ್ಕೆ ಕೊಲೆಯನ್ನು ಕೊನೆಗಾಣಿಸಿ ಸಾಮರಸ್ಯ ಸಿದ್ಧಾಂತಕ್ಕೆ ಬರಲು ಸಾಧ್ಯವಿಲ್ಲ. ಗಾಂಧಿ ಅಮರನಾದ, ತಾನೇ ಸತ್ತೆ ಎಂದು ಭಾವಿಸಲು ಸಾಧ್ಯವಿಲ್ಲ– ಎಂಬ ಹೊಸ ಮತ್ತು ನಿಜವಾದ ಅರ್ಥವೊಂದನ್ನು ಕವಿತೆ ಬಿಟ್ಟುಕೊಡುತ್ತದೆ. ಸೌಹಾರ್ದತೆಯ ಪರ ಇರುವ ಜನ ಗಾಂಧಿಯನ್ನು ಕೊಂದವರು, ಆ ಕೊಲೆಗೆ ಹೇಸಿ ಮನುಷ್ಯರಾದವರು ಎಂದು ಭಾವಿಸಬಹುದೇ ಹೊರತು ಕೋಮುವಾದಿಗಳು ಹಾಗೆ ಭಾವಿಸಲು ಸಾಧ್ಯವಿಲ್ಲ. ಈ ಹಿಂದೆ ಎರಡು ಬಾರಿ ಗಾಂಧಿ ಕೊಲೆಯ ಯತ್ನದಲ್ಲಿ ಭಾಗವಹಿಸಿದ್ದ ಗೋಡ್ಸೆ ಅಥವಾ ಆ ಚಿಂತನೆಯ ಜನ ಗಾಂಧಿಯನ್ನು ಕೊಲೆ ಮಾಡಿದ ನಂತರವೂ 'ತಪ್ಪೊಪ್ಪಿಗೆಯನ್ನು ನೀಡಲಿಲ್ಲ.' ''ಪಾಕಿಸ್ತಾನವನ್ನು ಗೆದ್ದು ತುಂಡಾದ ಮಾತೃಭೂಮಿಯನ್ನು ಸಿಂಧೂ ನದಿಯ ತೀರದಿಂದ ಬ್ರಹ್ಮಪುತ್ರಾ ನದಿಯ ಆಚೆಯ ಅರಣ್ಯದವರೆಗೆ ಹಿಂದುಗಳ ಆಳ್ವಿಕೆಯಲ್ಲಿ ತಂದು ಒಂದುಗೂಡಿಸಿ ಅಖಂಡ ಭಾರತದಲ್ಲಿ ಹರಿಯುವ ನದಿಯಲ್ಲಿ ಈ ಪವಿತ್ರ ಚಿತಾಭಸ್ಮವನ್ನು ವಿಸರ್ಜನೆ ಮಾಡಬೇಕು'' ಎಂಬುದು ನಾಥೂರಾಮ್ ಗೋಡ್ಸೆಯ ಕೊನೆಯ ಇಚ್ಛೆಯಾಗಿತ್ತಂತೆ. ಭಾರತದ ಕೆಲವು ನಗರಗಳಲ್ಲಿ ಗೋಡ್ಸೆ ಚಿಂತನೆಯ ಜನ ಗಾಂಧಿ ಕೊಲೆಯಾದಾಗ ಸಿಹಿ ಹಂಚಿ ಸಂಭ್ರಮಿಸಿದ್ದರಂತೆ.

''ಅಬ್ಬ ! ಎಂದರು ಯಾರೋ, ಯಾರೋ ಅಬ್ಬರಿಸಿದರು.
ಮೋರೆದಿರುವಿದರು ಕಿವಿಚಿದರು ನಕ್ಕರು ಯಾರೋ''

– ಎಂದು ಬೇಂದ್ರೆ ಕೂಡ ಅದನ್ನು ಸೂಕ್ಷ್ಮವಾಗಿ ವ್ಯಕ್ತಪಡಿಸಿದ್ದಾರೆ. 'ಕೋಮುವಾದ ಒಂದು ರಾಜಕೀಯ ಸಿದ್ಧಾಂತ. ಯಾವ ಬಗೆಯ ಹಿಂಸೆಗೂ ಹೇಸುವುದಿಲ್ಲ, ಜನಾಭಿಪ್ರಾಯಕ್ಕೆ ಮನ್ನಣೆ ನೀಡುವುದಿಲ್ಲ' ಎಂಬ ಕವಿತೆಯ ಇನ್ನೊಂದು ಮಗ್ಗುಲಿನ ಅರ್ಥವನ್ನು ಒಂದು ಪ್ರಶ್ನಾರ್ಥಕ ಚಿಹ್ನೆ ಬಿಟ್ಟುಕೊಡುತ್ತದೆ.

**ಜನಾಂಗದ ಒಳಗಿನ ದನಿ**

ಬೇಂದ್ರೆಯವರನ್ನು ಕುರಿತು ಡಾ॥ ರಾಜೇಂದ್ರ ಚೆನ್ನಿಯವರು ''ಅವರು ತಮ್ಮನ್ನು ಗುರುತಿಸಿಕೊಳ್ಳುವದು ಭಕ್ತ ಕವಿಗಳ ಜನಪದ ಕವಿಗಳ ಅನುಭಾವ ಕವಿಗಳ ಸಂಪ್ರದಾಯದೊಂದಿಗೆ. ಮೌಖಿಕ ಸಂಪ್ರದಾಯದ ಕವಿಗಳು ತಮ್ಮನ್ನು ಜನಾಂಗದ ಒಳಗಿನವರನ್ನಾಗಿ ಜನಾಂಗದ ಸ್ಮೃತಿಗಳಿಗೆ ಸೃಜನಶೀಲ ಮಿತ್‌ಗಳಿಗೆ ವಾರಸುದಾರರನ್ನಾಗಿ ಗುರುತಿಸಿಕೊಂಡರು. ಆದ್ದರಿಂದ ಜನಾಂಗ ಭಾವಿಸುವ ಮತ್ತು ನೋಡುವ ಬಗೆಗಳಿಗೆ ಅವರು ಎಂದೂ ಹೊರತಾಗಿರಲಿಲ್ಲ'' ಎಂದು ಅಭಿಪ್ರಾಯಪಡುತ್ತಾರೆ. ಬೇಂದ್ರೆಯವರ ಕಾವ್ಯದ ಅರ್ಥಸಾಧ್ಯತೆಗಳು ಹಾಗೂ ಲಯಗಾರಿಕೆಗಳಿಗೆ ಕೂಡ ಕಾರಣವಾದದ್ದು ಭಕ್ತಿ, ಜನಪದ ಹಾಗೂ ಅನುಭಾವ ಪರಂಪರೆಯೊಂದಿಗಿನ ಅವರ ಅನುಸಂಧಾನ. 'ಶ್ರದ್ಧಾಂಜಲಿ' ಕವಿತೆಯಲ್ಲಿಯೂ ಆ ಸಂಗತಿಗಳನ್ನು ಗುರುತಿಸಬಹುದು. ಭಕ್ತಿ, ಅನುಭಾವ ಹಾಗೂ ಜನಪದ ಪರಂಪರೆಗಳು ಮೂಲತಃ ಸೌಹಾರ್ದತಾ ಪರಂಪರೆಗಳು ಹಾಗೂ ಪ್ರತಿಭಟನಾ ಪರಂಪರೆಗಳು. ಊಳಿಗ ಮಾನ್ಯ ವ್ಯವಸ್ಥೆಯಲ್ಲಿ ಆಳುವ ವರ್ಗ, ಶಿಷ್ಟ-ಧರ್ಮಗಳ ಅನುಸಂಧಾನದಿಂದ ಹುಟ್ಟಿದ ಆರ್ಥಿಕ ಸಾಮಾಜಿಕ ಅಸಮಾನತೆಗೆ ಪ್ರತಿಭಟನೆಯಾಗಿ ಎಲ್ಲ ಧರ್ಮಗಳ ಕೆಳಜಾತಿ ಕೆಳವರ್ಗಗಳು ಮಧ್ಯಯುಗದಲ್ಲಿ ಭಕ್ತಿ ಮತ್ತು ಅನುಭಾವ ಪರಂಪರೆಗಳನ್ನು ಸೃಷ್ಟಿಸಿದವು. ಜನಾಂಗದ ಒಳದನಿಗೆ ಬೇಂದ್ರೆಯವರು ಸ್ಪಂದಿಸಿದರು. ಇದು 'ಶ್ರದ್ಧಾಂಜಲಿ' ಕವಿತೆಯು ಕೋಮುವಾದದ ವಿರುದ್ಧದ ಪ್ರತಿಭಟನೆ ಹಾಗೂ ಸೌಹಾರ್ದತೆಯ ಪರ ಒಲವನ್ನು ಅತ್ಯಂತ ಸಾಂಕೇತಿಕವಾಗಿ ಅಭಿವ್ಯಕ್ತಿಸಲು ಕಾರಣವಾಗಿದೆ. ಬೇಂದ್ರೆಯವರ ಈ ಕವಿತೆಯು,

೧) ಹಿಂಸೆಯಿಂದ ಅಹಿಂಸೆಯ ಕೊಲೆ ನಡೆಯಿತು
೨) ಹಿಂಸೆಯಿಂದ ಅಹಿಂಸೆಯ ಕೊಲೆ ಸಾಧ್ಯವಿಲ್ಲ
೩) ಹಿಂಸೆ ತನ್ನ ಹಿಂಸೆಗೆ ತಾನೇ ಹೇಸಿತು
೪) ಹಿಂಸೆಗೆ ಯಾವ ಹಿಂಸೆಯಿಂದಲೂ ನಾಚಿಕೆ ಅವಮಾನ ಸಾಧ್ಯವಿಲ್ಲ
೫) ಹಿಂಸೆ ಒಂದು ತಾತ್ವಿಕತೆಯಾಗಿದ್ದು, ಅದು ಎಂದೆಂದಿಗೂ ಮುಂದುವರಿಯುತ್ತದೆ,

– ಇವೇ ಮುಂತಾದ ಹಲವು ಅರ್ಥಸಾಧ್ಯತೆಗಳನ್ನು ಒಳಗೊಂಡಿದೆ. ಇದಕ್ಕೆ ಕಾರಣ ಬೇಂದ್ರೆಯವರು ಜನಾಂಗದ ಒಳಗಿನವರಾಗಿ ಗಾಂಧಿ ಕಗ್ಗೊಲೆಗೆ ಪ್ರತಿಕ್ರಿಯಿಸುವ ಎಲ್ಲ ಮಾದರಿಗಳನ್ನೂ ತೀವ್ರವಾಗಿ ಸ್ವೀಕರಿಸಿರುವದು. ಇಲ್ಲವಾದರೆ ಕವಿಯ ಏಕೈಕ ಅಭಿಪ್ರಾಯವೇ ವ್ಯಕ್ತವಾಗುವ ಸಾಧ್ಯತೆ ಇತ್ತು.

ಹಾಗೆಯೇ ಬೇಂದ್ರೆಯವರು ಕನ್ನಡದ ಜನಪದ ಕಾವ್ಯ ಹಾಗೂ ಅನುಭಾವ ಮಟ್ಟುಗಳೊಂದಿಗೆ ನಿಕಟ ಸಂಬಂಧವನ್ನು ಹೊಂದಿದವರು. ಶಿಷ್ಟ ಛಂದಸ್ಸನ್ನು ಕುರಿತಾಗಿಯೂ ಅವರಿಗೆ ಪ್ರೀತಿ ಇದೆ. ಗಾಂಧಿ ಕೊಲೆಯನ್ನು ಕುರಿತಾಗಿ ಸಮುದಾಯದಲ್ಲಿ ಹಾಗೂ ತನ್ನಲ್ಲಿ ಮೂಡಿದ ಅಸಂಖ್ಯ ಪ್ರತಿಕ್ರಿಯೆಗಳನ್ನು ಹಲವಾರು ಲಯಗಳಲ್ಲಿ ಹೇಳಬಲ್ಲರು. ಸಿಟ್ಟು, ದುಃಖ, ವಿಷಾದ, ನೋವು, ಸಂಕಟ, ಹೀಗೆ ಭಿನ್ನಭಿನ್ನ ಭಾವನೆಗಳಿಗೆ ಅಭಿವ್ಯಕ್ತಿ ನೀಡಲು ಲಯಗಳ ಕಣಜವನ್ನೇ ಸೃಷ್ಟಿಸಿಕೊಂಡಿದ್ದರು. ಗಾಂಧಿ ಕೊಲೆಯನ್ನು ಕುರಿತಾದ ಹದಿನೆಂಟು ಪದ್ಯಗಳು ಹದಿನೆಂಟು ರೀತಿಯಲ್ಲಿವೆ. 'ಶ್ರದ್ಧಾಂಜಲಿ' ಕವಿತೆಯ ಮೂಲ ಸಂವೇದನೆ ದಟ್ಟವಾದ ವಿಷಾದ. ಬೇಂದ್ರೆಯವರು ಮೂರು ಮಾತ್ರ ಪ್ರಧಾನವಾದ ಲಯವನ್ನು ಬಳಸುತ್ತಾರೆ. ಸಾಂಪ್ರದಾಯಿಕ ಛಂದಸ್ಸಿನಲ್ಲಿ 'ಉತ್ಸಾಹ'ವೆಂದು ಕರೆಯಲ್ಪಡುವ ಹಾಗೂ ಕಾವ್ಯಪರಂಪರೆಯಲ್ಲಿ 'ಉತ್ಸಾಹಕ್ಕೆ' ಬಳಕೆಯಾದ ಲಯವನ್ನು ವಿಷಾದಮುಖಿಯಾಗಿ ಪರಿವರ್ತಿಸುತ್ತಾರೆ. ಲಯ ಮತ್ತು ಭಾವಸಂಬಂಧಿ ಸಾಂಪ್ರದಾಯಿಕ ತಿಳುವಳಿಕೆಯನ್ನು ಮುರಿದುಕಟ್ಟುವ ಸೃಜನಶೀಲತೆಯನ್ನು ಗಮನಿಸಬಹುದಾಗಿದೆ.

**ಬೆಳಕು ಮತ್ತು ಕತ್ತಲೆಯ ರೂಪಕ**

ಸಾಮರಸ್ಯವಾದ ಹಾಗೂ ಕೋಮುವಾದಗಳನ್ನು ಬೇಂದ್ರೆಯವರು ಬೆಳಕು ಮತ್ತು ಕತ್ತಲೆಯ ರೂಪಕದಲ್ಲಿ ಹಿಡಿದಿಡುತ್ತಾರೆ. ಕವಿತೆಯೊಂದರಲ್ಲಿ ರೂಪತಾಳಿದ ರೂಪಕಗಳನ್ನು ಅಲ್ಲಿಗೇ ಬಿಡದೆ ಬೆಳೆಸುತ್ತ ಹೋಗುವುದು ಬೇಂದ್ರೆಯವರ ಅಭಿವ್ಯಕ್ತಿಯ ಮುಖ್ಯ ಲಕ್ಷಣವಾಗಿದೆ.

*ಬತ್ತಿ ಸುಟ್ಟು ಹೋದರೇನು ಬೆಳಕು ನಂದಿತೆಂಬರೇ ?*
*ಹಾಕಿ ಬತ್ತಿ ದೀಪವೆತ್ತಿ ಇರುವ ಜ್ಯೋತಿ ಕಾಂಬರೇ ?*
*ಎಣ್ಣೆ ತೀರಿತೆನ್ನಬೇಡಿ ಬೇರೆ ನೇಹ ತುಂಬರೆ*
*ಬೇರೆ ನೇಹ ತುಂಬರೆ ?*

ಗಾಂಧೀಜಿಯವರ ಬದುಕು ಮತ್ತು ಸಾವುಗಳಿಂದ ಹುಟ್ಟಿದ ಸಾಮರಸ್ಯದ ಬೆಳಕಿನ ತತ್ವ ತನ್ನಷ್ಟಕ್ಕೆ ತಾನೇ ಜೀವಂತ ಉಳಿಯಲಾರದು. ಅದನ್ನು ಉಳಿಸುವಲ್ಲಿ ಎಣ್ಣೆ ಹಾಕಿ ಬತ್ತಿ ಹೊತ್ತಿಸುವವರ ಅಗತ್ಯವನ್ನು ಗುರುತಿಸುತ್ತಾರೆ. ಹೀಗಾಗಿ ಸೌಹಾರ್ದತಾ ಪ್ರಣತಿಯ ರೂಪಕ ಮತ್ತಷ್ಟು ವಿಸ್ತಾರಗೊಳ್ಳುತ್ತದೆ. 'ಬೇರೆ ನೇಹ ತುಂಬರೇ ?' – ಎಂಬಲ್ಲಿ ಪ್ರಶ್ನಾರ್ಥಕ ಚಿಹ್ನೆಯು ಮುಂದುವರಿಸಿಕೊಂಡು ಹೋಗದಿರುವ ಭಾರತದ ವಾಸ್ತವದ ಕಡೆಗೆ ಗಮನ ಸೆಳೆಯುತ್ತದೆ. ಇದೇ ಬೇಂದ್ರೆಯವರ ಅಭಿವ್ಯಕ್ತಿಯ ನಿಜವಾದ ಶಕ್ತಿ.

**ಎಂ. ಡಿ. ಒಕ್ಕುಂದ**
'ನೆಮ್ಮದಿ', ನಂ. ೧೨೪, ಸಿ. ಐ. ಟಿ. ಬಿ. ಕಾಲೋನಿ, ಶ್ರೀನಗರ, ಧಾರವಾಡ - ೫೮೦ ೦೦೩




## ಕೆ. ಎಲ್. ಗೋಪಾಲಕೃಷ್ಣ ರಾವ್

**ಜಾನ್** ಫಿಟ್ಸ್ ಜೆರಾಲ್ಡ್ ''ಜಾಕ್'' ಕೆನಡಿ (ಮೇ ೨೯, ೧೯೧೭ - ನವೆಂಬರ್ ೨೨, ೧೯೬೩) ಅಮೆರಿಕದ ೩೫ನೆಯ ರಾಷ್ಟ್ರಾಧ್ಯಕ್ಷರಾಗಿದ್ದರು. ೧೯೬೧ರಲ್ಲಿ ಆಯ್ಕೆಯಾದ ಇವರು ೧೯೬೩ರಲ್ಲಿ ಹತ್ಯೆಗೆ ಒಳಗಾಗುವವರೆಗೂ ರಾಷ್ಟ್ರಾಧ್ಯಕ್ಷರಾಗಿ ಸೇವೆ ಸಲ್ಲಿಸಿದರು.

ಅಸುನೀಗಿದ ನಂತರವಷ್ಟೆ ಅನೇಕ ವರ್ಷಗಳಿಂದ ಅಪರೂಪದ ನಿರ್ನಾಳ ಗ್ರಂಥಿ ವ್ಯಾಧಿ - ಅಡಿಸನ್ ವ್ಯಾಧಿ- ಯಿಂದ ಅವರು ನರಳುತ್ತಿದ್ದರೆಂಬ ಅಂಶವನ್ನು ಹೊರಗೆಡವಲಾಯಿತು. ಅವರು ೩೦ನೆಯ ವಯಸ್ಸಿನವರಾಗಿದ್ದಾಗಲೇ, ೧೯೪೭ರ ಸೆಪ್ಟೆಂಬರ್ ತಿಂಗಳಿನಲ್ಲಿ – ಲಂಡನ್ನಿನ ಚಿಕಿತ್ಸಾಲಯವೊಂದರಲ್ಲಿ ಸರ್ ಡೇನಿಯಲ್ ಡೇವಿಸ್ ಎಂಬ ಹೆಸರಿನ ವೈದ್ಯರು ಅವರಿಗೆ ಅಡಿಸನ್ ವ್ಯಾಧಿಯ ಲಕ್ಷಣಗಳಿದ್ದುದನ್ನು ಪತ್ತೆ ಹಚ್ಚಿದ್ದರು. ಆಗ ಜಾಕ್ ಕೆನಡಿ ಮೊದಲ ಬಾರಿಗೆ ಶಾಸನಸಭಾ ಸದಸ್ಯರಾಗಿ ಆಯ್ಕೆಯಾಗಿದ್ದರು. ಅವರು ಈ ವ್ಯಾಧಿಯಿಂದಲೂ ಮತ್ತಿತರ ವೈದ್ಯಕೀಯ ಸಮಸ್ಯೆಗಳಿಂದಲೂ ನರಳುತ್ತಿದ್ದರೆಂಬ ಅಂಶವನ್ನು ಅವರ ಜೀವನಾದ್ಯಂತ ಹಾಗೂ ಅವರು ರಾಷ್ಟ್ರಾಧ್ಯಕ್ಷರಾಗಿದ್ದ ಇಡೀ ಕಾಲ ಸಾರ್ವಜನಿಕರಿಗೂ ಪತ್ರಿಕಾ ವಲಯಕ್ಕೂ ತಿಳಿಯದಂತೆ ಗೌಪ್ಯವಾಗಿಯೇ ಇರಿಸಲಾಗಿದ್ದಿತು.

ಅವರು ಎಳೆಯರಾಗಿದ್ದಾಗಲೇ ತೀರ ಅನಾರೋಗ್ಯವಂತರಾಗಿ ಕಾಣಬರುತ್ತಿದ್ದರು. ಮೂರನೆಯ ವಯಸ್ಸಿನವರಾಗಿದ್ದಾಗಲೇ ಸ್ಕಾರ್ಲೆಟ್ ಜ್ವರ (ಮೈಮೇಲೆಲ್ಲ ಕೆಂಪು ಗುಳ್ಳೆಗಳೇಳುವ, ಬ್ಯಾಕ್ಟೀರಿಯಾಗಳಿಂದ ಹುಟ್ಟುವ ತೀವ್ರವಾದ ಸೋಂಕು ಜ್ವರ)ಕ್ಕೆ ತುತ್ತಾಗಿ ಇನ್ನೇನು ಅಸುನೀಗುವಂತಾಗಿಬಿಟ್ಟಿದ್ದರು. ''ಏನು ದುರದೃಷ್ಟವೋ, ಇವನು ಜೀವನಪರ್ಯಂತ ಅನಾರೋಗ್ಯ ದೌರ್ಭಾಗ್ಯದ ವಿರುದ್ಧ ಹೋರಾಡುವಂತಾಗಿ ಬಿಟ್ಟಿದ್ದಾನೆ'' ಎಂದು ಅವರ ತಾಯಿ ಸತತವಾಗಿ ಮರುಗುತ್ತಿದ್ದರು. ''ಜಾಕ್‌ಗೆ ಸೊಳ್ಳೆ ಏನಾದರೂ ಕಚ್ಚಿದರೆ ಆ ಸೊಳ್ಳೆಯೇ ಖಂಡಿತ ಸತ್ತುಹೋಗುತ್ತದೆ'' ಎಂದು ಅವರ ಕುಟುಂಬದವರೆಲ್ಲ ಹಾಸ್ಯ ಮಾಡುತ್ತಿದ್ದುದುಂಟು.

೧೯೪೭ರ ಮಾಗಿ ಕಾಲದಲ್ಲಿ ಲಂಡನ್ನಿಗೆ ಭೇಟಿ ಕೊಟ್ಟಿದ್ದಾಗ ಶಾಸನಸಭಾ ಸದಸ್ಯರಾಗಿದ್ದ ಕೆನಡಿ ತುಂಬ ಅನಾರೋಗ್ಯಪೀಡಿತರಾದರು. ನಿಶ್ಶಕ್ತಿ, ವಾಂತಿ, ಪಿತ್ಥೋದ್ರೇಕ, ಜೊತೆಗೆ ಅತಿ ಕಮ್ಮಿ ರಕ್ತದೊತ್ತಡ, ಇವುಗಳಿಂದ ಅವರು ಸಾವಿಗೆ ಸಮೀಪ ಸಾಗಿಬಿಟ್ಟಿದ್ದರು. ರೋಮನ್ ಕ್ಯಾಥೊಲಿಕ್ ಚರ್ಚ್‌ನಲ್ಲಿ ಧಾರ್ಮಿಕ ಕರ್ಮಾಚರಣೆಗಳೂ ನಡೆದುಹೋದವು. ಅವರ ದೇಹಸ್ಥಿತಿಯನ್ನು ತನಿಖೆ ಮಾಡಿದ ವೈದ್ಯರು ಅವರಿಗೆ ಅಡಿಸನ್ ವ್ಯಾಧಿ ಆಗಿದೆ ಎಂದು ಕಂಡುಹಿಡಿದು, ''ಇವರು ಹೆಚ್ಚೆಂದರೆ ಇನ್ನೊಂದು ವರ್ಷ ಬದುಕಿರಬಹುದಷ್ಟೆ'' ಎಂದು ಕೆನಡಿಯವರ ಮಿತ್ರರಿಗೆ ಹೇಳಿದರು. ಕೆನಡಿಯವರ ಮೈ ಚರ್ಮ ಆಶ್ಚರ್ಯಗೊಳಿಸುವಷ್ಟು ಕಂದುಬಣ್ಣಕ್ಕೆ ತಿರುಗಿದ್ದುದನ್ನು ಅವರನ್ನು ಭೇಟಿಯಾದವರೆಲ್ಲ ಕಾಣಬಹುದಿದ್ದಿತು. ೧೯೬೦ರಲ್ಲಿ ಜರುಗಿದ ಚುನಾವಣಾ ಪ್ರಚಾರದ ಸಮಯದಲ್ಲಿ ಅವರನ್ನು ಕಂಡವರೊಬ್ಬರು, ''ಅವರ ಮುಖ ವಿಪರೀತ ಕಂದುಬಣ್ಣಕ್ಕೆ ತಿರುಗಿದೆ, ಸುಟ್ಟು ಬೇಯಿಸಿದ ಮಾಂಸದ ತುಂಡಿನಂತೆ ಒರಟಾಗಿ ಕಾಣುತ್ತಿದೆ'' ಎಂದು ವರ್ಣಿಸಿದ್ದರು. ಅವರ ಮೈಬಣ್ಣ ವರ್ಷವಿಡೀ ಕಂದಾಗಿರುವುದನ್ನು ಕಂಡ ವರದಿಗಾರರೊಬ್ಬರ ಪ್ರಶ್ನೆಗೆ ಉತ್ತರಿಸುತ್ತ ಅಧ್ಯಕ್ಷ ಕೆನಡಿ, ''ಹಾಗೇನೂ ಇಲ್ಲವಲ್ಲ'' ಎಂದು ಬಿಸಿಲಿಗೆ ಒಡ್ಡಿರದ ಶರೀರ ಭಾಗವನ್ನು ತೆರೆದು ತೋರಿಸಿದರೆಂದು ಅಧ್ಯಕ್ಷರ ವಿಶೇಷ ಸಮಾಲೋಚಕ ಥಿಯೋಡರ್ ಸೊರೆನ್ಸನ್ ತಿಳಿಸಿದ್ದಾರೆ.

''ಶಸ್ತ್ರಕ್ರಿಯೆಯ ದಾಖಲೆ ಪತ್ರಗಳು'' ಎಂಬ ನಿಯತಕಾಲಿಕದ ೧೯೫೫ರ ಸಂಚಿಕೆಯೊಂದರಲ್ಲಿ ಒಮ್ಮೆ ಒಂದು ಲೇಖನ ಪ್ರಕಟವಾಯಿತು. ಅಡಿಸನ್ ವ್ಯಾಧಿಯಿಂದ ನರಳುತ್ತಿದ್ದ ೩೭ ವರ್ಷದ ಯುವಕನೊಬ್ಬನ ವಿಷಯ ಅದರಲ್ಲಿ ನಮೂದಾಗಿದ್ದಿತು. ಆತ ೧೯೫೪ರ ಅಕ್ಟೋಬರ್ ೨೧ರಂದು ವಿಶೇಷ ಶಸ್ತ್ರಕ್ರಿಯೆಗೆ ಮೀಸಲಾದ ನ್ಯೂಯಾರ್ಕ್ ಆಸ್ಪತ್ರೆಯಲ್ಲಿ ಬೆನ್ನುಹುರಿ ಶಸ್ತ್ರಕ್ರಿಯೆಗೆ ಒಳಗಾಗಿದ್ದ. ಆ ರೋಗಿ ಮತ್ತಾರೂ ಅಲ್ಲ, ಜಾನ್ ಎಫ್ ಕೆನಡಿಯೇ ಎಂದು ಎಲ್ಲರ ಅನಿಸಿಕೆಯಾಗಿತ್ತು. ಏಕೆಂದರೆ ೧೯೫೪ರಲ್ಲಿ ಕೆನಡಿಯವರಿಗೂ ೩೭ ವರ್ಷ ವಯಸ್ಸಾಗಿತ್ತು, ಅವರೂ ಅದೇ ನ್ಯೂಯಾರ್ಕ್ ಆಸ್ಪತ್ರೆಯಲ್ಲಿ ಅದೇ ದಿನ ಅಡಿಸನ್ ವ್ಯಾಧಿಗಾಗಿ ಶಸ್ತ್ರಕ್ರಿಯೆ ಮಾಡಿಸಿಕೊಂಡಿದ್ದರು. ಶಸ್ತ್ರಕ್ರಿಯೆಗೆ ಒಳಗಾಗಿದ್ದ ಆ ವ್ಯಕ್ತಿ ಅಡಿಸನ್ ವ್ಯಾಧಿಯ ಕಾರಣದಿಂದಾಗಿ ಅಡ್ರಿನಲ್ ಗ್ರಂಥಿ ಸ್ರವಿಸುವ ಹಾರ್ಮೋನ್‌ನ ತೀವ್ರ ಕೊರತೆಯಿಂದ ನರಳುತ್ತಿದ್ದು, ಶಸ್ತ್ರಕ್ರಿಯೆ ಆತನ ಪ್ರಾಣಕ್ಕೆ ಅಪಾಯಕಾರಿಯಾಗಿದ್ದಿತೆಂದು ವರದಿ ತಿಳಿಸಿದ್ದಿತು. ಶಸ್ತ್ರಕ್ರಿಯೆಯ ಆದ್ಯಂತ ರೋಗಿಗೆ ಅಂತರ ಅಭಿಧಮನಿ ಹೈಡ್ರಾಕಾರ್ಟಿಸೋನ್ ನೀಡಲಾಗಿತ್ತು. ಶಸ್ತ್ರಕ್ರಿಯೆಯ ನಂತರವೂ ಇದರ ಜೊತೆಗೆ ಅಂತರಸ್ನಾಯು ಡಿಸಾಕ್ಸಿ ಕಾರ್ಟಿಕೊಸ್ಟೆರಾನ್, ಉಪ್ಪು ಹಾಗೂ ಕಾರ್ಟಿಸಾನ್ ನೀಡಲಾಗಿದ್ದಿತು.

ಸಾಂಪ್ರದಾಯಿಕವಾಗಿ, ಅಡಿಸನ್ ವ್ಯಾಧಿಯು ಕ್ಷಯರೋಗದಿಂದ ಬರುತ್ತದೆ. ಕೆನಡಿ ಎಂದೂ ಯಾವುದೇ ರೀತಿಯ ಕ್ಷಯರೋಗದಿಂದ ನರಳಿಲ್ಲದುದರ ಕಾರಣ ಅವರಿಗೆ ಸಾಂಪ್ರದಾಯಿಕವಾಗಿ ಅಡಿಸನ್ ವ್ಯಾಧಿ ಇರಲಿಲ್ಲವೆಂದೇ ಅವರೂ ಅವರ ಅಧಿಕೃತ ವಕ್ತಾರರೂ ವಾದಿಸುತ್ತಿದ್ದರು. ಅವರೊಮ್ಮೆ ಪ್ರಯಾಣ ಮಾಡುತ್ತಿದ್ದ ದೋಣಿಯು ನೀರಿನಲ್ಲಿ ಮುಳುಗಿ ಇವರು ಬಹುಕಾಲ ನೀರಿನೊಳಗೇ ಕಳೆಯಬೇಕಾಗಿ ಬಂದುದರಿಂದ, ಮತ್ತೂ ಅನಂತರ ಅವರು ಮಲೇರಿಯಾ ಕಾಯಿಲೆಗೆ ಈಡಾದುದರಿಂದ, ಶರೀರಕ್ಕೆ ತುಂಬ ಆಯಾಸವಾಗಿ ಈ ಅಡ್ರಿನಲ್ ಕೊರತೆ ಉಂಟಾಗಿದೆ, ಎಂದೇ ಅವರು ವಾದಿಸುತ್ತಿದ್ದರು. ಆದಾಗ್ಯೂ ಕೆನಡಿ ಅಡಿಸನ್ ವ್ಯಾಧಿಗ್ರಸ್ತರು ಉಳಿವಿಗಾಗಿ ಅವಲಂಬಿಸುತ್ತಿದ್ದಂಥ ಕಾರ್ಟಿಸಾನ್ ಔಷಧೋಪಚಾರದ ಮೇಲೆಯೇ ಸಂಪೂರ್ಣವಾಗಿ ಅವಲಂಬಿತರಾಗಿದ್ದರು. ಆರಂಭದಲ್ಲಿ ಅವರು ಬಾಯಿ ಮೂಲಕ ೨೫ ಮಿಲಿಗ್ರಾಮ್ ಕಾರ್ಟಿಸಾನ್ ತೆಗೆದುಕೊಳ್ಳುತ್ತಿದ್ದರು. ಅನಂತರ ಇದನ್ನು ಚುಚ್ಚುಮದ್ದಿನ ಮೂಲಕ ತೆಗೆದುಕೊಳ್ಳತೊಡಗಿದರು. ಇದರ ಜೊತೆಗೆ ಅವರು DOCA ಮಾತ್ರೆಗಳನ್ನು ತಮ್ಮ ತೊಡೆಗಳೊಳಕ್ಕೆ ಸೇರಿಸಿಕೊಳ್ಳುತ್ತಿದ್ದರು. ಇವನ್ನು ವರ್ಷದಲ್ಲಿ ಹಲವಾರು ಬಾರಿ ಹೊಸಹೊಸದಾಗಿ ಸೇರಿಸಿಕೊಳ್ಳಬೇಕಿದ್ದಿತು. ಹಾಗಾಗಿ ಕೆನಡಿ ಕುಟುಂಬದವರು DOCA ಮಾತ್ರೆಗಳನ್ನೂ ಕಾರ್ಟಿಸಾನ್‌ಅನ್ನೂ ಸುರಕ್ಷಿತ ದಾಸ್ತಾನು ಪೆಟ್ಟಿಗೆಗಳಲ್ಲಿ ಸಾಕಷ್ಟು ಪ್ರಮಾಣಗಳಲ್ಲಿ ಸದಾಕಾಲವೂ ಇರಿಸಿರುತ್ತಿದ್ದರು. ಇವನ್ನು ದೇಶದಾದ್ಯಂತ ಅನೇಕ ಸ್ಥಳಗಳಲ್ಲಿ ಇರಿಸಿರುತ್ತಿದ್ದರು. ಹಾಗಾಗಿ ಅವು ಕೆನಡಿಯವರಿಗೆ ಎಲ್ಲೇ ಆದರೂ ಬೇಕಾದಾಗ ತಕ್ಷಣವೇ ದೊರೆಯುವಂತಾಗಿದ್ದಿತು.

೧೯೬೦ರ ಕೊನೆಯ ಭಾಗದಲ್ಲಿ ಕೆನಡಿ ರಾಷ್ಟ್ರಾಧ್ಯಕ್ಷ ಚುನಾವಣೆಯ ಪ್ರಚಾರ ಕಾರ್ಯ ಪ್ರಾರಂಭಿಸುವ ಹೊತ್ತಿಗೆ ಅಡಿಸನ್ ರೋಗೋಪಚಾರ ವಿಧಾನಗಳು ಸಾಕಷ್ಟು ಸುಧಾರಿಸಿದ್ದವು. ಅದಕ್ಕೆ ಸಂಬಂಧಿಸಿದ ಸಮಸ್ಯೆಗಳನ್ನು ಸಂಪೂರ್ಣವಾಗಿ ಬಗೆಹರಿಸಬಹುದಾಗಿದ್ದಿತು. ಈ ವ್ಯಾಧಿಗೆ ಒಳಗಾದವರು ಸಹಜ ಬಾಳ್ವೆ ನಡೆಸುವುದು ಮೊಟ್ಟ ಮೊದಲಬಾರಿಗೆ ಸಾಧ್ಯವಾಗಿದ್ದಿತು. ಆದರೂ ಚುನಾವಣೆಯಲ್ಲಿ ಕೆನಡಿಯವರನ್ನು ವಿರೋಧಿಸುತ್ತಿದ್ದವರು ಅವರ ಶಾರೀರಿಕ ಸ್ಥಿತಿಯನ್ನು ತಮ್ಮ ಚಳವಳಿಯ ಒಂದು ಅಂಶವನ್ನಾಗಿ ಮಾಡಿಕೊಂಡಿದ್ದರು – ''ಯುದ್ಧ ಸಮಯದಲ್ಲಾದ ಗಾಯಗಳ ಫಲವಾಗಿ ಅಡ್ರಿನಲ್ ಕ್ರಿಯಾಕಾರ್ಯ ಸ್ವಲ್ಪಮಟ್ಟಿಗೆ ನಷ್ಟಗೊಂಡಿದ್ದರೂ ಅವರು ಈಗ ಸಂಪೂರ್ಣವಾಗಿ ಗುಣಮುಖರಾಗಿದ್ದಾರೆ'' ಎಂದು ಕೆನಡಿಯವರ ವೈದ್ಯರೊಬ್ಬರು ಖಚಿತವಾದ ಆಶ್ವಾಸನೆ ನೀಡಿದ್ದರು.

ಡೆಮೊಕ್ರಾಟಿಕ್ ಪಾರ್ಟಿಯೊಳಗೇ ಅವರು ಅಧ್ಯಕ್ಷ ಪದವಿಗೆ ನಾಮಕರಣ ಗೊಳ್ಳಲು ಲಿಂಡನ್ ಬಿ. ಜಾನ್‌ಸನ್‌ರ ವಿರುದ್ಧ ಸೆಣಸಬೇಕಿದ್ದಿತು. ಜಾನ್‌ಸನ್‌ರ ಅನುಯಾಯಿಗಳು ಕೆನಿಡಿಯವರ ಅಡಿಸನ್ ವ್ಯಾಧಿಯನ್ನು ಅವರ ನಾಮಕರಣದ ವಿರುದ್ಧ ಪ್ರಚಾರದ ಅಂಶವನ್ನಾಗಿ ಬಳಸುತ್ತಿದ್ದರು. "ಕೆನಿಡಿಯವರನ್ನು ನಾಮಕರಣ ಮಾಡಿ ಅವರು ಚುನಾವಣೆಯಲ್ಲಿ ಗೆದ್ದರೆ ಪೂರ್ಣಾವಧಿ ಸೇವೆ ಸಲ್ಲಿಸಲಾರರು, ಏಕೆಂದರೆ ಅವರು ಬೇಗನೆಯೇ ಮರಣಿಸಲಿರುವವರು" ಎಂದು ಜಾನ್‌ಸನ್‌ರ ಚುನಾವಣಾ ಪ್ರಚಾರ ಕಾರ್ಯದ ಮ್ಯಾನೇಜರ್ ಪ್ರತಿಪಾದಿಸುತ್ತಿದ್ದರು.

೧೯೬೦ರ ಜೂನ್ ೧೧ರಂದು ಕೆನಿಡಿಯವರ ಆರೋಗ್ಯ ಕುರಿತು ವೈದ್ಯರ ಹೇಳಿಕೆಯೊಂದನ್ನು ಪತ್ರಿಕೆಗಳಿಗೆ ಪತ್ರರೂಪದಲ್ಲಿ ಕಳುಹಿಸಬೇಕೆಂದು ನಿರ್ಧರಿಸ ಲಾಯಿತು. ಆದರೆ ಅವರ ವೈದ್ಯರು ಅಂತಹ ಪತ್ರ ಬರೆಯುವುದು ಕಷ್ಟಕರ ಎಂದು ವಾದಿಸಿದರು. ಸಿದ್ಧಗೊಳಿಸಿದ ಪ್ರತಿಯೊಂದು ಪದವನ್ನೂ ಬದಲಿಸುವಂತೆ ಆಗ್ರಹಿಸಿದರು. "ನಿಮ್ಮ ಅಡ್ರಿನಲ್ ಗ್ರಂಥಿಗಳು ಸರಿಯಾಗಿ ಕಾರ್ಯನಿರ್ವಹಿಸುತ್ತಿವೆಯೆಂದು ನ್ಯೂಯಾರ್ಕ್ ನಗರದ ಹೊರಗಿನ ಪ್ರಮುಖ ಅಂತಃಸ್ರಾವಶಾಸ್ತ್ರಜ್ಞರೊಬ್ಬರು ಸಮರ್ಥಿಸಿದ್ದಾರೆ... ಅಡ್ರಿನಲ್ ಕೊರತೆಗೆ ಸಂಬಂಧಿಸಿ ಹೇಳುವುದಾದರೆ, ೧೯೫೮ರ ಡಿಸೆಂಬರಿನಷ್ಟು ಈಚೆಗೆ ನಡೆಸಿದ ಆರೋಗ್ಯ ತನಿಖೆಯ ಪ್ರಕಾರ, ನಿಮ್ಮ ಅಡ್ರಿನಲ್ ಗ್ರಂಥಿಗಳು ಸಮರ್ಪಕವಾಗಿ ಕಾರ್ಯ ನಿರ್ವಹಿಸುತ್ತಿವೆ ಎಂಬುದು ಸಾಬೀತಾಗಿದೆ ಎಂದು ನಾವು ಎತ್ತಿ ತೋರಿಸಬಯಸುತ್ತೇವೆ" ಎಂಬ ಮಾತನ್ನು ವೈದ್ಯರ ಪತ್ರ ಒಳಗೊಂಡಿದ್ದಿತು.

ಸಾರ್ವತ್ರಿಕ ಚುನಾವಣಾ ಪ್ರಚಾರ ಕಾರ್ಯದಲ್ಲಿ ರಿಪಬ್ಲಿಕನ್ ಪಾರ್ಟಿಯವರು ಕೆನಿಡಿಯವರ ಆರೋಗ್ಯಕ್ಕೆ ಸಂಬಂಧಿಸಿ ಹೊಸ ಪ್ರಶ್ನೆಗಳನ್ನು ಎತ್ತಿದರು. "ಅಮೆರಿಕದ ವೈದ್ಯಕೀಯ ಸಂಸ್ಥೆಯ 'ಶಸ್ತ್ರಕ್ರಿಯಾ ಪತ್ರಾಗಾರ'ದ ೭೧ನೆಯ ಸಂಪುಟದಲ್ಲಿ ಸೆನೇಟರ್ ಕೆನಿಡಿಯವರ ಅನಾರೋಗ್ಯದ ಬಗೆಗೆ ವಿವರಣೆ ಇದೆ. ಸೆನೇಟರ್ ಕೆನಿಡಿಯವರು ಇದನ್ನು ಪ್ರತಿಯೊಬ್ಬ ಮತದಾರನಿಗೂ ತಿಳಿಸಿಕೊಡಬೇಕು" ಎಂದು ಅವರು ವಾದಿಸಿದರು.

ಚುನಾಯಿತರಾದ ನಂತರ ಕೆನಿಡಿಯವರು ಮೊದಲ ಪತ್ರಿಕಾ ಸಮ್ಮೇಳನದಲ್ಲಿ ತಮ್ಮ ಆರೋಗ್ಯದ ಬಗೆಗಿನ ಸಂದೇಹಗಳ ಬಗೆಗೆ ಉಲ್ಲೇಖಿಸುತ್ತ, "ನನಗೆಂದೂ ಅಡಿಸನ್ ವ್ಯಾಧಿ ಇದ್ದುದೇ ಇಲ್ಲ. ನಾನು ಇಷ್ಟು ದೀರ್ಘಕಾಲ ಚುನಾವಣಾ ಕಾರ್ಯದಲ್ಲಿ ನಿರತನಾಗಿದ್ದರೂ ನನ್ನ ಆರೋಗ್ಯ ಇಂದಿಗೂ ತುಂಬ ಚೆನ್ನಾಗಿಯೇ ಇದೆ" ಎಂದು ಒತ್ತಿ ಹೇಳಿದರು.

ತಮಗೆ ಅಡಿಸನ್ ವ್ಯಾಧಿ ಇಲ್ಲ ಎಂಬ ಕೆನಿಡಿಯವರ ವಾದ ನಿಜವಲ್ಲ ಎಂಬುದನ್ನು ನಾವು ಬಲ್ಲೆವು. ಆದರೆ ಅವರು ಆ ಕಾಲದಲ್ಲಿ ಇದನ್ನು ಸಂಪೂರ್ಣವಾಗಿ ಮನಗಂಡಿದ್ದರೇ ಎಂದು ಹೇಳಲಾಗದು. ಯುದ್ಧಾನಂತರ ತಾವು ಒಳಗಾದ ಮಲೇರಿಯಾ ರೋಗದ ಪರೋಕ್ಷ ಪರಿಣಾಮವಾಗಿ ಅಡ್ರಿನಲ್ ಕೊರತೆ ಉಂಟಾಗಿದ್ದಿತು ಎಂದು ಅವರು ಸಮರ್ಥಿಸಿ ನುಡಿಯುತ್ತಿದ್ದರು.

"ಅಧ್ಯಕ್ಷರು ಎಲ್ಲಿಯವರೆಗೆ ನನ್ನ ಮೇಲ್ವಿಚಾರಣೆಯಲ್ಲಿ ಇರುತ್ತಾರೋ ಅಲ್ಲಿಯವರೆಗೆ ಅವರಿಗೆ ಅಡ್ರಿನಲ್ ಕೊರತೆ ಯಾವುದೇ ರೀತಿಯ ಸಮಸ್ಯೆ ಯಾಗಲಾರದು" ಎಂದು ಶ್ವೇತಭವನದ ಮಿಲಿಟರಿ ವೈದ್ಯಕೀಯ ಘಟಕದ ಮುಖ್ಯಸ್ಥ ಡಾ|| ಜಾರ್ಜ್ ಬರ್ಕ್‌ಲೀ ಒತ್ತಿ ಹೇಳಿದರು. ಶ್ವೇತಭವನದ ವೈದ್ಯೆ ಡಾ|| ಜನೆಟ್ ಟ್ರಾವೆಲ್‌ರವರೂ ಇದಕ್ಕೆ ಒಪ್ಪಿಗೆ ಸೂಚಿಸಿದರು. "ಅವರು ಶ್ವೇತಭವನದಲ್ಲೇ ಇದ್ದಾಗ, ಬೇರೆ ಬೇರೆ ಸ್ಥಳಗಳಿಗೆ ಪ್ರಯಾಣ ಮಾಡದೆ ಒಂದೇ ಸ್ಥಳದಲ್ಲಿದ್ದಾಗ, ಅವರ ಅಡ್ರಿನಲ್ ಕೊರತೆಯ ಸಮಸ್ಯೆಯನ್ನು ಬಹು ಸುಲಭವಾಗಿಯೇ ನಿಯಂತ್ರಣ ದಲ್ಲಿರಿಸಿದ್ದೆವು. ರಾಷ್ಟ್ರಾಧ್ಯಕ್ಷರ ಕರ್ತವ್ಯ ಮತ್ತು ಜವಾಬ್ದಾರಿಗಳನ್ನು ನಿರ್ವಹಿಸಲು ಅವರ ಆರೋಗ್ಯ ಸ್ಥಿತಿ ಅವಶ್ಯವಾದುದಕ್ಕಿಂತ ಹೆಚ್ಚು ಉತ್ತಮವಾಗಿಯೇ ಇದ್ದಿತು... ನಿಜಕ್ಕೂ ಅದು ಹಾಗಿದ್ದಿತು" ಎಂದು ಆಕೆ ಸಮರ್ಥಿಸಿ ನುಡಿದರು.

ಕೆನಿಡಿ ರಾಷ್ಟ್ರಾಧ್ಯಕ್ಷರಾಗಿದ್ದ ೩೪ ತಿಂಗಳುಗಳ ಕಾಲದಲ್ಲಿ ಒಂದು ದಿನವೂ ಅನಾರೋಗ್ಯ ನಿಮಿತ್ತ ಕೆಲಸಕ್ಕೆ ಗೈರುಹಾಜರಾದುದಿಲ್ಲ, ಎಂದು ಶ್ವೇತಭವನದ ವರದಿ ತಿಳಿಸುತ್ತದೆ.

**ಕೆ. ಎಲ್. ಗೋಪಾಲಕೃಷ್ಣ ರಾವ್**
ನಂ. ೨೬೧, ೨ನೇ ಕ್ರಾಸ್, ಸಿ.ಟಿ. ಬೆಡ್, ತ್ಯಾಗರಾಜನಗರ
ಬೆಂಗಳೂರು - ೫೬೦ ೦೨೮

# ಯಾರಿವಳು !

ಇವಳು ಯಾರು ಬಲ್ಲಿರೇನು ?
ಇವಳ ನಗೆಯ ಕಂಡಿರೇನು ?
ಹಾಳ ಕೇರಿ ಮುತ್ತುರಾಜಾ
ಇವಳ ಚರಿತ ಹಾಡು ಗೆಳೆಯ
ಇವಳು ಯಾತಕೋ
ನನ್ನ ಮನವ ಸೆಳೆದಳು.

ಕನಕಾಂಬರ ಬಣ್ಣ ಉಟ್ಟು
ಗಿಳಿಹಸುರಿನ ರವಿಕೆ ತೊಟ್ಟು
ಮಕಮಲ್ಲಿನ ನರೆತಲೆಗೆ
ಸೆರಗ ಬಾಸಿಂಗ ಕಟ್ಟು
ಹಸುರು-ಕೆಂಪು ಬಳೆಯ ತೊಟ್ಟು
ಸವೆದ ಚಪ್ಪಲಿ ಹವಾಯಿ ಮೆಟ್ಟಿ

ಕಣ್ಣು ಕವಳೀ ಹಣ್ಣು
ಮುತ್ತುನತ್ತಿಲ್ಲ ಮೊಂಡ ಮೂಗು
ಉಬ್ಬುಗೆನ್ನೆಯು ಚೂಪು ಗಲ್ಲ
ಹಣೆಗೆ ಹಚ್ಚೆ ದಿಟ್ಟಿ ಬೊಟ್ಟು
ಮಾಯಕಾತಿ ನಕ್ಕರಿವಳು
ಮೂರೇ ಹಲ್ಲು ಕರೀ-ಕಪ್ಪು
ತಾಳಿ-ಕರಿಮಣಿ ಏನೂ ಇಲ್ಲ
ಗಂಡನಿಲ್ಲದ ಗರತಿಯೇನು ?

ಇವಳು ಯಾರು ಬಲ್ಲಿರೇನು ?
ಇವಳ ಚರಿತ ಹಾಡಲೇನು ?

ಇವಳ ಊರು ಹಳ್ಳಿಗುಡಿಯು
ಅದರ ಬಳಿಯೆ ಗದಗ ನಗರ



ಎರೆಯ ಹೊಲದಿ ದುಡಿವ ಜೀವ
ಅದನು ಬಿಟ್ಟರೆ ಗತಿಯೇ ಇಲ್ಲ
ಅದಕೆ ಇವಳು ಬೊಗಸೆಕೈಲಿ
ಹುಡಿಯ ಹಿಡಿದು ಕೇಳುತಿಹಳು
ಕಾರ್ಪೊರೇಟು ಕಂಪನಿಗಳಿಗೆ
ನೆಲವ ಮಾರಿ ಹಣವ ಗಳಿಸುವ

ಗಂಟು ಕಳ್ಳ ಲೋಭಿಗಳಿಗೆ-
'ಇದು ಒಡವ್ಯಲ್ಲೋ ಮಗನೆ
ಉಸಿರಿದ್ದೊಡಲೆಂದು'
ನೋವ ಮರೆತು ನಗುತಲಿಹಳು
ಇವಳು ಯಾರು ಬಲ್ಲಿರೇನು ?
ಇವಳು ಯಾತಕೋ
ನನ್ನ ಗಮನ ಸೆಳೆದಳು ?

..................

**ಪ್ರೊ|| ಶಿವರಾಮಯ್ಯ**
ನಂ. ೧೭೨, ಐಸೆಕ್ ರೋಡ್,
ನಾಗರಭಾವಿ ಗ್ರಾಮ
ಬೆಂಗಳೂರು - ೫೬೦೦೭೨

ಜ. ಹೊ. ನಾರಾಯಣಸ್ವಾಮಿ

ವಿಶ್ವದಲ್ಲಿ ತಂದೆ ಮಗ ಮಹಾನ್ ಸಾಹಿತಿಗಳೆನಿಸಿಕೊಂಡಿರುವುದು ವಿರಳ. ಏನೂ ಇಲ್ಲವೆಂದೇ ಹೇಳಬಹುದು. ಆದರೆ ಅದಕ್ಕೆ ಅಪವಾದವೆಂಬಂತೆ ಕನ್ನಡದಲ್ಲಿ ಉದಯಿಸಿದ ಕುವೆಂಪು ಹಾಗೂ ತೇಜಸ್ವಿ ಅವರಿಂದ ಎರಡು ಮಹತ್ವದ ಕಾದಂಬರಿಗಳು ಕನ್ನಡ ಸಾರಸ್ವತಲೋಕಕ್ಕೆ ತನ್ಮೂಲಕ ವಿಶ್ವ ಸಾಹಿತ್ಯಕ್ಕೆ ಕೈ ತಪ್ಪಿಹೋದದ್ದು ಅತ್ಯಂತ ವಿಷಾದನೀಯ.

# ಕನ್ನಡಕ್ಕೆ ಕೈ ತಪ್ಪಿದ ಎರಡು ಮಹತ್ವದ ಕಾದಂಬರಿಗಳು



ಪಶ್ಚಿಮ ರಾಷ್ಟ್ರಗಳು ಅದರಲ್ಲೂ ಬ್ರಿಟಿಷರು ಭಾರತದ ಮೇಲೆ ಮಾಡಿದ ಆಕ್ರಮಣದಿಂದ ಭಾರತೀಯ ಸಾಹಿತ್ಯದ ಮೇಲೆ ಇಂಗ್ಲಿಷ್ ಸಾಹಿತ್ಯದ ದಟ್ಟ ಪ್ರಭಾವ ಆಗಿದೆ. ಅದರಿಂದ ಕನ್ನಡ ಸಾಹಿತ್ಯವೂ ಹೊರತಾಗಿಲ್ಲ. ಇಂಗ್ಲಿಷ್ ಸಾಹಿತ್ಯಕ್ಕೆ ಹೋಲಿಸಿದರೆ ಕನ್ನಡ ಸಾಹಿತ್ಯ ದ್ವಿತೀಯವಾದುದೇನಲ್ಲ. ಏಕೆಂದರೆ ಇಂಗ್ಲಿಷ್ ಅಸ್ತಿತ್ವಕ್ಕೆ ಬರುವುದಕ್ಕೆ ಪೂರ್ವದಲ್ಲೆ ಹತ್ತನೇ ಶತಮಾನದಲ್ಲಿ ಪಂಪ ಮಹಾಕಾವ್ಯವನ್ನು ರಚಿಸಿದ್ದ. ಆದರೆ ಕನ್ನಡ ಸಾಹಿತ್ಯದ ಹೊಸ ಹೊಸ ಆಯಾಮಗಳ ಉಗಮಕ್ಕೆ ಇಂಗ್ಲಿಷ್ ಸಾಹಿತ್ಯದ ಪ್ರೇರಣೆ ಗಮನಾರ್ಹವಾದುದು. ಅಂತಹ ಪ್ರೇರಣೆ ಪಡೆದುಕೊಂಡಿರುವುದರಲ್ಲಿ ಕಾದಂಬರಿ ಪ್ರಕಾರವೂ ಒಂದು.

ಕನ್ನಡಿಗರಿಗೆ ಕಾದಂಬರಿಗಳ ಮೊದಲ ಪರಿಚಯ ಆದುದು ಬಿ. ವೆಂಕಟಾಚಾರ್ಯರು ಮಾಡಿದ ಬಂಗಾಳಿ ಕಾದಂಬರಿಗಳ ಭಾಷಾಂತರದಿಂದ. ರೆಂಟ್ಲ ವೆಂಕಟಸುಬ್ಬರಾವ್ ಅವರ 'ಕೇಸರಿ ವಿಲಾಸ' (೧೮೯೫), ಗುಲ್ವಾಡಿ ವೆಂಕಟರಾಯರ 'ಇಂದಿರಾಬಾಯಿ ಅಥವಾ ಸದ್ಧರ್ಮ ವಿಜಯ' (೧೮೯೯) ಕನ್ನಡದ ಮೊದಲ ಸ್ವತಂತ್ರ ಕಾದಂಬರಿಗಳು ಎಂದು ಪ್ರತಿನಿಧಿಸಲ್ಪಟ್ಟಿವೆ. ಕಾಲಾನಂತರದಲ್ಲಿ ಕನ್ನಡ ಕಾದಂಬರಿಲೋಕ ಪಡೆದುಕೊಂಡ ವಿಸ್ತಾರ ರೋಮಾಂಚನಕಾರಿಯಾದುದು.

ಕನ್ನಡ ಕಾದಂಬರಿ ಪ್ರಕಾರ ಇಂದು ಕೀರ್ತಿಗೆ ಭಾಜನವಾಗಿದ್ದರೆ ಅದಕ್ಕೆ ಮೊದಲ ಪ್ರೇರಣೆ ಕುವೆಂಪು ಅವರದು. ಬೃಹತ್ತಿಗೆ, ಮಹತ್ತಿಗೆ ಇನ್ನೂ ಎದೆ ತೆರೆಯದಿದ್ದ ಕಾಲದಲ್ಲಿ ಕುವೆಂಪು ೨೦.೦೫.೧೯೩೩ರಂದು ಟಾಲ್‌ಸ್ಟಾಯ್‌ನ 'ವಾರ್ ಅಂಡ್ ಪೀಸ್' ಕಾದಂಬರಿ ಓದಿ 'ಅದೊಂದು ಮಹಾಜೀವನ-ಜಾಲಗಳ ಪುರಾಣ ಕಾವ್ಯ! ಟಾಲ್‌ಸ್ಟಾಯ್ ಧನ್ಯನು ಅದನ್ನು ಬರೆದು! ನಾವೆಂದು ಬರೆಯುವುದು ಅಂತಹ ಕಾದಂಬರಿಗಳನ್ನು?' ಎಂದು ಉದ್ಗರಿಸಿದ್ದಾರೆ. (ನೆನಪಿನ ದೋಣಿಯಲ್ಲಿ, ಪುಟ-೧೦೦೨).

ಕನ್ನಡದಲ್ಲಿ ಮಹತ್ವದ ಕಾದಂಬರಿಗಳು ಬರಬೇಕೆಂಬ ಹಂಬಲ ಕುವೆಂಪು ಅವರಲ್ಲಿ ಎಷ್ಟು ತೀವ್ರವಾಗಿತ್ತು ಎಂಬುದು ಅವರ ಕೆಳಗಿನ ಮಾತುಗಳಿಂದ ಮನವರಿಕೆಯಾಗುತ್ತದೆ :

'...ನಾನು ಟಾಲ್‌ಸ್ಟಾಯ್, ರೋಮಾ ರೋಲಾ, ಥಾಮಸ್ ಹಾರ್ಡಿ, ಗಾಲ್ಸ್‌ವರ್ದಿ ಮೊದಲಾದವರ 'ಮಹಾಕಾದಂಬರಿ'ಗಳನ್ನು ಓದಿದ ಮೇಲೆ ನಮ್ಮ ಕನ್ನಡದಲ್ಲಿ ಎಂದು ಅಂತಹ ಕಾದಂಬರಿಗಳು ಹುಟ್ಟುತ್ತವೆಯೋ ಎಂದು ಹಂಬಲಿಸತೊಡಗಿದೆ. ಅಲ್ಲದೆ ಸಾಹಿತಿಗಳಾದ ನನ್ನ ಮಿತ್ರರಿಗೆಲ್ಲ ಅಂತಹ ಕಾದಂಬರಿಗಳನ್ನು ನೀವೇಕೆ ಬರೆಯಲು ಪ್ರಯತ್ನಿಸಬಾರದು ಎಂದು ಪೀಡಿಸತೊಡಗಿದೆ. ಒಂದು ದಿನ ಸಂಜೆ ಪ್ರೊ|| ವೆಂಕಣ್ಣಯ್ಯನವರೊಡನೆ ಈ ವಿಚಾರವಾಗಿ ಮಾತನಾಡುತ್ತಾ ಕುಕ್ಕನಹಳ್ಳಿ ಕೆರೆದಂಡೆಯ ಹಾದಿಯಲ್ಲಿ ಹೋಗುತ್ತಿದ್ದಾಗ ಅವರೆಂದರು : ''ನೀವೆ ಏಕೆ ಬರೆಯಬಾರದು?'' ನಾನು ಹೆದರಿ ಹಿಂಜರಿದು ''ಅದೇನು ಭಾವಗೀತೆ, ಸಣ್ಣಕತೆ, ನಾಟಕ ಬರೆದಂತೆಯೇ? ಅಥವಾ ಸಾಧಾರಣ ಕಾದಂಬರಿ ಬರೆದಂತೆಯೇ? 'ಮಹಾಕಾದಂಬರಿ'ಗೆ ಇಂಗ್ಲಿಷಿನಲ್ಲಿ ಗ್ರೇಟರ್ ನಾವೆಲ್ ಅನ್ನುತ್ತಾರೆ. ಅದರ ಪಾತ್ರ ಸಂಖ್ಯೆಯ ವಿಪುಲತೆ, ಅದರ ದಿಗಿಲು ಹುಟ್ಟಿಸುವ ವಿಸ್ತಾರ, ಅದರ ಭಯಂಕರ ವೈವಿಧ್ಯ – ಆಲೋಚಿಸಿದರೆ ಮೈ ಜುಮ್ಮೆನ್ನುತ್ತದೆ! ಅವನ್ನೆಲ್ಲ ಅನ್ವಯ ಕೆಡದಂತೆ, ಎಲ್ಲಿಯೂ ಹೊಂದಾಣಿಕೆಗೆ ಭಂಗಬರದಂತೆ ಕಲ್ಪನೆಯಲ್ಲಿ ಹಿಡಿದಿಟ್ಟುಕೊಂಡು ಸಾವಿರಾರು ಪುಟಗಳಲ್ಲಿ ನಡೆಸುವುದು ಸಾಧ್ಯವೇ? ನಾನು ಬರೆಯಹೊರಟರೆ ಉತ್ತರ ಕುಮಾರನ ರಣಸಾಹಸ ವಾಗುತ್ತದಷ್ಟೆ!'' ಎಂದು ನಕ್ಕುಬಿಟ್ಟೆ. ಆದರೆ ಅವರು ಗಂಭೀರವಾಗಿಯೇ ಮುಂದುವರಿದರು : ''ನೋಡಿ, ಕಾದಂಬರಿಗೆ ಅವಶ್ಯಕವಾದ ಕೆಲವು ಶಕ್ತಿಗಳು ನಿಮ್ಮಲ್ಲಿ ಆಗಲೇ ಪ್ರಕಟಗೊಂಡು ಸಾರ್ಥಕವಾಗಿವೆ. ಕಥನ, ಸಂವಾದ ಮತ್ತು ವರ್ಣನ ಈ ಮೂರು ಶಕ್ತಿಗಳು ನಿಮ್ಮಲ್ಲಿ ಇವೆ. ಸಣ್ಣ ಕಥೆ ಬರೆದಿದ್ದೀರಿ, ನಾಟಕ ಬರೆದಿದ್ದೀರಿ, ಮಲೆನಾಡಿನ ಚಿತ್ರಗಳಲ್ಲಿ ವರ್ಣನ ಪ್ರತಿಭೆ ಸೊಗಸಾಗಿ ವ್ಯಕ್ತಗೊಂಡಿದೆ. ಆದ್ದರಿಂದ ನೀವು ಹೆದರಬೇಕಾಗಿಲ್ಲ. ಇನ್ನೊಬ್ಬರಿಗೆ ಹೇಳುತ್ತಾ ಹೋಗುವುದರ ಬದಲು ನೀವೇ ಒಂದು ಕೈ ನೋಡಿಬಿಡಿ!'' ಹೀಗೆ ನನ್ನ ಹಂಬಲದ ತೀವ್ರತೆಗೆ ಗುರುವರ್ಯರ ಪ್ರೋತ್ಸಾಹ ರೂಪದ ಆಶೀರ್ವಾದದ ಬೆಂಬಲ ದೊರೆತುದರಿಂದಲೊ ಏನೊ 'ಮಹಾ ಕಾದಂಬರಿ' ರಚಿಸುವ ಗೀಳಿಗೆ ವಶವಾಗಿಬಿಟ್ಟೆ. ೧೯.೦೯.೧೯೩೩ರ ದಿನಚರಿ ''ಬೆಳಿಗ್ಗೆ ನಾವೆಲನ್ನು ಪ್ರಾರಂಭಿಸಿದೆ'' ಎಂದು ಪ್ರಾರಂಭವಾಗುತ್ತದೆ. (ನೆನಪಿನ ದೋಣಿಯಲ್ಲಿ, ಪುಟ. ೧೦೨೧-೨೨).

ಕಾನೂರು ಹೆಗ್ಗಡಿತಿ ಪ್ರಕಟವಾದದ್ದು ೧೯೩೬ರಲ್ಲಿ. ಅದಕ್ಕೂ ಮೊದಲು ಕುವೆಂಪು ಅವರ 'ಮಲೆಗಳಲ್ಲಿ ಮದುಮಗಳು' ಕಾದಂಬರಿಯ ರೂಪುರೇಷೆ ಸಿದ್ಧವಾಗಿ ಏಕೋ ನಿಂತುಹೋಗಿತ್ತು. ೧೯೩೫ರಿಂದ ೧೯೪೫ರ ಅವಧಿಯಲ್ಲಿ ಅವರ ಮಹಾಕಾವ್ಯ 'ಶ್ರೀ ರಾಮಾಯಣ ದರ್ಶನಂ' ರಚಿತವಾಯ್ತು. ಅದಾದನಂತರ 'ಮಲೆಗಳಲ್ಲಿ ಮದುಮಗಳು' (೧೯೬೭) ಪ್ರಕಟವಾಯ್ತು. ಹಾಗಾಗಿ ಮನುಜಮತ, ವಿಶ್ವಪಥ, ಸರ್ವೋದಯ, ಸಮನ್ವಯ ಹಾಗೂ ಪೂರ್ಣ ದೃಷ್ಟಿ ಎಂಬ ಪಂಚ ಮಂತ್ರಗಳ ತೀರ್ಥದಲ್ಲಿ ಮಿಂದು ವಿಶ್ವಮಾನವತ್ವಕ್ಕೇರಿ, ವಿಶ್ವೈಕ್ಯ ಭಾವದಲ್ಲಿ ಒಂದಾದ ಕುವೆಂಪು ಅವರ ಲೇಖನಿಯಿಂದ ಕಾದಂಬರಿ ಆರಂಭದಲ್ಲಿ ಓದುಗರಿಗೆ ಎಂಬಲ್ಲಿ 'ಇಲ್ಲಿ ಯಾರೂ ಮುಖ್ಯರಲ್ಲ; ಯಾರೂ ಅಮುಖ್ಯರಲ್ಲ; ಯಾವುದೂ ಯಃಕಶ್ಚಿತವಲ್ಲ!

ಇಲ್ಲಿ ಯಾವುದಕ್ಕೂ ಮೊದಲಿಲ್ಲ; ಯಾವುದಕ್ಕೂ ತುದಿಯಿಲ್ಲ; ಯಾವುದೂ ಎಲ್ಲಿಯೂ ನಿಲ್ಲುವುದೂ ಇಲ್ಲ; ಕೊನೆ ಮುಟ್ಟುವುದೂ ಇಲ್ಲ! ಇಲ್ಲಿ ಅವಸರವೂ ಸಾವಧಾನದ ಬೆನ್ನೇರಿದೆ! ಇಲ್ಲಿ ಎಲ್ಲಕ್ಕೂ ಇದೆ ಅರ್ಥ; ಯಾವುದೂ ಅಲ್ಲ ವ್ಯರ್ಥ; ನೀರೆಲ್ಲವೂ ತೀರ್ಥ!' ಎನ್ನುವ ವಿಶ್ವಾತ್ಮಕ ದೃಷ್ಟಿ ಅಭಿವ್ಯಕ್ತಗೊಂಡಿದೆ. ಕುವೆಂಪು ರಚಿಸಿದ 'ಕಾನೂರು ಹೆಗ್ಗಡಿತಿ' (೧೯೩೬) ಕನ್ನಡದ ಮೊದಲ ಬೃಹತ್ ಕಾದಂಬರಿ. ನಂತರ ಕಾರಂತರ 'ಮರಳಿ ಮಣ್ಣಿಗೆ' (೧೯೪೧) ಪ್ರಕಟಿತು. ಕನ್ನಡದಲ್ಲಿ ಬೃಹತ್ ಕಾದಂಬರಿಗಳ ಪರಂಪರೆ ಮುಂದುವರಿಯಿತು.

- ೨ -

ಕನ್ನಡಕ್ಕೆ ಕೈತಪ್ಪಿದ ಮಹತ್ವದ ಎರಡು ಕಾದಂಬರಿಗಳಲ್ಲಿ ಕುವೆಂಪು ಬರೆಯಬೇಕೆಂದಿದ್ದ 'ಕಾಲೋಶ್ಮಿ' ಒಂದು. ಬರೆಯುವಷ್ಟರಲ್ಲಿಯೇ ವಿಧಿವಶರಾದ ಕೆ. ಪಿ. ಪೂರ್ಣಚಂದ್ರ ತೇಜಸ್ವಿ ಅವರು ಬರೆಯಬೇಕೆಂದಿದ್ದುದು ಮತ್ತೊಂದು.

ಕುವೆಂಪು ತಮ್ಮ ಆತ್ಮಚರಿತ್ರೆ 'ನೆನಪಿನ ದೋಣಿಯಲ್ಲಿ' ದಿನಾಂಕ ೧.೮.೧೯೩೩ರಂದು ಹೀಗೆ ಬರೆದಿದ್ದಾರೆ: 'ಮುಂದೆ ನಾನು 'ಕಾನೂರು ಹೆಗ್ಗಡಿತಿ' ಮತ್ತು 'ಮಲೆಗಳಲ್ಲಿ ಮದುಮಗಳು' ಎಂಬ ಎರಡು ಕಾದಂಬರಿಗಳನ್ನು ಬರೆದ ಮೇಲೆ 'ಕಾಲೋಶ್ಮಿ' ಎಂಬ ಹೆಸರಿನ ಒಂದು ಮಹಾ ಕಾದಂಬರಿಯನ್ನು ಬರೆಯಲು ಸಂಕಲ್ಪಿಸಿದೆ. ಆ ಕಾದಂಬರಿಯಲ್ಲಿ ಇಡೀ ನಮ್ಮ ರಾಷ್ಟ್ರ ಜೀವನದ ಒಂದು ಶತಮಾನವನ್ನು - ಸ್ವಾತಂತ್ರ್ಯ ಸಂಗ್ರಾಮಾದಿಯಾಗಿ ಅದರ ಶತಶತ ಮುಖಗಳನ್ನು, ಹಳ್ಳಿ-ಪಟ್ಟಣ, ಸಂಸಾರ-ಸನ್ಯಾಸ, ಮತ-ಅಧ್ಯಾತ್ಮ-ಮೌಢ್ಯ-ವಿಜ್ಞಾನ ಪ್ರಗತಿ-ರಾಜಕೀಯ-ಸಾಮಾಜಿಕ ಇತ್ಯಾದಿಗಳನ್ನು ಚಿತ್ರಿಸಬೇಕೆಂದು ಸಂಕಲ್ಪಿಸಿದೆ. ಅದಕ್ಕಾಗಿ ಸಾಮಗ್ರಿಗಳನ್ನೂ ಸಂಗ್ರಹಿಸ ತೊಡಗಿದೆ. ಅಚ್ಚಾಗಿ ಪ್ರಕಟಗೊಂಡಿದ್ದ ಗ್ರಂಥಗಳ ಜೊತೆಗೆ ಆ ಜೀವನದಲ್ಲಿ ಭಾಗಿಯಾದ ಮಿತ್ರ ಪರಿಚಿತ ವ್ಯಕ್ತಿಗಳಿಂದಲೂ ಅವರ ಜೀವನ ಚರಿತ್ರೆಗಳನ್ನು ಹಸ್ತಪ್ರತಿಗಳಲ್ಲಿ ಕೂಡಿಹಾಕಲೂ ಪ್ರಯತ್ನಿಸಿದೆ. ಕೆಲವನ್ನು ಕೂಡಿಹಾಕಿಯೂ ಹಾಕಿದೆ.' (ನೆನಪಿನ ದೋಣಿಯಲ್ಲಿ, ಪುಟ - ೧೯೩)

'ಕಾಲೋಶ್ಮಿ' ಕಾದಂಬರಿ ಕುರಿತಂತೆ ಕುವೆಂಪು ತಮ್ಮ ಮನೆಯಲ್ಲಿ ಪ್ರಸ್ತಾಪಿಸಿದ್ದ ಕೆಲವು ಸಂಗತಿಗಳನ್ನು ಅವರ ಮಗಳು ತಾರಿಣಿ ತಮ್ಮ 'ಮಗಳು ಕಂಡ ಕುವೆಂಪು' ಕೃತಿಯಲ್ಲಿ ನಮೂದಿಸಿದ್ದಾರೆ. ಅದರಲ್ಲಿ ಕಂಡುಬರುವ ಕೆಲವು ಅಂಶಗಳು ಇಂತಿವೆ: 'ತಂದೆಯವರು ಒಂದು ಬೃಹತ್ತಾದ ಕಾದಂಬರಿ ಬರೆಯುವ ಉದ್ದೇಶ ಹೊಂದಿದ್ದರು. ಅವರು ಆಗಾಗ್ಗೆ ಅದರ ವಿಚಾರವಾಗಿಯೂ ಮಾತಾಡುತ್ತಿದ್ದರು. 'ಕಾಲೋಶ್ಮಿ' ಎಂಬ ಕಾದಂಬರಿ ಬರೆಯುವ ಯೋಚನೆ ಇದೆ. ಮುಂದಣ ಈ ಮಹಾ ಕಾದಂಬರಿಯ ಮುಖ್ಯ ನದಿಗೆ ಕಾನೂರು ಹೆಗ್ಗಡಿತಿ ಮತ್ತು ಮಲೆಗಳಲ್ಲಿ ಮದುಮಗಳು ಎರಡು ಕಾದಂಬರಿಗಳು ಉಪನದಿಗಳಾಗಿ ಸೇರಿ ಮಹಾಸ್ರೋತವಾಗಿ ಮುಂದುವರಿಯುತ್ತದೆ. 'ಮಲೆಗಳಲ್ಲಿ ಮದುಮಗಳು' ಕಾದಂಬರಿ ಕಾಲಕ್ಕಿಂತ ಹಿಂದೆ ಹೋಗಿ ಮಲೆಗಳಲ್ಲಿ ಮದುಮಗಳು ಕಾಲವೂ ಸೇರಿ ಮುಂದುವರಿದು ಸ್ವಾತಂತ್ರ ಸಂಗ್ರಾಮವನ್ನೆಲ್ಲಾ ಒಳಗೊಂಡ ಈಗಿನ ಅಂದರೆ ಈ ಕಾಲದವರೆಗೂ ಆ ಕಾದಂಬರಿಯ ವಿಸ್ತಾರ ಇರುತ್ತದೆ. 'ಭಗವಂತ ಆರೋಗ್ಯ ಆಯುಸ್ಸು ಕೊಟ್ಟರೆ ಆ ಬೃಹತ್ ಕಾದಂಬರಿ ಹೊರಬರುವುದು' ಎನ್ನುತ್ತಿದ್ದರು... 'ಕಾಲೋಶ್ಮಿ' ಕಾದಂಬರಿಗೆ ಸಂಬಂಧಪಟ್ಟಂತೆ ಅವರು ಕೆಲವು ದಾಖಲೆಗಳನ್ನು ಒಟ್ಟುಮಾಡಿದ್ದರು. ಅಲ್ಲಿಗೆ ಪುಟ್ಟಯ್ಯ ನಾಯ್ಕರಿಂದ (ತಂದೆಯವರ ದೂರದ ನೆಂಟರು) ಕುಪ್ಪಳಿ ಮನೆಯ ಹಳೆಯ ಓಲೆಗರಿ, ಕಡತಗಳು ಮತ್ತು ಇತರ ಹಳೆಯ ದಾಖಲೆಗಳನ್ನು, ಬರಹಗಳನ್ನು ಸಂಗ್ರಹಿಸಿದ್ದರು. ಶಿವಮೊಗ್ಗೆಗೆ ಬಂದಾಗ ದೇವಂಗಿ ಚಂದ್ರಶೇಖರ ಮುಂತಾದವರಿಂದ ಕೇಳಿದ ನಾನಾ ವಿಚಾರಗಳನ್ನು ಕುರಿತು ಇವೆಲ್ಲ ನನ್ನ ಮುಂದಿನ ಕಾದಂಬರಿಗೆ ಒಳ್ಳೆಯ ಸಾಮಗ್ರಿಗಳಾಗಲಿವೆ ಎನ್ನುತ್ತಿದ್ದರು. ನೆಂಟರಾದ ಜೀವಮ್ಮನವರೇ ಬರೆದ ಅವರ 'ಜೀವನ ಚರಿತ್ರೆ' ಹಸ್ತಪ್ರತಿ ತಂದೆಯವರಿಗೆ ಕಳುಹಿಸಿದ್ದನ್ನು ಜೋಪಾನವಾಗಿ ಇಟ್ಟಿದ್ದರು... ಕೆಲವೊಮ್ಮೆ ಮಾತನಾಡುವಾಗ 'ಕಾಲೋಶ್ಮಿ' ಕಾದಂಬರಿ ಪ್ರಾರಂಭಿಸುವ ಮೊದಲು ಅನೇಕ ಜಾಗಗಳನ್ನು ನೋಡಿ ಬರಬೇಕು. ಸ್ವಾತಂತ್ರ್ಯ ಸಂಗ್ರಾಮಕ್ಕೆ ಸಂಬಂಧಪಟ್ಟ ಜಾಗಗಳು, ಚಾರಿತ್ರಿಕ, ಐತಿಹಾಸಿಕ ಜಾಗಗಳು, ಕಲೆಗೆ ಸಂಬಂಧಪಟ್ಟದ್ದು ಎಲ್ಲ ನೋಡಬೇಕು ಎಂದಿದ್ದರು. ನಾನು ಅದೇ ಸಂದರ್ಭ

ಅವರೊಡನೆ ಎಲ್ಲಾ ಕಡೆ ಸುತ್ತಿ ನಾನಾ ಜಾಗಗಳನ್ನು ನೋಡಿಬರಬಹುದು ಎಂದು ಆಶಿಸಿದ್ದೆ. ಆದರೆ ಅಂತಹ ಸಂದರ್ಭ ಬರಲೇ ಇಲ್ಲ. ತಂದೆಯವರ 'ಕಾಲೋಸ್ಮಿ' ಕಾದಂಬರಿಯೂ ಬರಲಿಲ್ಲ.' (ಮಗಳು ಕಂಡ ಕುವೆಂಪು : ಪುಟ ೧೪೪-೪೫).

ಕುವೆಂಪು ಅವರ ಹಂಬಲದ 'ಕಾಲೋಸ್ಮಿ' ಕಾದಂಬರಿ ರಚನೆಯಾಗಿದ್ದರೆ ಅವರ ಮೇಲೆ ಪ್ರಭಾವ ಬೀರಿದ್ದ ವಿಶ್ವದ ಶ್ರೇಷ್ಠ ಕೃತಿ ಎಂದು ಪರಿಗಣಿತವಾಗಿದ್ದ ಟಾಲ್‌ಸ್ಟಾಯ್ ಅವರ ಮಹಾಕಾದಂಬರಿ 'ವಾರ್ ಅಂಡ್ ಪೀಸ್'ನಂತೆ ಅಥವಾ ಅದಕ್ಕೂ ಮಿಗಿಲಾದ ಭಾರತೀಯ ಪರಂಪರೆಯ ಅಧ್ಯಾತ್ಮ ಸತ್ವವನ್ನೊಳಗೊಂಡ ಕಾದಂಬರಿ ಬಹುಶಃ ಕಾದಂಬರಿ ಲೋಕಕ್ಕೆ ಕನ್ನಡದ ಮೂಲಕ ವಿಶ್ವಕ್ಕೆ ಪ್ರಾಪ್ತವಾಗುತ್ತಿತ್ತೇನೋ! ವಿಶ್ವ ಕಾದಂಬರಿ ಲೋಕ ವಿಸ್ಮಯ ಪಡುವಂಥ ಕಾದಂಬರಿ ಅದಾಗುತ್ತಿತ್ತೇನೋ! ಯಾರಿಗೆ ಗೊತ್ತು. ಹೊರಹೊಮ್ಮದೆ ಅವರೊಂದಿಗೆ ಉಳಿದುಹೋಯ್ತು, ನೆನಪಿನ ದೋಣಿ ಮಧ್ಯದಲ್ಲೆ ನಿಂತಂತೆ!

- ೩ -

ಕುವೆಂಪು, ಶಿವರಾಮ ಕಾರಂತರ ತಲೆಮಾರಿನ ನಂತರ ಕನ್ನಡ ಸಾಹಿತ್ಯಲೋಕದಲ್ಲಿ ಕಾಣಿಸಿಕೊಂಡ ಪ್ರತಿಭಾನ್ವಿತ ಲೇಖಕರೆಂದರೆ ಕೆ. ಪಿ. ಪೂರ್ಣಚಂದ್ರ ತೇಜಸ್ವಿ. ಮೂಡಿಗೆರೆಯ ತಮ್ಮ ತೋಟದಲ್ಲಿ ಕಟ್ಟಿಕೊಂಡ 'ನಿರುತ್ತರ' ಮನೆಯಲ್ಲಿ ಅನ್ವೇಷಕರಾಗಿ ನಿರಂತರ ಕ್ರಿಯಾಶೀಲರಾಗಿದ್ದ ತೇಜಸ್ವಿ ಅವರದ್ದು ಬಹುಮುಖ ಪ್ರತಿಭೆ. ಕಾರಂತರಂತೆ ಅವರು ಕೈ ಆಡಿಸದ ಕ್ಷೇತ್ರವಿಲ್ಲ. ಒಂದರ್ಥದಲ್ಲಿ ಕಂಪ್ಯೂಟರ್ ಪರಿಣತರಾಗಿದ್ದ ತೇಜಸ್ವಿ ಕಾರಂತರಿಗಿಂತಲೂ ಪ್ರಯೋಗದಲ್ಲಿ ಒಂದು ಕೈ ಮೇಲಾಗಿದ್ದರು. ಆಪ್ಯಾಯಮಾನವಾದ ಅವರ ಸಾಹಿತ್ಯ ಅಭಿವ್ಯಕ್ತಿಗೆ ಮಾರುಹೋಗದವರಿಲ್ಲ. ಕಠಿಣ ಎನ್ನುವ ವೈಜ್ಞಾನಿಕ ವಿಷಯಗಳನ್ನು ಅತ್ಯಂತ ಸರಳವಾಗಿ ಓದುಗರ ಮನಹುಗುವ ಶೈಲಿಯಲ್ಲಿ ಬರೆಯುವ ತಮ್ಮದೇ ಆದ ಬಹುಶಃ ಮುಂದೆ 'ತೇಜಸ್ವಿ ಶೈಲಿ' ಎಂದೇ ಬಿಂಬಿತವಾಗುವ ಧಾಟಿಯಲ್ಲಿ ಬರೆದವರು. ತೇಜಸ್ವಿ ಅವರ ಆ ಅಭಿವ್ಯಕ್ತಿಯನ್ನು ಗುರುತಿಸಿದ ಕನ್ನಡದ ಮತ್ತೊಂದು ಮೇರು ಶಿಖರ ಶಿವರಾಮ ಕಾರಂತರು ತಮ್ಮ ಜೀವಿತದ ಕಡೆಯ ಕಾಲದಲ್ಲಿ ಒಂದು ವಾರ ತೇಜಸ್ವಿಯವರ 'ನಿರುತ್ತರ' ಮನೆಯಲ್ಲಿ ತಂಗಿದ್ದು ತಾವು ಬರೆಯಬೇಕೆಂದಿದ್ದ ವೈಜ್ಞಾನಿಕ ವಿಷಯಗಳನ್ನು ತೇಜಸ್ವಿಗೆ ಕೊಟ್ಟು 'ವೈಜ್ಞಾನಿಕ ವಿಷಯಗಳನ್ನು ನಿಮ್ಮಂತೆ ಆಕರ್ಷಣೀಯವಾದ ಸರಳ ಶೈಲಿಯಲ್ಲಿ ಕನ್ನಡದಲ್ಲಿ ನನಗೆ ಹೇಳಲಾಗಲಿಲ್ಲ. ನೀವು ಅದರಲ್ಲಿ ಪರಿಣತಿಯನ್ನು ಪಡೆದುಕೊಂಡಿದ್ದೀರಿ. ನೀವು ಇದನ್ನು ಮಾಡಬಹುದು' ಎಂದ ಉದಾತ್ತ ಮನಸ್ಸಿನ ವಿಶಾಲ ಹೃದಯದ ಜೀವಿ. ಕುವೆಂಪು ಅವರಿಗಿಂತ ಎರಡು ವರ್ಷ ಹಿರಿಯರಾದ ಶಿವರಾಮ ಕಾರಂತರ ನಡವಳಿಕೆ ಅನುಕರಣೀಯ. ಶಿವರಾಮ ಕಾರಂತರ ಸಲಹೆಯನ್ನು ಅಹಂಕಾರಕ್ಕೆ ಅವಕಾಶವೀಯದೆ ವಿನಯದಿಂದ ಸ್ವೀಕರಿಸಿದ ತೇಜಸ್ವಿ ಒಂದು ಶ್ರೇಷ್ಠ ಪರಂಪರೆಯನ್ನು ಹುಟ್ಟುಹಾಕಿದ್ದಾರೆ. ತೇಜಸ್ವಿ ಅವರ ಅನಿರೀಕ್ಷಿತವಾದ ಅಕಾಲಿಕ ಸಾವು ಸಾಹಿತ್ಯಲೋಕಕ್ಕೆ ಆದ ತುಂಬಲಾರದ ನಷ್ಟ ಎನ್ನುವ ಮಾತು ಕೇವಲ ಔಪಚಾರಿಕವಾದುದಲ್ಲ. ನಿಜವಾದ ಅರ್ಥದಲ್ಲಿ ಅದು ನಷ್ಟ ಎನ್ನುವುದರಲ್ಲಿ ಎರಡು ಮಾತಿಲ್ಲ.

ನಾನು ತೇಜಸ್ವಿ ಅವರೊಂದಿಗೆ ಬಹಳ ದಿನಗಳನ್ನು ಕಳೆದಿದ್ದೇನೆ. ಅವರ 'ನಿರುತ್ತರ' ಮನೆಯಲ್ಲಿ ಕಳೆದ ದಿನಗಳು ಅವಿಸ್ಮರಣೀಯ. ಇತರ ಚಟುವಟಿಕೆಗಳ ಜೊತೆಯಲ್ಲಿ ಅವರ ಸಹಜ ಪ್ರವೃತ್ತಿಯಾದ ಮೀನು ಹಿಡಿಯುವ ಹವ್ಯಾಸದಲ್ಲಿ ನನ್ನನ್ನೂ ತೊಡಗಿಸಿದ್ದಾರೆ. ಆ ದಿನಗಳ ಅನುಭವ ವಿಶಿಷ್ಟವಾದುದು.

ಮೀನು ಹಿಡಿಯುವ ಮನುಷ್ಯ ಸಾಹಸ ಕಾಲ ಕಾಲದಿಂದಲೂ ನಡೆದುಬಂದಿದೆ. ಆ ಸಾಹಸದ ಅನುಭವಗಳನ್ನು ಕುರಿತ ಸಾಹಿತ್ಯವೂ ಸಾಕಷ್ಟು ಬಂದಿವೆ. ಅವುಗಳಲ್ಲಿ ಪ್ರಮುಖವಾಗಿ ಗುರುತಿಸಲ್ಪಡುವ ಕಾದಂಬರಿಗಳು ಎಂದರೆ ಅಮೆರಿಕದ ಶ್ರೇಷ್ಠ ಬರಹಗಾರರಾದ ಮೆಲ್‌ವಿಲ್ ಬರೆದಿರುವ 'ಮೊಬಿಡಿಕ್' ಹಾಗೂ ಅರ್ನೆಸ್ಟ್ ಹೆಮಿಂಗ್‌ವೇ ಬರೆದಿರುವ 'ದಿ ಓಲ್ಡ್ ಮ್ಯಾನ್ ಅಂಡ್ ದಿ ಸೀ'. ಮೆಲ್‌ವಿಲ್‌ನದು ಸಪ್ತಸಾಗರಗಳಲ್ಲಿರುವ ತಿಮಿಂಗಿಲಗಳನ್ನು ಬೇಟೆಯಾಡುವ ಬೃಹತ್ ಸಾಹಸದ ಗಾಥೆಯಾದರೆ ಹೆಮಿಂಗ್‌ವೇಯದು 'ಶಾರ್ಕ್' ಮೀನು ಹಿಡಿವ ಮುದುಕ ಸ್ಯಾಂಟಿಯಾಗೊನ ಸಾಹಸದಿಂದ ಕೂಡಿದ ಮಾನವೀಯ ಅಂತಃಕರಣವನ್ನು ಮಿಡಿಯುವ ಕಲಾತ್ಮಕ ಕಥೆ. ಬಹುಶಃ ಈ ಎರಡೂ ಕಾದಂಬರಿಗಳನ್ನು ಮೀರಿಸುವ ಮೀನು ಹಿಡಿವ ಮತ್ತೊಂದು ಕಾದಂಬರಿ ಇದುವರೆಗೆ ಬಂದಿಲ್ಲ.

ತೇಜಸ್ವಿ ಬಾಲ್ಯದಿಂದಲೂ ಮೀನು ಹಿಡಿಯುವ ಒಂದು ರೀತಿಯ ಗೀಳು ಹತ್ತಿಸಿಕೊಂಡಿದ್ದವರು. ಅಕಾಲಿಕ ಮರಣಕ್ಕೆ ತುತ್ತಾಗುವವರೆಗೂ ಅವರು ಆ ಗೀಳಿನಿಂದ ಹಿಂದೆ ಸರಿದವರಲ್ಲ. ಅವರು ಅದನ್ನು ಒಂದು ಧ್ಯಾನಮಯ ತಪಸ್ಸಿನಂತೆ ಮೈಗೂಡಿಸಿಕೊಂಡಿದ್ದರು.

ತೇಜಸ್ವಿ ಬಹಿರಂಗದಲ್ಲಿ ಕಾಣಿಸಿಕೊಂಡದ್ದು ಒಂದು ರೀತಿಯದಾದರೆ ಅವರು ಅವರ



ಅಂತರಂಗದಲ್ಲಿ ಧ್ಯಾನಿಸುತ್ತಿದ್ದುದು ಈ ವಿಸ್ಮಯ ಲೋಕವನ್ನು. ಆ ಲೋಕ ಮಥಿಸಿದಷ್ಟೂ ಮರೀಚಿಕೆಯಾಗಿ ಸೆಳೆದುಕೊಳ್ಳುತ್ತಾ ಸಾಗುವ, ತನ್ನ ಅಂತರಂಗವನ್ನು ಬಿಟ್ಟುಕೊಡದೆ ನಿರುತ್ತರವಾಗಿಯೆ ಉಳಿವ ಸೃಷ್ಟಿಯ ನಿಗೂಢತೆಯನ್ನು, ವಿಸ್ಮಯವನ್ನು 'ನಿರುತ್ತರ'ದಲ್ಲಿ ಧ್ಯಾನಾಸಕ್ತರಾಗಿ ಅಂತರ್ ವೀಕ್ಷಣೆಯಿಂದ ಅರಿಯಲು ಯತ್ನಿಸುತ್ತಿದ್ದವರು.

ಒಮ್ಮೆ ಕಾರಿನಲ್ಲಿ ಭದ್ರಾ ನದಿಗೆ ಹೋದೆವು. ತೇಜಸ್ವಿ ಎರಡು ಗಾಳಗಳನ್ನು ಇಟ್ಟುಕೊಂಡಿದ್ದರು. ನನಗೊಂದು ಗಾಳ ಕೊಟ್ಟು ತಾವು ಒಂದನ್ನು ಹಿಡಿದು ಗಾಳಕ್ಕೆ ಎರೆಹುಳು ಸಿಕ್ಕಿಸಿ ಇಬ್ಬರೂ ಹೊಳೆಯ ನೀರಿಗೆ ಬಿಟ್ಟು ಕುಳಿತುಕೊಂಡೆವು. ಕೆಲವು ಸಮಯದ ನಂತರ ತೇಜಸ್ವಿ ಹತ್ತಿರ ಬಂದು ''ಮೀನು ಬಿತ್ತೇನ್ರಿ'' ಎಂದರು. ''ಇಲ್ಲ ತೇಜಸ್ವಿ'' ಎಂದೆ. ''ಏನಾಗ್ತಾಯಿದೆ'' ಎಂದರು. ''ಏನೂ ಇಲ್ಲ ಹಾಗೆ ಇದೆ'' ಎಂದೆ. ಹಾಗಲ್ರಿ ಎಂದು ಗಾಳ ಹಿಡಿದಿದ್ದ ನನ್ನ ಕೈ ಹಿಡಿದು ಆಗುವ ಸ್ಪಂದನ ಗಮನಿಸಿ ಎಂದರು. ನೀರಿಗೆ ಬಿಟ್ಟಿದ್ದ ಗಾಳದಿಂದ ಒಮ್ಮೊಮ್ಮೆ ಒಂದು ರೀತಿಯ ಸೂಕ್ಷ್ಮ ಸ್ಪಂದನ ಬರುತ್ತಿರುವುದನ್ನು ಗಮನಿಸಿ ಹೇಳಿದೆ. ''ಹಾಂ ಅದೇ'' ಎಂದ ತೇಜಸ್ವಿ ''ನೋಡ್ರಿ, ಯಾವುದೇ ಜೀವ ತನ್ನ ಆತ್ಮರಕ್ಷಣೆಯ ವಿಷಯದಲ್ಲಿ ಉಡಾಫೆಯಿಂದ ವರ್ತಿಸುವುದಿಲ್ಲ, ಸದಾ ಜಾಗ್ರತವಾಗಿರ್ತವೆ ಕಂಡ್ರಿ. ನಾವು ಗಾಳಕ್ಕೆ ಸಿಕ್ಕಿಸಿರುವ ಎರೆಹುಳು ತನಗೆ ಅಪಾಯವೆ ಅಲ್ಲವೆ ಎಂದು ಕಚ್ಚಿ ದೂರ ಹೋಗುತ್ತವೆ. ಹಾಗೆ ಕಚ್ಚಿದಾಗ ಆ ತರಂಗಗಳು ಗಾಳದ ದಾರದ ಮೂಲಕ ನಮ್ಮ ಕೈಗೆ ತಲಪುತ್ತವೆ'' ಎಂದರು. ಮೀನಿನ ವರ್ತನೆಯ ಮೂಲಕ ಅವುಗಳ ಮನೋಧರ್ಮವನ್ನು ಕಂಡುಕೊಳ್ಳುವ ದೃಷ್ಟಿ ಅವರದಾಗಿತ್ತು.

ಹೀಗೆ ಪ್ರಕೃತಿಯ ಜೀವಿಗಳ ಸಂವೇದನೆಗಳನ್ನು ಸೂಕ್ಷ್ಮಾತಿಸೂಕ್ಷ್ಮವಾಗಿ ಅರಿಯುವ ಹುಚ್ಚು ಸಾಹಸದಲ್ಲಿ ನಿದ್ದೆಗೆಟ್ಟು ತೊಡಗಿಸಿಕೊಂಡಿದ್ದ ತೇಜಸ್ವಿ ಅವರನ್ನು ಹಿಂದಿರುಗಿ ಕಾರಿನಲ್ಲಿ ಬರುವಾಗ ನಾನು ಕೇಳಿದೆ ''ತೇಜಸ್ವಿ, ಬಾಲ್ಯದಿಂದಲೂ ಈ ಮೀನು ಹಿಡಿವ ಹವ್ಯಾಸ ಹಚ್ಚಿಕೊಂಡಿದ್ದೀರಿ. ಈ ಹವ್ಯಾಸದ ಹಿಂದಿರುವ ನಿಮ್ಮ ಅಂತರಂಗದ ಗುಟ್ಟೇನು'' ಎಂದು. ಅದಕ್ಕೆ ಅವರದೇ ಆದ ಸಹಜ ಶೈಲಿಯಲ್ಲಿ ನಕ್ಕು ಗಂಭೀರವಾಗಿ ಹೇಳಿದರು. ''ಐ ಮೈಟ್ ರೈಟ್ ಎ ನಾವೆಲ್'' ಎಂದು. ಆ ಕಾದಂಬರಿ ಅವರಿಂದ ರಚಿತವಾಗಿದ್ದರೆ ಜಲಚರ ಜೀವಿಗಳ ಬದುಕಿನ ಎಂತೆಂಥ ಸೂಕ್ಷ್ಮಗಳು ಅದರಿಂದ ಪ್ರಾಪ್ತವಾಗುತ್ತಿತ್ತೋ ಏನೋ! ಒಟ್ಟಿನಲ್ಲಿ ತೇಜಸ್ವಿ ತಮ್ಮ ಬಾಲ್ಯದಿಂದಲೂ ಗಮನಿಸಿ ಮೆದುಳಿನಲ್ಲಿ ಸಂಗ್ರಹಿಸಿಕೊಂಡಿದ್ದ ಅನುಭವದ ಜ್ಞಾನನಿಧಿ ಮನುಕುಲಕ್ಕೆ ಪ್ರಾಪ್ತವಾಗದೆ ಅವರೊಂದಿಗೆ ಅಸ್ತಂಗತವಾಯ್ತು.

ವಿಶ್ವದಲ್ಲಿ ತಂದೆ ಮಗ ಮಹಾನ್ ಸಾಹಿತಿಗಳೆನಿಸಿಕೊಂಡಿರುವುದು ವಿರಳ. ಏನೂ ಇಲ್ಲವೆಂದೇ ಹೇಳಬಹುದು. ಆದರೆ ಅದಕ್ಕೆ ಅಪವಾದವೆಂಬಂತೆ ಕನ್ನಡದಲ್ಲಿ ಉದಯಿಸಿದ ಕುವೆಂಪು ಹಾಗೂ ತೇಜಸ್ವಿ ಅವರಿಂದ ಎರಡು ಮಹತ್ವದ ಕಾದಂಬರಿಗಳು ಕನ್ನಡ ಸಾರಸ್ವತಲೋಕಕ್ಕೆ ತನ್ಮೂಲಕ ವಿಶ್ವ ಸಾಹಿತ್ಯಕ್ಕೆ ಕೈ ತಪ್ಪಿಹೋದದ್ದು ಅತ್ಯಂತ ವಿಷಾದನೀಯ.

---

ಜ. ಹೊ. ನಾರಾಯಣಸ್ವಾಮಿ
ನಂ. ೨೦೬೪/ಅ, 'ಮಾನವ', ಉತ್ತರ ಬಡಾವಣೆ, ಹಾಸನ - ೫೭೩ ೨೦೧



# ಎಡ - ಬಲ

''ಸರ್. ಒಂದು ಪ್ರಶ್ನೆ. ಎಡ ಮುಖ್ಯವೋ ಬಲ ಮುಖ್ಯವೋ ?'' ''ಎರಡೂ ಮುಖ್ಯಾನೇ. ಆದರೆ ಒಳ್ಳೆಯ ಕೆಲಸ ಮಾಡಲು ಬಲ ಮುಖ್ಯ.''

''ನಾನು ಒಪ್ಪೋದಿಲ್ಲ ಸರ್. ಚಪ್ಪಾಳೆ ಹೊಡೆಯೋಕೆ, ಕೈ ಮುಗಿಯೋಕೆ ಎಡ-ಬಲ ಕೈಗಳಿಗೆ ಫಿಫ್ಟಿ-ಫಿಫ್ಟಿ. ನಿಮಗೆ, ಬ್ರಾಹ್ಮಣರಿಗೆ ಆರತಿ ಮಾಡೋಕೆ ಗಂಟಾಮಣಿ – ಅದೇನೋ 'ಮಂಗಲ ನೀಲಾಂಜನಂ ಕರಿಷ್ಯೆ' ಅಂತಾರಲ್ಲ. ಆಗ ಎಡ ಕೈ ಬಹಳ ಮುಖ್ಯ. ಎಡ ಕೈಯ ಗಂಟಾ ಮಣಿಯಿಲ್ಲದೆ ಬಲ ಕೈಯ ಆರತಿಗೆ ಬೆಲೆಯಿಲ್ಲ. ನಿಮ್ಮ ಸಂತರ್ಪಣೆಗಳಲ್ಲಿ ದಕ್ಷಿಣೆ ಹಿಡಿಯೋಕೆ ಎಡ ಕೈಯೇ ಬೇಕು. ಪ್ರಸಾದ, ಸ್ವಾಮೀಜಿಯವರಿಂದ ಮಂತ್ರಾಕ್ಷತೆ ಪಡೆಯೋಕೆ ಬಲ ಕೈಯೊಂದರಿಂದ ಸಾಧ್ಯವಿಲ್ಲ. ಎಡ ಕೈಯನ್ನೂ ಜೋಡಿಸಬೇಕು. ಮಂಗಳಾರತಿ ತಗೊಳ್ಳಲು ಎರಡು ಕೈಗಳೂ ಬೇಕು. ನಿಮ್ಮ ಹಾರ್ಮೋನಿಯಂ ನೋಡಿ. ಎಡ ಕೈಯಲ್ಲಿ ಗಾಳಿ ಹಾಕದಿದ್ದರೆ ಬಲಗೈಯ ಸ್ವರಗಳು ಬರೋದೇ ಇಲ್ಲ. ಎಲ್ಲಕ್ಕಿಂತ ಮುಖ್ಯವಾಗಿ ನಮಗೆಲ್ಲರಿಗೂ ಟ್ಯಾಯಿಲೆಟ್‌ನಲ್ಲಿ ತೊಳೆದುಕೊಳ್ಳಲು ಎಡ ಕೈಯೇ ಬೇಕು. ಹೇಳಿ ಸರ್. ಬಲ ಮುಖ್ಯಾಂತ ಹೇಳಿದ್ರಲ್ಲಾ. ಬಲ ಕೈಯಲ್ಲಿ ತೊಳಕೊಳ್ಳಲು ಆಗುತ್ತೆಯೇ ?''

''ಅದೊಂದು ಆಗೋದಿಲ್ಲ ಕೂಸಪ್ಪ. ಅಲ್ಲಿ ಎಡ ಕೈಗೇ ನೂರು ಶೇಕಡಾ ಮಾರ್ಕ್ಸ್''. ''ಅಷ್ಟೇ ಅಲ್ಲ ಸರ್. ನಶ್ಯ ಸೇವಿಸುವವರು ನಶ್ಯದ ಡಬ್ಬಿಯಿಂದ ಮೊದಲು ಎಡ ಅಂಗೈಗೆ ಹಾಕೋತ್ತಾರೆ. ಆಮೇಲೆ ಅಲ್ಲಿಂದ ತೆಗೆದು ನಶ್ಯ ಹಾಕೊಳ್ಳೋದು. ಸರ್ಕಾರದೋರು ಎಡ ಪಕ್ಷ, ಬಲ ಪಕ್ಷ ಅಂತಾರೆ. ಆದರೆ ಅಲ್ಲಿ ಎಡ ಪಕ್ಷಕ್ಕೆ ಪ್ರಾಮುಖ್ಯತೆ. ಏಕೆಂದರೆ ಬಲ ಪಕ್ಷ ಸುಗಮವಾಗಿ ನಡೆಯಬೇಕಾದರೆ ಎಡ ಪಕ್ಷದವರ ಸಹಾಯ ಬೇಕೇ ಬೇಕು. ತಿಂಡಿ ಬಾಯಿಗೆ ತುರುಕಿಸಿಕೊಳ್ಳೋಕೆ ಬಲ ಕೈ ಬೇಕಾದ್ರೂ ಪ್ಲೇಟ್ ಹಿಡಿದುಕೊಳ್ಳಲು ಎಡ ಕೈಯೇ ಬೇಕು. ಇಷ್ಟೆಲ್ಲಾ ಎಡ ಕೈಗಳಿಗೆ, ಭಾಗಗಳಿಗೆ ಪ್ರಾಮುಖ್ಯತೆಯಿದ್ದರೂ ಮದುಮಗಳು ಅತ್ತೆ ಮನೆ ಹೊಸ್ತಿಲು ದಾಟುವಾಗ ಹೊಸ್ತಿಲ ಮೇಲೆ ಸೇರು ಅಕ್ಕಿಯಿಟ್ಟು - ಅದೂ ಆ ಧಾನ್ಯಲಕ್ಷ್ಮಿ! ''ಅದನ್ನು ಬಲಗಾಲಲ್ಲಿ ಚೆಲ್ಲಿ ಬಲಗಾಲು ಮುಂದಿಟ್ಟು ಮನೆಯೊಳಗೆ ಬಾ'' ಅಂತಾರೆ. ಇದು ಸರಿಯಾ ಸರ್ ?''

''ಧಾನ್ಯಲಕ್ಷ್ಮಿಯನ್ನು ಕಾಲಲ್ಲಿ ಚೆಲ್ಲುವುದು ನನಗೂ ಹಿಡಿಸೋದಿಲ್ಲ. ಕೂಸಪ್ಪಾ ನೀನೇ ನೋಡು ಊಟ ಎಡ ಕೈಯಲ್ಲಿ ಮಾಡೋಕೆ ಕಷ್ಟ. ಆದ್ದರಿಂದ ಬಲ ಕೈ ಪ್ರಾಮುಖ್ಯತೆ ಜಾಸ್ತಿ.''

''ನೀವು ಏನೇ ಅನ್ನಿ ಸರ್. ನನಗಂತೂ ಬಲಕ್ಕಿಂತ ಎಡವೇ ಮುಖ್ಯಾಂತ ಕಾಣುತ್ತೆ''

''ಅದು ಹೇಗೆ ಕೂಸಪ್ಪ ?''

''ಹೇಳ್ತೀನೆ ಸರ್. ಒಂದು ದೇವಸ್ಥಾನದಲ್ಲಿ ಸುತ್ತು ಬರೋದು ಎಡಗಡೆಯಿಂದ ಆರಂಭಿಸಿ ಬಲಗಡೆಗೆ ಬರೋದು. ಪೂಜಾರಿಗಳ ದೇವರ ಆರತಿ ನೋಡಿ. ಎಡಬದಿಯಿಂದ ಮೇಲಕ್ಕೆತ್ತಿ ಬಲಬದಿಯಿಂದ ಇಳಿಸೋದು. ಪುಸ್ತಕ, ಕಾದಂಬರಿ ಓದ್ಬೇಕಾಗಿದೆ, ಎಡಬದಿಯ ಪುಟ ಮೊದಲು ಓದಿ ಆಮೇಲೆ ಬಲಬದಿಯ ಪುಟಕ್ಕೆ ಹೋಗಬೇಕು. ಇಲ್ಲವಾದ್ರೆ ಕತೆಯೇ ಅರ್ಥವಾಗೋಲ್ಲ. ನಾವು ಬರೆಯುವ ಕಾಗದ, ಲೇಖನಗಳ ಆರಂಭ ಎಡದಿಂದಲೇ. ಇನ್ನು ನಿಮ್ಮ ಬ್ರಾಹ್ಮಣರ ಪಿಂಡಪ್ರದಾನ, ತರ್ಪಣ ಇತ್ಯಾದಿಗಳಿಗೆ ನಿಮ್ಮ ಜನಿವಾರ ಎಡಕ್ಕೆ ಹಾಕೊಳ್ತೀರಲ್ಲಾ? ಏಕೆ ? ಬಲಬದಿಯಿಂದ ಮಾಡಿದ್ರೆ ಪಿತೃಗಳಿಗೆ ತಲುಪೋದಿಲ್ಲಾ ಅಂತಾರೆ. ಅಲ್ವಾ ಸರ್ ?

''ಕೂಸಪ್ಪ. ನೀನು ಎಡಬದಿಯ ಮಹತ್ವದ ಬಗ್ಗೆ ತುಂಬ ತಿಳಿದುಕೊಂಡಿದ್ದೀಯಾಂತ ಆಶ್ಚರ್ಯವಾಗ್ತಿದೆ. ನಿನ್ನ ಎಡಬದಿಯ ಮಹತ್ವಗಳು ಇನ್ನೂ ಇವೆಯೇ ?''

''ಇದೆ ಸರ್. ಹೇಳ್ತೀನೆ... ಊಟದೆಲೆ ಹಾಕುವಾಗಲೂ ಎಡಗಡೆಯಿಂದಲೇ ಹಾಕ್ತಾ ಬರ್ತಾರೆ. ಒಬ್ಬ ವ್ಯಕ್ತಿ ಸತ್ತಾಗ ದೇಹವನ್ನು ಎಡಬಲಗಳಿಗೆ ಇಡ್ತಾರೆಯೇ ಹೊರತು ಪೂರ್ವ ಪಶ್ಚಿಮಕ್ಕಾಗಿ ಅಲ್ಲ. ದೀಪಾವಳಿಗೆ ಯಮ ದೀಪವನ್ನು ಎಡಮುಖವಾಗಿಯೇ ಇಡ್ತಾರೆ. ಅಷ್ಟೇ ಅಲ್ಲ ಸರ್, ದೇವರಿಗೂ ಎಡಬದಿಯೇ ಇಷ್ಟ. ಮನುಷ್ಯರನ್ನು, ಪ್ರಾಣಿಯನ್ನು ಸೃಷ್ಟಿಸುವಾಗ ಲಿವರು, ಹೃದಯ ಗಳನ್ನು ಎಡಬದಿಯಲ್ಲೇ ಇಟ್ಟಿದ್ದಾನಲ್ವಾ ಸರ್ ? ಏಕೆ ಸರ್ ? ಬಲಬದಿಯಲ್ಲಿ ಇಡಬಹುದಿತ್ತಲ್ಲಾ. ನೋಡಿ, ಅದಕ್ಕೇ ಎಡಬದಿಗೆ ಪ್ರಾಶಸ್ತ್ಯ ಜಾಸ್ತಿ.''

''ಸರಿ ಕೂಸಪ್ಪ. ನಿನಗಾಗಿ ತಂದಿಟ್ಟ ಚಹ ತಣ್ಣಗಾಗ್ತಾ ಇದೆ, ಕುಡಿ. ನಿನ್ನಿಂದ ನಾನು ಬಲಕ್ಕಿಂತ ಎಡ ಮುಖ್ಯ ಎಂದು ಅರ್ಥಮಾಡಿಕೊಂಡೆ. ಹೇಗೂ ಸಂಜೆ ಆಗ್ತಾ ಬಂತು, ನೀನೀಗ ಇಲ್ಲಿಂದ ಬಲಬದಿಯ ರಸ್ತೇಲಿ ಹೋಗ್ತೀಯಾ, ಎಡಬದಿಯ ರಸ್ತೇಲಿ ಹೋಗ್ತೀಯಾ ?''

''ಸರ್ ತಪ್ಪು ತಿಳ್ಕೋಬೇಡಿ. ನನ್ನ ಮನೆ ಬಲಬದಿಯ ರಸ್ತೆಯಾದ್ರೂ, ಅಲ್ಲಿ ವೈನ್ ಶಾಪ್ ಇಲ್ಲ. ಆದ್ರಿಂದ ಎಡಬದಿಯ ರಸ್ತೇಲೇ ಹೋಗ್ತೇನೆ. ಅಲ್ಲಿ ತೀರ್ಥ ಸ್ವೀಕರಿಸಿದ ನಂತರ ಅಲ್ಲಿಯ ''ಎಡಭಾಗದ ಒಳ ದಾರಿಯಲ್ಲೇ ಮನೆಗೆ ಹೋಗ್ತೇನೆ.'' ಎಂದವನೇ ಚಹಾ ಕುಡಿದು, ''ಎಡ ಬದಿಯ ಒಳ ದಾರಿಯಲ್ಲೇ ಹೋಗ್ತೇನೆ. ಬರ್ತೀನಿ ಸರ್.'' ಎಂದ ಕೂಸಪ್ಪ ಹೊರಟುಹೋದ.

ಎಲಾ ಇವ್ನಾ? ಎಡಬದಿಯ ಮಹತ್ವವನ್ನು ಸಾಕ್ಷ್ಯಾಧಾರ ಸಹಿತ ಹೇಳಿಬಿಟ್ನಲ್ಲಾ ಎಂದು ನನ್ನೊಳಗೆ ಅಂದುಕೊಂಡೆ. ಕೂಸಪ್ಪನ ಹೇಳಿಕೆಯಲ್ಲಿ ಸತ್ಯವಿದೆಯೆಂದು ನಿಮಗೂ ಅನಿಸೋಲ್ವೇ ?

**ರಾಘವೇಂದ್ರ ಉಡುಪಿ (ಕೆ. ರಾಘವೇಂದ್ರ ಭಟ್)**
ಶ್ಯಾಮಲಾ ಸದನ, ಕಟ್ಟೆ ಆಚಾರ್ಯ ಮಾರ್ಗ, ಕುಂಜಿಬೆಟ್ಟು
ಉಡುಪಿ - ೫೭೬ ೧೦೨

**ಪ್ರೊ|| ಕ. ವೆಂ. ರಾಜಗೋಪಾಲ**



ಅಣ್ಣಿಗೆರೆಯು ಹುಬ್ಬಳ್ಳಿಯಿಂದ ಸುಮಾರು ೩೫ ಕಿಲೋ ಮೀಟರ್‌ಗಳಲ್ಲಿದೆ.

೧. ಪ್ರಸಿದ್ಧ ಗಟಾರದಲ್ಲಿ ಬುರುಡೆಗಳನ್ನು ನೋಡಬಯಸಿದಾಗ ಯಾವುದೂ ಕಾಣುತ್ತಿರಲಿಲ್ಲ! ೧೮ನೇ ನವೆಂಬರ ೨೦೧೧ ಅಲ್ಲಿದ್ದ ಒಬ್ಬ ವಯಸ್ಕನನ್ನು ಕೇಳಿ ಆ ಸ್ಥಳವನ್ನು ನೋಡಲು ಯತ್ನಿಸಿದೆವು. ಎಲ್ಲವೂ ಸುಮಾರು ೧೫ ಅಡಿ ಆಳದಲ್ಲಿ ಇನ್ನೂ ಸಣ್ಣಗೆ ಹರಿಯುತ್ತಿದ್ದ ಹಳ್ಳದಲ್ಲಿ ತೋರಿಸಿದರು ಮತ್ತು ಅದರ ಹೊಣೆಗಾರ ವಿದ್ವಾಂಸರು ಬುರುಡೆಗಳನ್ನೆಲ್ಲಾ ತೆಳ್ಳಗೆ ಮಣ್ಣಿಂದ ಮುಚ್ಚಿ ತಮಗೆ ಬೇಕಾದವರಿಗೆ ಮಾತ್ರ ತೋರಿಸಲು ಆ ಮಣ್ಣನ್ನು ತೆಗೆಸಿರುತ್ತಿದ್ದರು – ಎಂದು ಇನ್ನೂ ೩-೪ ರೈತರು ಹೇಳಿದರು.

೨. ಹಳ್ಳದ ಆಚೆಯ ದಂಡೆಯಲ್ಲಿ ಒಂದು ಹಾಳು ಗುಡಿಯಿದೆ. ಅದಕ್ಕೆ ಬಸ್ ಸ್ಟ್ಯಾಂಡ್ ಮೂಲಕ ಬಳಸಿಕೊಂಡು ಹೋಗಬೇಕು. ಹೋಗಿ ನೋಡಿದೆವು. ಅಲ್ಲಿ ಒಂದು ಶಾಲೆ ನಡೆಯುತ್ತಿತ್ತು. ಬುರುಡೆಗಳ ಬಗ್ಗೆ ಅಲ್ಲಿಯ ಬೋಧಕಿಯನ್ನು ವಿಚಾರಿಸಿದಾಗ ಅದೆಲ್ಲಾ ಆ ಕಟ್ಟಡದ ಹಿಂದಕ್ಕೆ ಹಳ್ಳದಲ್ಲಿತ್ತೆಂದು ಹೇಳಿದರು.

ಅಲ್ಲಿಗೂ ಹೋಗಿ ನೋಡಲಾಗಿ, ಜೊತೆಗೇ ಒಬ್ಬ ಮುದುಕ ಚಂಬು (ಡಬ್ಬ) ಹಿಡಿದು ಹಳ್ಳದಕಡೆ ಬಂದ. ಸುಮಾರು ೧೦೦ ಅಡಿಗಳ ಆಚೆಗೆ ಕಲ್ಲು ಚಪ್ಪಡಿಗಳ ಎರಡು ಸಾಲಿನ ಗುರುತು ಕಾಣುತ್ತಿದ್ದಂತೆ ಹಳ್ಳವು – ಆದರ ಈಚೆಯ ದಂಡೆ ಕಾಣಿಸಿತು. ಅದು ಮತ್ತೆ ಸುಮಾರು ೧೫ ಅಡಿ ಆಳದಲ್ಲಿ ಸಣ್ಣಗೆ ಜಿನುಗು ಮಣ್ಣಿನ ಮತ್ತು ಹರಿಯುವ ನೀರಿನ ಹಳ್ಳ.

– ಬೋಧಕಿಯು ಕೇಳಿದ ಪ್ರಶ್ನೆ ಸಹಜವಾಗಿಯೇ ಇತ್ತು. ನಿಮಗೆ ಯಾವ ದೇಗುಲ ಬೇಕು ? ಇಲ್ಲಿ ವೀರಭದ್ರನ ಗುಡಿಯಿದೆ. ೨. ವೀರಪ್ಪನ ಗುಡಿಯಿದೆ. ೩. ವೀರಭದ್ರೇಶ್ವರನ ಗುಡಿಯಿದೆ. ಯಾವುದು ಬೇಕು ?

ನಮಗೆ ಮೊದಲಿಗೆ ಬರುಡೆಗಳ ದರ್ಶನವಾಗಬೇಕಿತ್ತು. ಅದರ ಬಗ್ಗೆ ಕೇಳಿದೆವು. ಅದಕ್ಕೆ – ಅಲ್ಲಿ ನೋಡಿ, ಈಗ ಎಲ್ಲಾ ಮುಚ್ಚಿ ಹೋಗಿದ್ದಾರೆ. ಮಠದ ಕೊನೆಗೆ ಅವುಗಳು ಇದ್ದವು.

– ಅದು 'ಮಠ' ಎಂಬುದು ಈಗಲೂ ರೂಢಿಯಿದೆ. ಶಾಲೆಯ ಮುಂದಕ್ಕೆ ನಾಲ್ಕಾರು ಮೆಟ್ಟಲುಗಳ ಕೆಳಕ್ಕೆ ಒಂದು ಚೌಕಾಕಾರದ ಗುರುತಿದೆ. ಈ ಗುರುತು ಚಪ್ಪಡಿಗಳಿಂದ ಆಗಿದೆ. ಮಧ್ಯೆ ಮರಳಿಂದ ಮುಚ್ಚಿದ ಚೌಕವಿದೆ – ಅದು ಓಕುಳಿಯ ಕೊಳವಿರಬಹುದು.

ಅಂದರೆ ಮುಖಮಂಟಪದ ಗುರುತಾಗಿದೆ. ಮುಂದಕ್ಕೆ ನೀಲ ಸೋವು ಬಣ್ಣದ ಕಂಬಗಳು ನಿಂತಿವೆ ಮತ್ತು ಒರಗಿವೆ. ಒಂದನ್ನು ಏನೋ ಮಾರಾಟಗಾರ ಬಳಸುತ್ತಿದ್ದನು. ಈ ಕಂಭಗಳು ಹೊಯ್ಸಳ ಶೈಲಿಯ ಅವಶೇಷಗಳಾಗಿವೆ. ಆದುದರಿಂದ ಈ ಶಾಲೆಯು ಮುಖಮಂಟಪದ ಭಾಗಗಳಾಗಿರಬೇಕೆನ್ನಿಸಿತು.

ಹಾಗಾದರೆ ಮಠದ ಅವಶೇಷದಲ್ಲಿ ಹಿಂದುಗಡೆಗೆ ಹರಿಯುವ ಹಳ್ಳದ ಬಗ್ಗೆ ವಿಚಾರಿಸಿದಾಗ ಒಬ್ಬಾತ ಈ ಹಳ್ಳವು ಮಳೆಗಾಲದಲ್ಲಿ ತುಂಬಿಹರಿದು ಹುಬ್ಬಳ್ಳಿಯಿಂದ ಬರುವ ಒಂದು ದೊಡ್ಡ ಹಳ್ಳಕ್ಕೆ ಸೇರುವುದಾಗಿ ತಿಳಿಸಿದರು.

ಸದರಿ ಹಳ್ಳಕ್ಕೆ ಕೆರೆಯು ಆಸರೆಯಿರಬಹುದೆಂದು ವಿಚಾರಿಸಿದಾಗ ಬಸ್‌ಸ್ಟಾಂಡಿನಿಂದ ಈಚೆಗೆ ಮಾತ್ರ ಅದು ಹರಿಯುವುದಾಗಿ ತಿಳಿಯಿತು. ಅದನ್ನೂ ಪರಿಶೀಲಿಸಲಾಯಿತು. ಮತ್ತೆ ಆಚೆಯ ದಂಡೆಗೆ ಹೋಗಿ ಅಲ್ಲಿ ಪೊಲೀಸ್ ಆಫೀಸರ್ ಎಂದು ನಿಲ್ಲಿಸಿದ್ದ ಒಂದು ಪಟ್ಟಿಕೆಯನ್ನೂ ನೋಡಿ ಅದರ ಮುಂದೆ ನಿಂತು ಹಳ್ಳವನ್ನು ಪರಿಶೀಲಿಸಲಾಯಿತು. ಆಗ ಅದರ ಕೊಚ್ಚೆ ಮತ್ತು ಸುಮಾರು ೧೮ ಅಡಿ ಆಳದ ಪರಿವೆಯುಂಟಾಯಿತು.

ಈಗ ನೆನಪಾದ ಒಂದು ಮುಖ್ಯಾಂಶವೆಂದರೆ ಮಠದ ಹಿಂಚಾಚು (ಈಗ ಎಲ್ಲರಿಗೂ ಹೇಸಿಗೆಗೆ ಆಹ್ವಾನಿಸುವ ದೃಶ್ಯ !).

ಈ ಹಿಂಚಾಚು ವಾಸ್ತವವಾಗಿ ಒಂದು ಹಳೆಯ ಆಯತದ ಸುಮಾರು ೧೦೦ ಅಡಿಗಳ ಗುರುತು ಮಾತ್ರ. ಉಳಿದೆಲ್ಲಾ ಹೇಸಿಗೆ ಒಂದೆರಡು ಹಂದಿಗಳು ಹುಡುಕುತ್ತಿರುವ ನೋಟ !

ಒಟ್ಟಿನಲ್ಲಿ ಪಾಠಶಾಲೆಯ (ಒಂದು ಹಳೆಯ ಗೋಪುರ ಸಹಿತ ಕಟ್ಟಡವಿದೆ. ಸುಮಾರು ೩೦ ಅಡಿಗಳಿಗಿಂತ ಎತ್ತರವಿರಲಾರದು) ಅಂದರೆ ಒಂದು ಪುರಾತನ ಸುಮಾರು ೧೨ನೇ ಶತಮಾನದ ಮುಖಮಂಟಪ ಮತ್ತು ಹಿಂದಕ್ಕೆ ಸುಮಾರು ೧೦೦ ಅಡಿ ಉದ್ದಕ್ಕೆ ಸುಮಾರು ೨೦-೨೫ ಅಡಿ ಅಗಲದ ಚಾಚುಭಾಗ ಈಗ ಹೇಸಿಗೆ(ಯ)ಮಯ ! ಮುಂದಕ್ಕೆ ಹಳ್ಳ.

ಈ ಹಳ್ಳದಲ್ಲಿ ಪಕ್ಕದ ಕೊಚ್ಚೆಯ ದಂಡೆಗಳಲ್ಲಿ ಸಾಮೂಹಿಕ ಸಮಾಧಿಯಲ್ಲಿ ಸುಮಾರು ೬೦೦ ಬುರುಡೆಗಳು ಫೋಟೊದಲ್ಲಿ ಇರುವಂತೆ ಕೆಲವೇ ಮೂಳೆಗಳು ಕೂಡ !

– ಇದು ಈ ಊರಿನ ಪುರಾತನ ಮಠ. ಒಂದು ಬಳ್ಳಿಗಾವೆಯು ಹತೋಟಿಯಲ್ಲಿದ್ದಿರಬಹುದಾದ ಕಾಳಾಮುಖರ ಮಠ ! ಈಗ ಅವಶೇಷ !

**ನಮ್ಮೂರಿನಲ್ಲಿ ಹಾದಿಬದಿಗೆ ದೊಡ್ಡ ಕಡಾಯದಲ್ಲಿ ಔಷಧಿ ಕಷಾಯವಿಟ್ಟಿದ್ದು, ಬಂದವರೆಲ್ಲಾ ಅಲ್ಲಿದ್ದ ಒಂದು ಲೋಟದಲ್ಲಿ ತಾವೇ ತೆಗೆದು ಸೇವಿಸುವಂತೆ – ಕೆಲವರು ಕುಡಿದು ಪೂರ್ತಿ ನುಂಗುವ ಮುಂಚೆಯೇ ಉರುಳಿಬಿದ್ದು ಸತ್ತವರೂ ಇದ್ದರಂತೆ. ಸಕಾಲದಲ್ಲಿ ಔಷಧಿ ಕುಡಿದವರಿಗೆ ಬಚಾವಾಗಿ ಹೋದವರೂ ಉಂಟೆಂಬುದು ನಮ್ಮ ಮನೆಯಲ್ಲಿ ಪ್ರತೀತಿ.**



# ಅಣ್ಣಿಗೆರೆಯ ಒಂದು ಪ್ರಗಾಥ
## – ಒಂದು ಸಾಮೂಹಿಕ ಸಮಾಧಿ
## – ಒಂದು ಕಾಳಾಮುಖ ಮಠದ ದುರಂತ !

– ಹಾಗಾದರೆ, ಈ ಊಹೆ ಸರಿಯಾದರೆ ಆ ಬುರುಡೆಗಳು ಒಂದು ಸಾಮೂಹಿಕ ಸ್ಮಶಾನ - ಎನ್ನಬಹುದಾದ ದೃಶ್ಯ! ಎಲ್ಲಾ ಬುರುಡೆಗಳನ್ನು ಕ್ರಮವಾಗಿ ಐದಾರು ಸಾಲುಗಳಲ್ಲಿ ಜೋಡಿಸಿದವು – ಕಣವಿ ಯವರಂತೆ ತಲೆಗಳು ಮಾತ್ರ. ಇಂಥ ಸ್ಥಿತಿಗೆ ಆಶ್ಚರ್ಯ ವಾಗುವುದು ಸಹಜವಷ್ಟೆ ಪತ್ರಿಕೆಗಳಲ್ಲಿ ಇತ್ತೀಚೆಗಷ್ಟೆ ಫ್ಲಾರಿಡಾ (ಅಮೆರಿಕಾ) ದ ಸಂಸ್ಥೆಯೊಂದು ಈ ಆಘಾತಕ್ಕೆ ಸುಮಾರು ೧೮೦ ವರ್ಷಗಳಿರಬೇಕು – ಇದು ಕಾರ್ಬನ್ ಟೆಸ್ಟ್‌ನಿಂದ ತಿಳಿದುಬರುವ ಅಂಶ ಎಂದಿದೆ.

ಒಂದು : ಹಳೆಯ ವಿಚಾರ ಪರಂಪರೆಯಲ್ಲಿ ಮೊದಲ ಮಹಾಯುದ್ಧದ ಪರಿಣಾಮವಾಗಿ (ಅಂದರೆ ೧೯೧೮-೧೯) ಎಲ್ಲಾ ದೇಶಗಳನ್ನೂ ಕಾಡಿದ ಇನ್‌ಫ್ಲೂಯೆಂಜಾ ರೋಗ; ಗಾಳಿ ಬೀಸಿದಂತೆ ರೋಗ ಹರಡಿ ಕನ್ನಡನಾಡಿನಲ್ಲಿ ಹಳೆಯ ಮೈಸೂರು ಸೇರಿದಂತೆ ಆದ ಮಾರಣಹೋಮ. ಶ್ರೀರಂಗರು ಒಂದು ನಾಟಕವನ್ನೂ ಬರೆದಿದ್ದಾರೆ - ಮುಕ್ಕಣ್ಣ ವಿರಾಟಪುರುಷ, ೧೯೩೦ರಲ್ಲಿ.

ಆಗ ನಮ್ಮೂರಿನಲ್ಲಿ ಹಾದಿಬದಿಗೆ ದೊಡ್ಡ ಕಡಾಯದಲ್ಲಿ ಔಷಧಿ ಕಷಾಯ ಇಟ್ಟಿದ್ದು, ಬಂದವರೆಲ್ಲಾ ಅಲ್ಲಿದ್ದ ಒಂದು ಲೋಟದಲ್ಲಿ ತಾವೇ ತೆಗೆದು ಸೇವಿಸುವಂತೆ – ಕೆಲವರು ಕುಡಿದು ಪೂರ್ತಿ ನುಂಗುವ ಮುಂಚೆಯೇ ಉರುಳಿಬಿದ್ದು ಸತ್ತವರೂ ಇದ್ದರಂತೆ.

ಸಕಾಲದಲ್ಲಿ ಔಷಧಿ ಕುಡಿದವರಿಗೆ ಬಚಾವಾಗಿ ಹೋದವರೂ ಉಂಟೆಂಬುದು ನಮ್ಮ ಮನೆಯಲ್ಲಿ ಪ್ರತೀತಿ. ಆ ಕಷಾಯವನ್ನು ಹಾಗೆ ಇರಿಸಿದ್ದವರು ನಮ್ಮ ತಾತ. ಹೆಸರು ದಾಸಪ್ಪ ಎಂದು.

ಎರಡು : ಆಗ ಧಾತು-ಈಶ್ವರದ ಭಯಂಕರ ಕ್ಷಾಮ. ಇದು ಒಂದು ಪುನರಾವರ್ತನೆಗೊಳ್ಳುವ ಕ್ಷಾಮ. ಆಹಾರವಿಲ್ಲದೆ ನೀರಿಲ್ಲದೆ ದನಕರುಗಳು ಮಡಿದು ಅವುಗಳನ್ನು ಕೇಳುವವರೇ ಇರಲಿಲ್ಲವಂತೆ! ಈ ವಿಚಾರವನ್ನು ಹೇಳಿದವರು ನಮ್ಮ ತಾತ, ಕಾಂತರಾಜಪುರದಲ್ಲಿದ್ದ ನಮ್ಮ ತಾಯಿಯ ತಂದೆ ವೆಂಕಣ್ಣಯ್ಯ!

ಅವರ ತಂದೆಯ ಕಾಲದಲ್ಲೂ ಇಂಥ ಕ್ಷಾಮ ಬಂದಿದ್ದುದನ್ನು ಕಂಡವರು ಅವರು. ಅಂದರೆ ಫ್ಲಾರಿಡಾದ ವಿಜ್ಞಾನಿಗಳು ತಿಳಿಸುವ ಬುರುಡೆಗಳ ಕಾಲಮಾನ ಸುಮಾರು ೧೮೦ ವರ್ಷಗಳು. ಇದು ಸರಿಸುಮಾರಿಗೆ ಹೊಂದಿಕೆಯಾಗುತ್ತದೆ. ಹುಬ್ಬಳ್ಳಿ-ಗದಗ ಸಮೀಪದಲ್ಲಿಯೂ ಇಂಥ ಕ್ಷಾಮ ಬಂದಿದ್ದಿತೆಂಬುದು ನಂಬಲರ್ಹವಾದ ವಿಷಯವಾಗಿದೆ. ಆಗ ಮೂರು ವರ್ಷಕಾಲ ಭಯಂಕರ ಕ್ಷಾಮ ಕಾಡಿದ್ದು ಜನಗಳ - ಜಾನುವಾರುಗಳ ಸಾವು ಅಸಂಖ್ಯ - ಎಲ್ಲೆಲ್ಲೂ ಅದೇ ವಿಚಾರವಂತೆ!

ಆದುದರಿಂದ ಪಾಶ್ಚಿಮಾತ್ಯ ತಜ್ಞರು ಕಂಡು ಹೇಳಿರುವ ತೀರ್ಮಾನವನ್ನು ಒಪ್ಪಬೇಕಾಗುತ್ತದೆ.

ಈಗ ಪಂಪನ ತೌರೂರಾದ ಅಣ್ಣಿಗೆರೆಯಲ್ಲಿ ಸುಮಾರು ೬೦೦ ಬುರುಡೆಗಳ ಮಹಾ ಸಮಾಧಿಗೆ ಬರುವಲ್ಲಿ ಈ ತರದ ಸಾಮೂಹಿಕ ಸಾವಿಗೆ ಗಮನ ಹರಿಸಬಹುದು –

೧. ಇದು ಒಂದು ಸಾಮೂಹಿಕ ಸಮಾಧಿ.
೨. ಇದು ಅವಶೇಷವಾಗಿರುವ ಮಠಕ್ಕೆ ಅಂಟಿಕೊಂಡಿರುವುದು ಸಾಮೂಹಿಕ ಸಾವಿಗೆ ಹೆಗ್ಗುರುತು!
೩. ಇಂಥ ಸಾವುಗಳಿಗೆ ಕ್ಷಾಮವಲ್ಲದೆ ರೋಗಗಳೂ ಆಧಾರವಿರಬಹುದು. ಕಾಲರಾ ತಟ್ಟಿದರೆ, ಗಂಟೆಗೊಂದು ಮರಣವಾದೀತು. ಪ್ಲೇಗೂ ಇರಬೇಕೆನ್ನಲು ಅದಕ್ಕೆ ಜ್ವರ ಮತ್ತು ದಪ್ಪ ಟೊಮೆಟೋ ಗಾತ್ರದ ಗಡ್ಡೆ, ಗುರುತು. ಜ್ವರವು ಸುಮಾರು ೧೦೮-೧೦-೧೨ ಡಿಗ್ರಿಗಳಾಗಬಹುದು. ಆದುದರಿಂದ ಕಾಲರಾದಂತಲ್ಲ, ಕೊಂಚ ನಿಧಾನ ಮನುಷ್ಯರಿಗೆ. ಆದರೆ ಪ್ಲೇಗಿಂದ ಇಲಿಗಳು ಸಾಯುತ್ತವೆ.

– ಅನಂತಮೂರ್ತಿಯವರ 'ಸಂಸ್ಕಾರ'ದಲ್ಲಿ ಅವರು ವರ್ಣಿಸಿರುವಂತೆ ದಟ್ಟವಾಗಿಲ್ಲ. ನಾನು ನನ್ನ ಬಾಲ್ಯದಲ್ಲಿ ನೋಡಿದ್ದೇನೆ. ಎಲ್ಲಾದರೂ ಒಂದು ಇಲಿ ಬಿದ್ದು ಒದ್ದಾಡಿ ಸಾಯುವುದು - ತಿಳಿದ ಕೂಡಲೇ ಊರಿನ ಜನ ಊರುಬಿಟ್ಟು ಹೊರಗೆ ಹೊಲಗದ್ದೆಗಳ ಬಳಿ ಗುಡಿಸಲು ಕಟ್ಟಿಕೊಂಡಿದ್ದು ಮಳೆ ಬಂದ ಕೂಡಲೇ ಮತ್ತೆ ಮನೆಗಳಿಗೆ ಬಂದು ಊರ ದೇವತೆಗೆ ಪರ್ವ ಮಾಡಿ ಬದುಕುವುದು ಸಾಮಾನ್ಯ ಅನುಭವ!

ಕಾಲರಾ ಬಂದಲ್ಲಿ ಒಂದು ಹೆಣ ಬಿದ್ದ ಮನೆಯಲ್ಲಿ ಅದನ್ನು ಸಂಸ್ಕಾರ ಮಾಡಿ ಬರುವ ವೇಳೆಗೆ ಮತ್ತೊಂದು ಹೆಣವಿದ್ದುದುಂಟು. ಹೀಗೆ ಒಂದು ಬೆಸ್ತರ ಕೇರಿಯಲ್ಲಿ ನಾಲ್ಕು ಮನೆಗಳು ಹೆಣಗಳಿಂದ ಕೂಡಿದ್ದು ಅವುಗಳನ್ನು ಸಂಸ್ಕಾರ ಮಾಡುವವರೇ ಇಲ್ಲವಾಗಿದ್ದು ಹೆಣಗಳನ್ನು ಎತ್ತಿನ ಗಾಡಿಗಳಲ್ಲಿ ಸಾಗಿಸಿದ್ದುಂಟು. ಅಷ್ಟು ಭಯಂಕರ ಈ ಕಾಲರಾ ಜಡ್ಡು!

ಈಗ ಅಣ್ಣಿಗೆರೆಯಲ್ಲಿನ ಮಠದಲ್ಲಿ ಕ್ಷಾಮದಿಂದಾಗಿ ಎಲ್ಲರೂ ಬಂದು ಆಶ್ರಯಕ್ಕೆ ಸೇರಿರಬಹುದು. ಕ್ಷಾಮ ಬಂದರೆ ಆಶ್ರಯವೂ ಸಹಜವಾಗುತ್ತದೆ. ಆದುದರಿಂದ ಇಂಥ ಸಾಂಕ್ರಾಮಿಕ (ಕಾಲರಾ) ಪ್ಲೇಗೂ ಸಿಡುಬು ಕೂಡ. ರೋಗ ಹರಡಿ ಸಂಸ್ಕಾರ ಮಾಡಲೂ ಒಂದಿಬ್ಬರಷ್ಟೇ ಉಳಿದಿದ್ದಾರೆ. ಈ ಸಾಲುಬುರುಡೆಗಳನ್ನು ಹೂಳುವಾಗ ಕೇವಲ ಗುರುತಿಸಲು ಸಾಧ್ಯವಾಗುವ ತಲೆಗಳನ್ನು ಹೂತಿರಬಹುದು!

ಈ ಸಾಧ್ಯತೆಯನ್ನು ಕುರಿತು ವಿಚಾರಮಾಡಿದಲ್ಲಿ ಈ



೬೦೦ ಸಾವುಗಳು ಆಶ್ಚರ್ಯವಾಗುವುದಿಲ್ಲ! ಅಂಥ ಗತಿ ಪ್ರಸಿದ್ಧವಾದ ಕಾಳಾಮುಖ ಮಠಗಳದು. ಇಲ್ಲಿ ಈಗಲೂ ಪಾಠಶಾಲೆ ಜರುಗುತ್ತಿದೆ. ಮತ್ತು ಅದರ ಆಶ್ರಯದಲ್ಲಿ ಸಾಂಕ್ರಾಮಿಕ ರೋಗ ತಟ್ಟಿ ಅಂಥ ಶವಗಳ ಸಮಾಧಿ ಮಾಡಲು ಅಸಾಧ್ಯವಾಗಿ ಹೀಗೆ ತಲೆಗಳನ್ನು ಮಾತ್ರ ಜೋಡಿಸಿರಬಹುದು. ಪ್ರಾಣಬಲಿಯನ್ನು ಭೈರವೇಶ್ವರನಿಗೆ ಕೊಡುವಲ್ಲಿ ತಲೆಯನ್ನು ಬೇರ್ಪಡಿಸುವುದು ಇದ್ದೇ ಇದೆ. ಇಂದಿಗೂ ಹಾಗೂ ಅನಿವಾರ್ಯವಾಗಿ ಮನುಷ್ಯರಿಗೂ ಒದಗಿಬಂದಿದ್ದು ಈ ಸಾಮೂಹಿಕ ಸಂಸ್ಕಾರವು ಜರುಗಿರಬಹುದು. ಅದಕ್ಕೆ ವಿಜ್ಞಾನದ ಛಾಪು ಬಿದ್ದಿರುವುದನ್ನು ಅಲ್ಲಗಳೆಯುವಂತಿಲ್ಲ.

– ವೈಜ್ಞಾನಿಕ ಸಂಶೋಧನೆಯಲ್ಲಿ ನಾವು-ನಮ್ಮವರು ಪಾಶ್ಚಿಮಾತ್ಯರಿಗೇ ಶರಣಾಗ ಬೇಕಾಗಿರುವುದು ಸತ್ಯ ವಿಚಾರ. ಆದುದರಿಂದ ನನಗೆ ಅನುಭವಕ್ಕೆಟಕಿರುವಂತೆ ಈ ಸನ್ನಿವೇಶವನ್ನು ವಿವರಿಸಲು ಯತ್ನಿಸಿದ್ದೇನೆ. ವಿದ್ವಾಂಸರು ಇದನ್ನು ಪರಾಂಬರಿಸಬೇಕಾಗಿ ವಿನಂತಿ.

**ಟಿಪ್ಪಣಿ :** ಅಣ್ಣಿಗೆರೆಯಿಂದ ಬಂದ ಮೇಲೂ ಕಾಳಾಮುಖರ ಬಗ್ಗೆ ಸಾಕಷ್ಟು ಅಧ್ಯಯನ ಮಾಡಿದ್ದೇನೆ. ಇದಕ್ಕೆ ಪ್ರೊ॥ ಕಲ್ಬುರ್ಗಿಯವರ ಲೇಖನವೂ ಆಧಾರವಾಗಿದೆ.

ಸ್ವತಃ ಗೆಳೆಯ ಚೆನ್ನವೀರ ಕಣವಿಯವರಲ್ಲಿ ವಿಚಾರ ವಿನಿಮಯ ಮಾಡಿದ್ದೇನೆ.

ಇದು ಶಕ್ತಿ ಪರಿಷತ್ತಿನ ಒಂದು ಕಾಳಾಮುಖ ಕೇಂದ್ರಕ್ಕೆ ಸಂಬಂಧಿಸಿರಬಹುದಾದ ಒಂದು ಸಾಮೂಹಿಕ ಸಮಾಧಿ.

'ಅಣ್ಣಿಗೆರೆಯು ಸಾಮೂಹಿಕ ಸಮಾಧಿಯ ದರ್ಶನ!' ಸಂಸ್ಕಾರದ ಸೌಲಭ್ಯಕ್ಕಾಗಿ ಹೀಗೆ ಮಾಡಲಾಗಿದೆ!

ಸಾಮಾಜಿಕ ಮಡಿವಂತಿಕೆಯ ಈ ಸಮರ್ಥನೆಗೆ ಎಷ್ಟು ಮಾನ್ಯತೆ ನೀಡಬೇಕೆಂಬುದನ್ನು ಅಂದಾಜು ಮಾಡುವುದು ಕಷ್ಟ.

*– ಡೇವಿಡ್ ಎನ್. ಲೊವೆನ್‌ಜೆನ್*

**ಆಧಾರಗಳು :**

೧. ಪ್ರತ್ಯಕ್ಷ ಪ್ರಮಾಣ ಮತ್ತು ಪತ್ರಿಕಾ ವರದಿಗಳು
೨. Chalukyas of Kalyana – B. R. Gopal
೩. The Kapalikas and Kalamukha Centres – David Lovenzen

**ಚಿತ್ರಗಳು : ಸೂರ್ಯಕಾಂತ ಹಳಿಯಾಳ**

**ಪ್ರೊ॥ ಕ. ವೆಂ. ರಾಜಗೋಪಾಲ**
ಎಮ್‌ಐಜಿ-೪೧, ೮೦ ಅಡಿ ರಸ್ತೆ, ಕೆಂಗೇರಿ ಉಪನಗರ, ೨ನೇ ಸ್ಟೇಜ್
ಬೆಂಗಳೂರು - ೫೬೦ ೦೬೦

ವಿಶ್ವವೀಕ್ಷಣೆ

## ಅತಂತ್ರ, ಆತಂಕದ ಸ್ಥಿತಿಯಲ್ಲಿ ಪಾಕಿಸ್ತಾನ

**ಪಾ**ಕಿಸ್ತಾನ ಮತ್ತೊಮ್ಮೆ ಸೇನಾಡಳಿತೆಗೆ ಬೀಳುವ ಭೀತಿಯಲ್ಲಿದೆ. ನಾಲ್ಕು ವರ್ಷಗಳಿಂದ ಆಡಳಿತದ ಚುಕ್ಕಾಣಿ ಹಿಡಿದಿರುವ ಪಾಕಿಸ್ತಾನ ಪೀಪಲ್ಸ್ ಪಾರ್ಟಿಯ ನೇತೃತ್ವದಲ್ಲಿರುವ ಅಸೀಫ್ ಆಲಿ ಜರ್ದಾರಿ – ಯೂಸುಫ್ ರಜಾ ಗಿಲಾನಿ ಸರಕಾರ ತೂಗುಯ್ಯಾಲೆಯಲ್ಲಿದೆ. ಸೇನೆ ಮತ್ತು ಸರಕಾರದ ಮಧ್ಯೆ ತೀವ್ರವಾದ ಜುಗ್ಗಾಟ ನಡೆದಿದೆ. ಹತ್ತು ವರ್ಷಗಳ ಹಿಂದೆ ಇದ್ದ ಪರಿಸ್ಥಿತಿ ಈಗಿಲ್ಲ. ಕ್ಷಿಪ್ರಕ್ರಾಂತಿಯನ್ನು ನಡೆಸಿ, ಮಾರ್ಷಲ್ ಲಾ ಜಾರಿಗೊಳಿಸಿ ಸೇನೆಯ ಸರ್ವಾಧಿಕಾರ ಸ್ಥಾಪಿಸುವುದು ಸುಲಭವಾಗಿಲ್ಲ. ಜನ ಸೇನಾಡಳಿತೆಯಿಂದ ಬೇಸತ್ತಿದ್ದಾರೆ. ಹಾಗೆಂದ ಮಾತ್ರಕ್ಕೆ ನಾಗರಿಕ ಆಡಳಿತೆ ಸುಸ್ಥಿರ ಎಂದೇನಲ್ಲ. ಏಕೆಂದರೆ ಪಾಕಿಸ್ತಾನದಲ್ಲಿ ಪ್ರಜಾಪ್ರಭುತ್ವ ಇನ್ನೂ ಶೈಶವಾವಸ್ಥೆಯಲ್ಲೇ ಇದೆ. ಅರವತ್ತನಾಲ್ಕು ವರ್ಷಗಳ ಅಸ್ತಿತ್ವದಲ್ಲಿ ಸೇನಾ ಸರ್ವಾಧಿಕಾರದ ಪಾಲೇ ಹೆಚ್ಚು. ಪಾಕಿಸ್ತಾನದ ಚುನಾಯಿತ ಸರಕಾರಗಳು ಸೇನೆಯ ಕೃಪಾಶ್ರಯದಲ್ಲಿ ಆಡಳಿತ ನಡೆಸಿವೆಯೇ ಹೊರತು ಸ್ವತಂತ್ರವಾಗಿ ಅಲ್ಲ. ಸಾಕಷ್ಟು ದೀರ್ಘಕಾಲ ಆಡಳಿತಾಧಿಕಾರದ ರುಚಿ ಕಂಡಿರುವ ಸೇನೆ ತನ್ನ ಪಾರಮ್ಯವನ್ನು ಬಿಟ್ಟುಕೊಡಲು ತಯಾರಾಗಿಲ್ಲ. ಹೀಗಾಗಿ ಪಾಕಿಸ್ತಾನದಲ್ಲಿ ನಿಜವಾಗಿ ಅಧಿಕಾರ ಚಲಾಯಿಸುವವರು ಯಾರು ಎಂದು ಗುರುತಿಸುವುದೇ ಕೆಲವೊಮ್ಮೆ ಕಷ್ಟವಾಗುತ್ತದೆ. ಈಗಿನ ಬಿಕ್ಕಟ್ಟಿನಲ್ಲಂತೂ ಒಂದಲ್ಲ ಎರಡಲ್ಲ ನಾಲ್ಕು ಕೇಂದ್ರಗಳಿವೆಯೇ ಎಂಬ ಸಂದೇಹ ಬರುತ್ತಿದೆ. ಇವುಗಳಲ್ಲಿ ಮೂರು ದೇಸಿ – ಕಾರ್ಯಾಂಗ, ನ್ಯಾಯಾಂಗ ಮತ್ತು ಸೇನೆ, ನಾಲ್ಕನೆಯದು ವಿದೇಶಿ – ಅಮೆರಿಕ. ಯಾರ ಕಡೆಗೆ ಅಮೆರಿಕ ವಾಲುತ್ತದೋ ಅವರಿಗೆ ಅನುಕೂಲ. ಇದು ಯಾವತ್ತಿನಿಂದ ಇರುವ ಪರಿಸ್ಥಿತಿ. ಈಗ ಪಾಕಿಸ್ತಾನ-ಅಮೆರಿಕ ಸಂಬಂಧಗಳು ತುಂಬ ಹಳಸಿಕೊಂಡಿವೆ ಎನ್ನುವುದು ನಿಜ. ಆದರೆ ಪರಸ್ಪರಾವಲಂಬನೆ ಮಾತ್ರ ಕಡಿಮೆಯಾಗಿಲ್ಲ, ಏಕೆಂದರೆ ಆಯಕಟ್ಟಿನ ಪ್ರದೇಶದಲ್ಲಿರುವ ಪಾಕಿಸ್ತಾನ ಅಮೆರಿಕಾಗೆ ಬೇಕು.

ಈಗ ಪಾಕಿಸ್ತಾನ ಎದುರಿಸುತ್ತಿರುವ ಬಿಕ್ಕಟ್ಟಿಗೂ ಬಹುಮಟ್ಟಿಗೆ ಅಮೆರಿಕವೇ ಕಾರಣ. ರಾಜಧಾನಿ ಇಸ್ಲಾಮಾಬಾದ್‌ಗೆ ಸಮೀಪದಲ್ಲಿರುವ ಬಂಗಲೆಯಲ್ಲಿ ಅಡಗಿಕೊಂಡಿದ್ದ ಭಯೋತ್ಪಾದನೆಯ ರೂವಾರಿ ಒಸಾಮಾ ಬಿನ್ ಲಾಡೆನ್ ಅಮೆರಿಕದ ಸೈನ್ಯ ಪಡೆಗಳ ನೇರವಾದ ದಾಳಿಯಿಂದ ಹತ್ಯೆಯಾದದ್ದೆ ಪಾಕಿಸ್ತಾನ ಸರಕಾರಕ್ಕೆ ಮುಳುವಾಯಿತು. ಸರಕಾರ ಮತ್ತು ಸೇನೆಯ ಮಧ್ಯೆ ವಿರಸಕ್ಕೆ ನಾಂದಿಯಾಯಿತು. ಆ ಸಂದರ್ಭದಲ್ಲೇ ಕ್ಷಿಪ್ರಕ್ರಾಂತಿಯ ಸಂಶಯವಿತ್ತು. ಈ ವಿಚಾರದಲ್ಲಿ ಸೇನೆ ಮತ್ತು ಗೂಢಚರ್ಯೆ ಸಂಸ್ಥೆಯ ನಡವಳಿಕೆಯನ್ನು ವೈಫಲ್ಯವನ್ನು ಪ್ರಧಾನಿ ಗಿಲಾನಿಯವರು ಟೀಕಿಸಿದ್ದರು. ಅದೇ ಸಮಯದಲ್ಲಿ ಗಿಲಾನಿಯವರ ಮೇಲೆ ನ್ಯಾಯಾಲಯದ ನಿಂದನೆ ಮತ್ತು ಜರ್ದಾರಿಯ ಹಳೆಯ ಭ್ರಷ್ಟಾಚಾರದ ಆರೋಪ ಸುಪ್ರೀಂ ಕೋರ್ಟು ಮುಂದೆ ಬರುತ್ತಿದೆ. ಇನ್ನೊಂದು ಮೆಮೋಗೇಟ್ ಹಗರಣ ಎಂದು ಹೆಸರಾಗಿರುವ ಪ್ರಕರಣ. ಪಾಕಿಸ್ತಾನದ ಅಧ್ಯಕ್ಷರ ಆದೇಶದ ಮೇರೆಗೆ ಉದ್ದಿಮೆದಾರನೊಬ್ಬನ ಮೂಲಕ ದೇಶದಲ್ಲಿ ಸೇನಾಡಳಿತೆಯ ಭೀತಿ ಇರುವುದರಿಂದ ಅದನ್ನು ತಪ್ಪಿಸಲು ಅಮೆರಿಕದ ಸೇನಾನಿಗೆ ಬರೆದ ಪತ್ರ. ಈಗಾಗಲೆ ರಾಯಭಾರಿಯಾಗಿದ್ದ ಹಕ್ಕನಿ ಇದಕ್ಕೆ ಬಲಿಯಾಗಿದ್ದಾರೆ. ಚೀಣೀ ಪತ್ರಿಕೆಯೊಂದಕ್ಕೆ ಸಂದರ್ಶನ ನೀಡಿದ ಸಂದರ್ಭದಲ್ಲಿ ಗಿಲಾನಿಯವರು ಸೇನೆ ಮತ್ತು ಐಎಸ್ಐ ಕುರಿತು ಮಾಡಿರುವ ಟೀಕೆಯನ್ನು ಹಿಂತೆಗೆದುಕೊಳ್ಳಬೇಕು ಎಂಬ ಒತ್ತಾಯವನ್ನು ಪಾಕ್ ಸೇನಾನಿ ಕಯಾನಿ ತಂದಿದ್ದಾರೆ. ಈ ಎಲ್ಲ ಹಿನ್ನೆಲೆಯಲ್ಲಿ ಸರಕಾರ ಮತ್ತು ಸೇನೆಯ ಮಧ್ಯೆ ತೀವ್ರವಾದ ಬಿಕ್ಕಟ್ಟು ಉಂಟಾಗಿದೆ. 'ನಾನು ಚುನಾಯಿತ ಪಾರ್ಲಿಮೆಂಟಿಗೆ ಮಾತ್ರ ಉತ್ತರ ನೀಡಲು ಬದ್ಧನಾಗಿದ್ದೇನೆ, ವ್ಯಕ್ತಿಗಳಿಗಲ್ಲ' ಎಂಬ ನಿಲುವನ್ನು ಪ್ರಧಾನಿ ತಳೆದಿದ್ದಾರೆ. ಸೇನಾನಿ ಕಯಾನಿ ಜೊತೆ ಪ್ರಧಾನಿ ಮತ್ತು ಅಧ್ಯಕ್ಷರು ನಡೆಸಿದ ಮಾತುಕತೆ ಪ್ರಯೋಜನವಾಗಿಲ್ಲ. ಈಗ ಎಲ್ಲವೂ ಪಾಕಿಸ್ತಾನದ ಸುಪ್ರೀಂ ಕೋರ್ಟು ನೀಡುವ ತೀರ್ಪಿನ ಮೇಲೆ ಸರಕಾರದ ಭವಿಷ್ಯ ನಿಂತಿದೆ. ಈ ಮಧ್ಯೆ ವಿರೋಧಪಕ್ಷಗಳು ಕೂಡಲೆ ಚುನಾವಣೆಗಳನ್ನು ನಡೆಸಬೇಕೆಂದು ಆಗ್ರಹಿಸಿವೆ. ಅದಕ್ಕಾಗಿ ಬೃಹತ್ ಪ್ರದರ್ಶನಗಳನ್ನು ನಡೆಸಿವೆ. ಅಮೆರಿಕದೊಂದಿಗೆ ಸಂಬಂಧಗಳು ಹಳಸಿಕೊಂಡಿರುವುದರಿಂದ ಪಾಕಿಸ್ತಾನದ ಆರ್ಥಿಕ ಪರಿಸ್ಥಿತಿ ಮತ್ತಷ್ಟು ಹದಗೆಟ್ಟಿದೆ. ಭಯೋತ್ಪಾದನೆ ಮತ್ತು ತಾಲಿಬಾನ್ ಹಾವಳಿ ಎಂದಿನಂತೆ ಮುಂದುವರಿದಿದೆ. ಈಚೆಗೆ ಅಮೆರಿಕ ನಡೆಸಿದ ದಾಳಿಯಲ್ಲಿ ಪಾಕಿಸ್ತಾನಿ ಸೈನಿಕರ ಸಾವು ಸರಕಾರ ಮತ್ತು ಸೇನೆಯ ವೈಫಲ್ಯವನ್ನು ಬಯಲುಮಾಡಿದೆ. ಪರಿಸ್ಥಿತಿಯನ್ನು ಅವಲೋಕಿಸಿದರೆ ಪಾಕಿಸ್ತಾನ ಒಂದು ರಾಷ್ಟ್ರವಾಗಿ ಉಳಿಯುವುದೇ ದುಸ್ತರವಾಗುತ್ತಿದೆ ಎನಿಸುತ್ತಿದೆ.

## ಇರಾಕ್ ದುರಾಕ್ರಮಣ ಅಂತ್ಯ ?

**ಇ**ರಾಕಿನ ಮೇಲೆ ದುರಾಕ್ರಮಣ ನಡೆಸಿದ ಅಮೆರಿಕದ ಸೇನೆ ಕಳೆದ ವರ್ಷದ ಕೊನೆಯಲ್ಲಿ ವಾಪಸ್ಸಾಗಿದೆ. ಸಾಮೂಹಿಕವಾಗಿ ಹತ್ಯೆಗೆಯ್ಯಬಲ್ಲ ಆಯುಧ ಸಾಮಗ್ರಿಗಳ ಶೇಖರಣೆಯನ್ನು ಹೊಂದಿದೆ ಎನ್ನುವ ಸುಳ್ಳು ಆಪಾದನೆಯ ಮೇಲೆ ಹಾಗೂ ಇರಾಕಿನ ಅಧ್ಯಕ್ಷ ಸದ್ದಾಮ್ ಹುಸೇನ್ ಅಲ್‌ಖೈದಾದೊಂದಿಗೆ ಸಂಬಂಧ ಹೊಂದಿದ್ದಾನೆ ಎಂದು ಆಪಾದಿಸಿ ಅಮೆರಿಕ ನಡೆಸಿದ ದಾಳಿ ಎಲ್ಲ ಅಂತರರಾಷ್ಟ್ರೀಯ ನಿಯಮಗಳ ಉಲ್ಲಂಘನೆಯಾಗಿತ್ತು. ಅಲ್ಲದೆ ಆಕ್ರಮಿತ ಪ್ರದೇಶದಲ್ಲಿ ಹೊರಿಸಿದ್ದ ಆಪಾದನೆಗಳ ಕಿಂಚಿತ್ ಸುಳುಹೂ ಹತ್ತು ವರ್ಷಗಳಲ್ಲಿ ಪತ್ತೆಯಾಗದಿದ್ದುದು ಅಮೆರಿಕದ ದುರಾಕ್ರಮಣ ನೀತಿಯನ್ನು ಬಯಲುಮಾಡಿದೆ. ಈ ಪ್ರದೇಶದಲ್ಲಿ ಅಧಿನಾಯಕತ್ವ ಸ್ಥಾಪಿಸುವ ದುರುದ್ದೇಶದಿಂದಲೇ ಅಮೆರಿಕ ಈ ದುಷ್ಕೃತ್ಯದಲ್ಲಿ ತೊಡಗಿತು ಎನ್ನುವುದು ಸ್ಪಷ್ಟವಾಗಿದೆ. ಭಯೋತ್ಪಾದನೆಯ ವಿರುದ್ಧ ಸಮರ ಸಾರಿದ ಅಮೆರಿಕ ಆಕ್ರಮಿಸಿಕೊಂಡಿರುವ ಆಫ್ಘಾನಿಸ್ತಾನದ ಪರಿಸ್ಥಿತಿಯೂ ಭಿನ್ನವಾಗೇನಿಲ್ಲ. ಅಲ್ಲಿಂದ ಕಾಲ್ತೆಗೆಯಲಾಗದೆ ಪೇಚಿನಲ್ಲಿ ಸಿಕ್ಕಿಕೊಂಡಿದೆ ಅಮೆರಿಕ.



ಅಮೆರಿಕದ ಸೇನೆ ಇರಾಕಿನಿಂದ ಕಾಲ್ತೆಗೆದಿದ್ದರೂ ಈ ದೇಶದ ಮೇಲೆ ಅದರ ಹಿಡಿತವೇನೂ ಸಡಿಲಗೊಂಡಿಲ್ಲ. ಇನ್ನೂ ಹತ್ತಾರು ಸಾವಿರ ಸೈನಿಕರು ಸ್ಥಾಪಿತವಾಗಿರುವ ನೆಲೆಗಳಲ್ಲಿದ್ದಾರೆ. ಇರಾಕಿನಲ್ಲಿ ಅಮೆರಿಕ ಬಹುದೊಡ್ಡ ರಾಯಭಾರಿ ಕಛೇರಿಯನ್ನು ಬಾಗ್ದಾದ್‌ನಲ್ಲಿ ಹೊಂದಿದೆ. ನೂರಾರು ಎಕರೆ ಪ್ರದೇಶದಲ್ಲಿ ಹರಡಿಕೊಂಡಿರುವ ಈ ಸಂಕೀರ್ಣದಲ್ಲೇ ಸಾವಿರಾರು ಮಂದಿ ಸೈನಿಕರಿದ್ದಾರೆ. ಇದರ ಜೊತೆಗೆ ಅಮೆರಿಕದ ಬಹುರಾಷ್ಟ್ರೀಯ ಸಂಸ್ಥೆಗಳು ಸ್ಥಾಪಿಸಿಕೊಂಡಿರುವ ಉದ್ಯಮಗಳ ರಕ್ಷಣೆಗಾಗಿ ಹೊಂದಿರುವ ಕೂಲಿ ಸಿಪಾಯಿಗಳ ದೊಡ್ಡ ಸಮೂಹವೇ ಇದೆ. ಇನ್ನು ಇರಾಕಿನಿಂದ ವಾಪಸ್ಸಾದ ಸೇನೆಯಲ್ಲಿ ಬಹುಭಾಗ ನೆರೆಯ ಕುವೇತ್ ರಾಷ್ಟ್ರದಲ್ಲಿ ನೆಲೆಸಿವೆ. ಯಾವ ಸಂದರ್ಭದಲ್ಲಾದರೂ ಅವು ಅಗತ್ಯಬಿದ್ದರೆ ಇರಾಕನ್ನು ಪ್ರವೇಶಿಸಬಲ್ಲವಾಗಿವೆ. ಸಿರಿಯ ಮತ್ತು ಇರಾನಿನ ಮೇಲೆ ಕಣ್ಣಿರಿಸಿರುವ ಅಮೆರಿಕಾಗೆ ಸಾಕಷ್ಟು ಸಂಖ್ಯೆಯಲ್ಲಿ ಸೇನೆಯನ್ನು ಸಿದ್ಧವಾಗಿರಿಸಿಕೊಂಡಿರುವುದು ಅನಿವಾರ್ಯವಾಗಿದೆ.

ಇರಾಕಿನ ದುರಾಕ್ರಮಣದಲ್ಲಿ ಸತ್ತ ಅಮೆರಿಕದ ಯೋಧರ ಸಂಖ್ಯೆ ೪೦೦೦ಕ್ಕಿಂತ ಹೆಚ್ಚು. ಆದರೆ ಯುದ್ಧದಲ್ಲಿ ಮಡಿದ ಇರಾಕಿಗಳ ಸಂಖ್ಯೆ ಲಕ್ಷಗಟ್ಟಳೆ. ಸುಮಾರು ಒಂದು ಮಿಲಿಯ ಎಂದು ಅಂದಾಜು. ಸುವಿಖ್ಯಾತ 'ದಿ ಲಾನ್ಸೆಟ್' ನಿಯತಕಾಲಿಕೆಯ ಅಂದಾಜಿನಂತೆ ೨೦೦,೦೦೦. ಇರಾಕಿನಲ್ಲಿ ಅಮೆರಿಕ ದುರಾಕ್ರಮಣದ ವರ್ಷಗಳಲ್ಲಿ ಹೊಸದೇನನ್ನೂ ನಿರ್ಮಿಸಿಲ್ಲ. ಅದು ಬಿಟ್ಟುಹೋಗಿರುವುದು ಮುರಿದು ಬಿದ್ದಿರುವ ಕಟ್ಟಡಗಳು, ಸಹಸ್ರ ಸಹಸ್ರ ವಿಧವೆಯರು ಮತ್ತು ಅನಾಥ ಮಕ್ಕಳನ್ನು. ಅಮೆರಿಕದ ದುರಾಕ್ರಮಣ ಇರಾಕಿನ ಸಾಮಾಜಿಕ ಜೀವನದ ಬುಡವನ್ನೇ ಅಲುಗಾಡಿಸಿದೆ. ಇರಾಕ್ ಒಂದು ರಾಷ್ಟ್ರವಾಗಿ ಉಳಿಯುವುದೇ ಸಂದೇಹವಾಗಿದೆ. ಷಿಯಾ, ಸುನ್ನಿ ಮತ್ತು ಖುರ್ದಿಶ್ ಜನಾಂಗಗಳ ಮಧ್ಯೆ ಇಷ್ಟು ದಿನಗಳವರೆಗಿದ್ದ ಒಂದು ಬಗೆಯ ಸಾಮರಸ್ಯ ಹೋಗಿ ಪರಸ್ಪರ ಕಚ್ಚಾಟ, ಬಡಿದಾಟ ಪ್ರಾರಂಭವಾಗಿದೆ.

ಇರಾಕಿನ ದುರಾಕ್ರಮಣದ ಕಾಲದಲ್ಲಿ ಅಮೆರಿಕದ ಸೈನಿಕರು ನಡೆಸಿದ ದೌರ್ಜನ್ಯಗಳು, ಖೈದಿಗಳ ಮೇಲೆ ನಡೆಸಿದ ಅತ್ಯಾಚಾರಗಳು ಜಗಜ್ಜಾಹೀರಾಗಿವೆ, ನಾಗರಿಕ ಜಗತ್ತು ತಲೆ ತಗ್ಗಿಸುವಂತೆ ಮಾಡಿದೆ. ಇಷ್ಟೆಲ್ಲ ಅನಾಹುತಗಳಾಗಿದ್ದಾಗ್ಯೂ ಅಮೆರಿಕ ತನ್ನ ನಡವಳಿಕೆಯನ್ನು ಸಮರ್ಥಿಸಿಕೊಳ್ಳುತ್ತಿರುವುದೀಗ ಖಂಡನೀಯ. ಇವೆಲ್ಲದಕ್ಕೂ ಅಮೆರಿಕದ ನಾಗರಿಕರ ತೆರಿಗೆ ಹಣ ಖರ್ಚಾಗಿರುವುದು ಸುಮಾರು ಒಂದು ಟ್ರಿಲಿಯನ್ ಡಾಲರುಗಳು ಎಂದು ಅಂದಾಜು ಮಾಡಲಾಗಿದೆ. ಒಂದು ಟ್ರಿಲಿಯನ್ ಎಂದರೆ ಒಂದು ಲಕ್ಷ ಕೋಟಿ.

---

**ಸೀಯಾರ್ಕೆ** , 'ಚೌಬೀನ', ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ, ೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂ-೮೫



# ದ್ವಾರಕನ ಬಂದೂಕು

ಒಂದಷ್ಟು ಗೌರವದಿಂದ ಹೇಳಿದರೂ ಸಹ, ದ್ವಾರಕ ಸೀದಾ-ಸಾದಾ ವ್ಯಕ್ತಿ ಎಂದು ಹೇಳಬಹುದಿತ್ತು. ಆದರೆ ಊರಿನವರೆಲ್ಲರೂ ಅವನನ್ನು ಪೆದ್ದ ಎಂದೇ ಕರೆಯುತ್ತಿದ್ದರು.

ಊರಿನ ಬಳಿಯೇ ಒಂದು ಕಂಪನಿಯು ಕಟ್ಟಡ ಕಟ್ಟುವ ಕೆಲಸವನ್ನು ಆರಂಭಿಸಿತ್ತು. ಅದು ದ್ವಾರಕನನ್ನು ಕೂಲಿ ಕೆಲಸದ ಮೇಲೆ ತೆಗೆದುಕೊಂಡಿತ್ತು. ಗ್ಯಾರಿಫೀಲ್ಡ್‌ರಿಗೆ ದ್ವಾರಕ ಬಹಳಷ್ಟು ಮೆಚ್ಚುಗೆಯಾಗಿದ್ದನು. ಅವರು ಅವನಿಗೆ ಬಂದೂಕು ಚಲಾಯಿಸುವುದನ್ನು ಕಲಿಸಿದ್ದರು. ಅಲ್ಲದೆ, ದ್ವಾರಕ ಅವರೊಂದಿಗೆ ಶಿಕಾರಿಗೆ ಹೋಗಬೇಕೆಂದೂ ಒತ್ತಾಯ ಮಾಡುತ್ತಿದ್ದರು. ಕೊನೆಗಂತೂ ಅವರು ದ್ವಾರಕನಿಗಾಗಿ ಒಂದು ಬಂದೂಕವನ್ನೂ ಕೊಂಡುಕೊಟ್ಟಿದ್ದರು ಮತ್ತು ಅದರ ಲೈಸೆನ್ಸ್ ಅನ್ನು ದ್ವಾರಕನ ಹೆಸರಿನಲ್ಲಿ ಮಾಡಿಸಿಕೊಟ್ಟಿದ್ದರು. ಬಂದೂಕು ಕೈಗೆ ಬರುತ್ತಿರುವಂತೆಯೇ ದ್ವಾರಕನ ಬದುಕಿನಲ್ಲಿ ವಿಶೇಷವಾದ ಬದಲಾವಣೆಗಳೇ ಆಗಿಬಿಟ್ಟವು. ಅಷ್ಟೇ ಅಲ್ಲ ಅವನ ಚಹರೆಯೂ ಬದಲಾಗಿಬಿಟ್ಟಿತ್ತು. ಯಾವಾಗಲೂ ಅವನು ಆ ಬಂದೂಕನ್ನು ತನ್ನ ಹೆಗಲ ಮೇಲೆ ಬಾವುಟದಂತೆ ಇರಿಸಿಕೊಂಡೇ ಓಡಾಡುತ್ತಿದ್ದನು.

ಗ್ಯಾರಿಫೀಲ್ಡರು ಒಳ್ಳೆಯ ಶಿಕಾರಿಯಾಗಿದ್ದರು ಮತ್ತು ಶಿಕಾರಿಯಲ್ಲಿ ಅವರಿಗೆ ಬಹಳಷ್ಟು ಆಸಕ್ತಿಯೂ ಇತ್ತು. ಈಗ ದ್ವಾರಕನ ಹತ್ತಿರ ಬಂದೂಕು ಇರುವುದರಿಂದ ಅವನು ಒಂದು ಹುಲಿ ಅಥವಾ ಕಾಡು ಹಂದಿ ಇಲ್ಲವೇ ಬೇರೆ ಯಾವುದಾದರೂ ಕಾಡುಪ್ರಾಣಿಯ ಶಿಕಾರಿಯನ್ನು ಮಾಡಿಯೇ ಮಾಡುತ್ತಾನೆ ಎಂದು ಗ್ಯಾರಿಫೀಲ್ಡ್ ನಂಬಿದ್ದರು. ಆದರೆ ಗುಂಡು ಹಾರಿಸುವ ಅವಕಾಶ ದೊರೆತಾಗಲೆಲ್ಲ ದ್ವಾರಕನ ಕೈಕಾಲುಗಳು ಊದಿಕೊಂಡುಬಿಡುತ್ತಿದ್ದವು ಮತ್ತು ಅವನು ವಿಚಿತ್ರವಾಗಿ ವರ್ತಿಸಲು ತೊಡಗುತ್ತಿದ್ದನು. ಯಾವುದಾದರೂ ಪ್ರಾಣಿ ಅವನ ಎದುರಿಗೆ ಬಂದರೆ ಸಾಕು ಅವನು ದಿಕ್ಕು ತೋಚದವನಂತೆ ನಿಂತುಬಿಡುತ್ತಿದ್ದನು.

ಒಂದು ದಿನ ಗ್ಯಾರಿಫೀಲ್ಡರು ಒಂದು ಮುಳ್ಳುಹಂದಿಯತ್ತ ಕೈ ತೋರಿಸಿ ಗುಂಡು ಹಾರಿಸುವಂತೆ ದ್ವಾರಕನಿಗೆ ಹೇಳಿದ್ದರು. ದ್ವಾರಕ ಸುಮ್ಮನೆ ಕೈ-ಕಾಲುಗಳನ್ನು ಕೊಡಹುತ್ತಿದ್ದನು. ಅಷ್ಟರಲ್ಲಿಯೇ ಮುಳ್ಳುಹಂದಿಯು ಅಲ್ಲಿಂದ ಪರಾರಿಯಾಗಿಬಿಟ್ಟಿತ್ತು. ದ್ವಾರಕನು ಅಂತಹ ಸಮಯಗಳಲ್ಲಿ ಬಂದೂಕನ್ನು ಹಿಡಿದುಕೊಳ್ಳುವುದನ್ನು ನೋಡಿ, ಇವನು ಯಾವುದಾದರೂ ಪ್ರಾಣಿಯನ್ನು ಸಾಯಿಸದೆ, ಮನುಷ್ಯನನ್ನು ಸಾಯಿಸುತ್ತಾನೆ ಎಂದು ಗ್ಯಾರಿಫೀಲ್ಡರಿಗೆ ಅನ್ನಿಸಿಬಿಟ್ಟಿತ್ತು. ತನ್ನ ಈ ಅನಿಸಿಕೆ ಒಂದು ದಿನ ನಿಜವಾಗುತ್ತದೆ ಎಂದು ಗ್ಯಾರಿಫೀಲ್ಡ್ ಅಂದುಕೊಂಡಿರಲೇ ಇಲ್ಲ!

ದ್ವಾರಕನು ಬಂದೂಕನ್ನು ಹೆಗಲ ಮೇಲೆ ಇರಿಸಿಕೊಂಡು ಅಡ್ಡಾಡುವುದನ್ನು



ಅಸ್ಸಾಮಿ ಭಾಷೆಯ ಲೇಖಕಿ ಇಂದಿರಾ ಗೋಸ್ವಾಮಿಯವರ ಕತೆ, ಕಾದಂಬರಿ, ಆತ್ಮಕತೆ ಮತ್ತು ಸಂಶೋಧನ ಗ್ರಂಥಗಳು ಪ್ರಕಟವಾಗಿವೆ. ವಿದ್ಯಾರ್ಥಿ ದೆಸೆಯಿಂದಲೇ ಸಾಹಿತ್ಯ ಚಟುವಟಿಕೆಗಳಲ್ಲಿ ತೊಡಗಿಕೊಂಡಿದ್ದವರು. ಮಹಿಳೆಯರು ಅನುಭವಿಸುವ ಕಷ್ಟ-ಕೋಟಲೆಗಳನ್ನು ಸಮರ್ಥವಾಗಿ ಚಿತ್ರಿಸಿದವರು. 'ಪದ್ಮಪ್ರಿಯ', 'ದಮಯಂತಿ', 'ತರಾದೋಯಿ', 'ದಿವಾನರ ಮಗಳು', 'ಆಯೀಮಾನಿ', 'ಊರ್ಮಿಳ' – ಇವರ ಕೃತಿಗಳಲ್ಲಿ ಕೆಲವು. ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ಅಸ್ಸಾಂ ಸಾಹಿತ್ಯ ಸಭಾ ಪುರಸ್ಕಾರ, ಜ್ಞಾನಪೀಠ ಪ್ರಶಸ್ತಿ ಪುರಸ್ಕೃತೆ'. ಕರ್ನಾಟಕದ ಸೊಸೆ.

ಪ್ರಸ್ತುತ 'ದ್ವಾರಕನ ಬಂದೂಕು' ಕತೆಯನ್ನು ಕಣ್ವ ಪ್ರತಿಷ್ಠಾನ ಪ್ರಕಟಿಸಿರುವ ಅವರ 'ಕೆಂಪುನದಿ' ಸಂಕಲನದಿಂದ ಆಯ್ದು 'ಹೊಸತು' ಓದುಗರಿಗಾಗಿ ಪ್ರಕಟಿಸಿದ್ದೇವೆ. ಈ ಕತೆಯನ್ನು ಜಿ. ಕುಮಾರಪ್ಪ ಹಿಂದಿಯಿಂದ ಅನುವಾದಿಸಿದ್ದಾರೆ. ಶ್ರೀಮತಿ. ಇಂದಿರಾ ಗೋಸ್ವಾಮಿಯವರು ೨೦೧೧ರ ನವೆಂಬರ್‌ನಲ್ಲಿ ತೀರಿಕೊಂಡರು. ಅವರಿಗೆ 'ಹೊಸತು' ಗೌರವಪೂರ್ವಕ ನಮನ ಸಲ್ಲಿಸುತ್ತದೆ.

ಅಸ್ಸಾಮಿ ಮೂಲ : **ಇಂದಿರಾ ಗೋಸ್ವಾಮಿ** * ಹಿಂದಿಯಿಂದ ಕನ್ನಡಕ್ಕೆ : **ಜಿ. ಕುಮಾರಪ್ಪ**

ನೋಡಿದಾಗಲೆಲ್ಲ ಊರಿನ ಹಿರಿಯರು, ದ್ವಾರಕನಂತಹ ಸೀದಾ-ಸಾದಾ ವ್ಯಕ್ತಿಗೆ ಇದು ಒಳ್ಳೆಯದಲ್ಲ ಎಂದೇ ಮಾತನಾಡಿಕೊಳ್ಳುತ್ತಿದ್ದರು. ದಂಡಕಾರಣ್ಯದಲ್ಲಿ ವಾಸಿಸುತ್ತಿದ್ದ ಋಷಿಗೆ ಇಂದ್ರನು ಎಚ್ಚರಿಕೆಯಿಂದ ಇರಿಸಿಕೊಳ್ಳಲು ಖಡ್ಗವನ್ನು ಕೊಟ್ಟ ಮೇಲೆ ಆ ಸಂನ್ಯಾಸಿಯು ಉದ್ದಂಡನಾದಂತೆಯೇ ಗ್ಯಾರಿಫೀಲ್ಡರ ಬಂದೂಕು ಪಡೆದು ದ್ವಾರಕನೂ ಸಹ ತರಲೆ ಮಾಡಬಹುದು ಎಂದು ಅವರಿಗೆ ಅನ್ನಿಸುತ್ತಿತ್ತು. ಉಳಿದವರು ಅವನ ಬಂದೂಕನ್ನು ಕುರಿತಂತೆ ಹಾಸ್ಯ ಮಾಡುತ್ತಿದ್ದರು. ಆದರೆ ಇದೆಲ್ಲದರಿಂದ ಅವನ ಮೇಲೆ ಯಾವುದೇ ಪರಿಣಾಮ ಉಂಟಾಗದೇ ಇದ್ದಾಗ ಅವರು ಆ ಬಗ್ಗೆ ಯೋಚಿಸುವುದನ್ನೇ ಬಿಟ್ಟುಬಿಟ್ಟರು.

ಬಹಳ ಕಾಲದಿಂದ ಗ್ಯಾರಿಫೀಲ್ಡರು ಅನಾರೋಗ್ಯ ಪೀಡಿತರಾಗಿದ್ದರು. ಅಲ್ಲದೆ ಅವರಿಗೆ ಸಾಕಷ್ಟು ವಯಸ್ಸೂ ಆಗಿತ್ತು. ಒಂದು ದಿನ ಅವರು ಕಂಪನಿಯ ಕ್ಯಾಂಪ್‌ನಲ್ಲಿ ತೀರಿಕೊಂಡರು. ಇದರಿಂದ ದ್ವಾರಕನಿಗೆ ಬಹಳಷ್ಟು ದುಃಖವಾಯಿತು. ಆದರೆ ಗ್ಯಾರಿಫೀಲ್ಡರ ಕೈಕೆಳಗಿನ ಇತರ ಕೆಲಸಗಾರರಿಗೆ ಅವರ ಸಾವಿನಿಂದ ಸಂತೋಷವೇ ಆಗಿತ್ತು. ಏಕೆಂದರೆ ಗ್ಯಾರಿಫೀಲ್ಡರು ಯಾವಾಗಲೂ ಸಿಡಿಮಿಡಿಗುಟ್ಟುವ ಸ್ವಭಾವದವರಾಗಿದ್ದರು ಮತ್ತು ಕಟ್ಟುನಿಟ್ಟಿನ ಮನುಷ್ಯರಾಗಿದ್ದರು. ತಮ್ಮ ಕೈಕೆಳಗಿನವರು ಮೈಮುರಿದು ಕೆಲಸ ಮಾಡುವಂತೆ ಮಾಡುತ್ತಿದ್ದರು. ಆದುದರಿಂದಲೇ ಅವರು ಬದುಕಿದ್ದಾಗ, ಅವರ ಕೈಕೆಳಗಿನ ಕೆಲಸಗಾರರು ಹೆದರಿದ ಬೆಕ್ಕಿನಂತೆ ಮುದುಡಿಕೊಂಡಿರುತ್ತಿದ್ದರು. ಈಗ ಗ್ಯಾರಿಫೀಲ್ಡರು ತೀರಿಕೊಂಡ ಮೇಲೆ ಅವರು ಕೆಲಸಕ್ಕಿಂತಲೂ ಹೆಚ್ಚಾಗಿ ಹರಟೆ ಹೊಡೆಯುತ್ತಾ ದ್ವಾರಕನನ್ನು ಕಿಚಾಯಿಸುತ್ತ ಸಮಯ ಕಳೆಯುತ್ತಿದ್ದರು. ಒಬ್ಬ ಕಿರಿಯ ಎಂಜಿನಿಯರ್‌ನಂತೂ ಗ್ಯಾರಿಫೀಲ್ಡರು ಕಲ್ಕತ್ತಾದಲ್ಲಿ ಇರುವ ವೇಶ್ಯೆಯರ ಎಲ್ಲ ಮನೆಗಳಿಗೆ ಭೇಟಿ ನೀಡಿ ಅವುಗಳನ್ನು ಪವಿತ್ರ ಮಾಡಿದ್ದಾರೆ ಎಂದು ಹೇಳಿಬಿಟ್ಟನು. ಇಂಜಿನಿಯರನ ಆ ಮಾತುಗಳನ್ನು ಕೇಳಿ ಎಲ್ಲರೂ ಜೋರಾಗಿ ನಕ್ಕುಬಿಟ್ಟರು. ಇದಕ್ಕಿಂತಲೂ ಒಳ್ಳೆಯ ಜೋಕು ಬೇರೆ ಯಾವುದೂ ಇಲ್ಲ ಎಂದು ಅವರು ಅಂದುಕೊಂಡಿದ್ದರು. ಗ್ಯಾರಿಫೀಲ್ಡರ ಬಗ್ಗೆ ಅವರು ಆಡುತ್ತಿದ್ದ ಮಸಾಲೆ ಮಾತುಗಳೂ ಅವರ ಕುಹಕ ನಗೆಯೂ ದ್ವಾರಕನಿಗೆ ಕೇಳಿಸಿದ್ದವು. ದ್ವಾರಕನ ಬುದ್ಧಿ ಹತ್ತಿ ಉರಿಯತೊಡಗಿತು. ತನ್ನ ಮಾಲೀಕ ತನಗೆ ಬಯ್ಯುವುದು, ಹೊಡೆಯುವುದು ಮಾಡುತ್ತಿದ್ದರು ನಿಜ. ಆದರೆ ಜೊತೆಗೆ ತನ್ನನ್ನ ಅವರು ಬಹಳವಾಗಿ ಪ್ರೀತಿಸುತ್ತಿದ್ದರು, ಗೌರವಿಸುತ್ತಿದ್ದರು ಎನ್ನುವುದು ದ್ವಾರಕನ ನೆನಪಿಗೆ ಬಂತು.

ದ್ವಾರಕನಿಗೆ ಕೋಪದಿಂದ ಮೈ ಉರಿಯತೊಡಗಿತು. 'ಈಗಿನ ಕಾಲದಲ್ಲಿ ಒಳ್ಳೆಯ ಜನರು ಸತ್ತರೆ, ಬೇರೆಯವರು ಅವರ ಹೆಣದೊಂದಿಗೇ ಅವರ ಒಳ್ಳೆಯತನಗಳನ್ನೂ ಹೂತುಹಾಕಿಬಿಡುತ್ತಾರೆ. ಆದರೆ ಮೊದಲೆಲ್ಲ ಹೀಗಿರಲಿಲ್ಲ. ಶ್ರೀರಾಮನಂತಹ ಮಹಾನ್ ವ್ಯಕ್ತಿಗಳೂ ಸಹ ಶಬರಿ ಮತ್ತು ನಿಷಾದರಂತಹ ಜನರನ್ನು ಪ್ರೀತಿಸುತ್ತಿದ್ದರು' ಎಂದುಕೊಂಡನು.

ಅವಹೇಳನಕಾರಿ ನಗೆ ಅವನಿಗೆ ಮತ್ತಷ್ಟು ಕೇಳಿಬರತೊಡಗಿತು. ಗೆಸ್ಟ್ ಹೌಸಿನಲ್ಲಿ ಬಿಯರ್ ಬಾಟಲಿ ನೆಲದ ಮೇಲೆ ಬಿದ್ದು ಒಡೆದ ಸದ್ದು ಕೇಳಿಸಿ, ಅವನು ಗೆಸ್ಟ್‌ಹೌಸಿನ ಒಳಗೆ ಹೋದವನೇ, ಅಲ್ಲಿದ್ದವರ ಮೇಲೆ ಎಗರಿಬಿದ್ದನು. ''ಅರೆ ಕತ್ತೆಗಳಾ, ನಿನ್ನೆ ಮೊನ್ನೆಯವರೆಗೆ ನೀವು ಅವರ ಎದುರಿನಲ್ಲಿ ನೆನೆದ ಬೆಕ್ಕಿನಂತೆ ಇರುತ್ತಿದ್ದಿರಿ. ಅವರು ಸತ್ತುಹೋಗುತ್ತಿರುವಂತೆಯೇ ನೀವು ಅವರ ಬಗ್ಗೆ ಇಲ್ಲಸಲ್ಲದ ಮಾತುಗಳನ್ನು ಆಡುತ್ತಿರುವಿರೇನು ? ನಿಮಗೆ ನಾಚಿಕೆಯಾಗುವುದಿಲ್ಲವೇನು ? ಮೂರ್ಖ ಜನರು !'' ಎನ್ನುತ್ತಾ ಅವರ ಪ್ರತಿಕ್ರಿಯೆಗೂ ಸಹ ಕಾಯದೆ, ಒಡೆದ ಬಾಟಲಿಯ ಚೂರುಗಳನ್ನು ಆಯತೊಡಗಿದನು.

ಆ ದಿನ ಸಂಜೆ ದ್ವಾರಕನು ಗೆಸ್ಟ್‌ಹೌಸಿನ ಹೊರಗೆ ಮೆಟ್ಟಿಲ ಮೇಲೆ ಕುಳಿತುಕೊಂಡಿದ್ದನು. ಹತ್ತಿರದಲ್ಲಿದ್ದ ಪೋಮಾ ಮರದ ಮೇಲೆ ಹಕ್ಕಿಗಳು ಚಿಲಿಪಿಲಿ ಗುಟ್ಟುತ್ತಿದ್ದುವು. ದ್ವಾರಕನಿಗೆ ಏಕಾಕಿತನ ಕಾಡತೊಡಗಿತು. ಜೊತೆಜೊತೆಗೆ ಗ್ಯಾರಿಫೀಲ್ಡರ ಜೊತೆಗೆ ಕಳೆದ ದಿನಗಳು ಅವನ ಮನಸ್ಸನ್ನು ಆವರಿಸಿದವು...

ಸಂಜೆಯಾದರೆ ಸಾಕು ಗ್ಯಾರಿಫೀಲ್ಡರು ಕುಡಿಯಲು ಕುಳಿತುಬಿಡುತ್ತಿದ್ದರು. ದ್ವಾರಕನು ಅವರ ಬಳಿ ಕುಳಿತು ಅವರು ವ್ಹಿಸ್ಕಿ ಕುಡಿಯುವುದನ್ನೇ ನೋಡುತ್ತಿದ್ದನು. ಕುಡಿಯುವಂತೆ ಗ್ಯಾರಿಫೀಲ್ಡ್ ಅವನಿಗೆ ಒತ್ತಾಯ ಮಾಡುತ್ತಿದ್ದರು. ''ಅರೆ ನೀನು ಯಾಕೆ ಕುಡಿಯುವುದಿಲ್ಲ? ಕುಡಿಯುವುದರಿಂದ ವ್ಯಕ್ತಿ ಒಳ್ಳೆಯವನಾಗುತ್ತಾನೆ'' ಎನ್ನುತ್ತಿದ್ದರು.

ದ್ವಾರಕನು ಪೆದ್ದ ನಗೆ ನಗುತ್ತಾ ''ಇಲ್ಲ ಸ್ವಾಮಿ, ಕುಡಿಯಬಾರದು ಎಂದು ನಮ್ಮ ಧರ್ಮದಲ್ಲಿ ಹೇಳಿದೆ. ನಮ್ಮ ಹಿರೀಕರೂ ಸಹ ಇದನ್ನೇ ನಂಬಿದ್ದರು. ನಾನು ನನ್ನ ಹಿರೀಕರಿಗೆ ಬಾಳ ಗೌರವ ಕೊಡ್ತೀನಿ'' ಎನ್ನುತ್ತಿದ್ದನು.

ಆಗೆಲ್ಲ ಗ್ಯಾರಿಫೀಲ್ಡರು ಅಧೀರರಾಗಿ ''ಸರಿ, ಸರಿ, ಕುಡೀಬೇಡ, ಸುಮ್ಮನೆ ನನ್ನ ಜೊತೆ ಕುಳಿತುಕೋ'' ಎನ್ನುತ್ತಿದ್ದರು.

ದ್ವಾರಕ ಅವರ ಬಳಿ ಕುಳಿತುಕೊಂಡು, ಪೆನ್ಸಿಲ್‌ನಿಂದ ಅಸ್ಸಾಮಿನ ಪ್ರಸಿದ್ಧ ಸಿನಿಮಾ ಹೀರೋ ಲಾಚಿತ್‌ನ ಚಿತ್ರ ಬಿಡಿಸತೊಡಗಿದ್ದನು. ದ್ವಾರಕನು ಲಾಚಿತ್‌ನ ಭಕ್ತನಾಗಿದ್ದನು. ಆದರೆ ಲಾಚಿತ್‌ನ ಚಹರೆ ಹೇಗಿದೆ ಎನ್ನುವುದು ಅವನಿಗೆ ತಿಳಿಯದು. ಅಲ್ಲದೆ ದ್ವಾರಕನಿಗೆ ಚಿತ್ರ ಬರೆಯಲುಬಾರದು. ಆದರೂ ತದೇಕಚಿತ್ತದಿಂದ ಚಿತ್ರ ಬಿಡಿಸುವಲ್ಲಿ ಮಗ್ನನಾಗಿದ್ದನು.

ತನ್ನ ಒಡೆಯರ ಅನೇಕ ಒಳ್ಳೆಯ ಗುಣಗಳು ದ್ವಾರಕನ ನೆನಪಿಗೆ ಬಂದವು. ಒಮ್ಮೆ ಒಬ್ಬ ಕಂತ್ರಾಟುದಾರನು ಅವನ ಒಡೆಯನ ಬಳಿ ಯಾವುದೋ ಕೋರಿಕೆಯನ್ನು ತೆಗೆದುಕೊಂಡು ಬಂದಿದ್ದನು. ಅವನ ಜೊತೆಯಲ್ಲಿ ಅವನ ದೂರದ ಸಂಬಂಧಿಕರಾದ ಇಬ್ಬರು ಸುಂದರವಾದ ತಂಗಿಯರೂ ಬಂದಿದ್ದರು. ಅವರಿಬ್ಬರು ತೊಟ್ಟಿದ್ದ ಬಟ್ಟೆಗಳು ಅವರ ದೇಹವನ್ನು ಮುಚ್ಚುವುದಕ್ಕಿಂತಲೂ ಹೆಚ್ಚಾಗಿ ಬಿಚ್ಚಿ ತೋರಿಸುತ್ತಿದ್ದವು. ಆದರೆ ಗ್ಯಾರಿಫೀಲ್ಡರು ಸ್ವಲ್ಪವೂ ವಿಚಲಿತರಾಗಲಿಲ್ಲ. ಅವರು ಇಷ್ಟಪಟ್ಟಿದ್ದಲ್ಲಿ ಆ ಇಬ್ಬರು ಹುಡುಗಿಯರಲ್ಲಿ ಒಬ್ಬಳನ್ನಾದರೂ ತನ್ನ ವೃದ್ಧಾಪ್ಯದ ಬದುಕಿನ ಜೊತೆಗಾತಿಯನ್ನಾಗಿ ಮಾಡಿಕೊಳ್ಳಬಹುದಿತ್ತು... ಅವರು ಹಾಗೆ ಮಾಡುವರೆಂದು ದ್ವಾರಕನೂ ಯೋಚಿಸಿದ್ದನು.

ಭೋಲುಕಾಡೂಬಾದಲ್ಲಿ ಕೆಲಸ ಮುಗಿದಿದ್ದ ಕಾರಣ ಕಂಪನಿಯು ಶಿಬಿರವನ್ನು ಉತ್ತರ ಅಸ್ಸಾಮಿಗೆ ವರ್ಗಾಯಿಸಿತು. ದ್ವಾರಕನು ಇಷ್ಟಪಟ್ಟಿದ್ದಲ್ಲಿ ಅವನು ಅಲ್ಲಿಗೆ ಹೋಗಬಹುದಿತ್ತು. ಆದರೆ ಗ್ಯಾರಿಫೀಲ್ಡರಿಲ್ಲದ ಕಂಪನಿಯಲ್ಲಿ ಕೆಲಸ ಮಾಡಲು ಅವನಿಗೆ ಮನಸ್ಸಿರಲಿಲ್ಲ. ಹೀಗಾಗಿ ಅವನು ತನ್ನ ತಮ್ಮನಿಗೆ ಒಂದು ಭಾರವಾಗಿ, ಚಿವಕ ಮರದ ಕೆಳಗೆ ಸುಮ್ಮನೆ ಕುಳಿತುಕೊಂಡಿರುತ್ತಿದ್ದನು. ಆಗೆಲ್ಲ ಅವನ ಬಂದೂಕು ಅವನ ಹತ್ತಿರವೇ ಇರುತ್ತಿತ್ತು. ಅವನನ್ನು ಹಾದು ಹೋಗುವವರೆಲ್ಲರೂ ಅವನ ಸೋಮಾರಿತನವನ್ನು ಕುರಿತು ವ್ಯಂಗ್ಯವಾಗಿ ಮಾತನಾಡುತ್ತಿದ್ದರು. ಆದರೆ ಅವನು ಆ ಬಗ್ಗೆ ತಲೆ ಕೆಡಿಸಿಕೊಳ್ಳುತ್ತಿರಲಿಲ್ಲ

ದ್ವಾರಕ ಊರಿನಲ್ಲಿದ್ದ ಒಬ್ಬ ವೃದ್ಧ ದಿವಾನರೊಂದಿಗೆ ಪರಿಚಯ ಬೆಳೆಸಿಕೊಂಡಿದ್ದನು. ಆ ದಿವಾನರ ಹಿರೀಕರು ಅಸ್ಸಾಮಿನ ರಾಜರ ಬಳಿ ದೊಡ್ಡ ದೊಡ್ಡ ಹುದ್ದೆಯಲ್ಲಿ ಇದ್ದವರು. ನಿಧಾನವಾಗಿ ದ್ವಾರಕನು ಅವರ ಮನೆಗೆ ಹೋಗುವುದು ಬರುವುದು ಮಾಡತೊಡಗಿದನು. ಇದನ್ನು ಕುರಿತು ಹಳ್ಳಿಯವರು ಕುಚೋದ್ಯದ ಮಾತುಗಳನ್ನು ಆಡತೊಡಗಿದ್ದರು. ಅವರ ಕುಚೋದ್ಯದ ಮಾತುಗಳಿಗೆ ಮುಖ್ಯ ಕಾರಣ ದಿವಾನರ ಸುಂದರ ಮಗಳಾಗಿದ್ದಳು. ಹಳ್ಳಿಯ ಬಹಳಷ್ಟು ಹುಡುಗರು ಆಕೆಯ ಮೇಲೆ ಕಣ್ಣಿಟ್ಟಿದ್ದರು. ವೃದ್ಧರಿಗೆ ತಮ್ಮ ಕುಟುಂಬದ ಹಿರಿಮೆಯ ಬಗ್ಗೆ ಬಹಳ ಹೆಮ್ಮೆ ಇತ್ತು. ಆದರೆ, ಅಪ್ಪನಾಗಿ ಅವರು ಬಹಳ ಕಟ್ಟುನಿಟ್ಟಿನವರಾಗಿದ್ದರು. ಅವರ ಮಗಳು ಎಲ್ಲರಿಗಿಂತಲೂ ಬೇರೆಯಾಗಿ, ರಹಸ್ಯಮಯ ರೀತಿಯಲ್ಲಿ, ಯಾವಾಗಲೂ ತನ್ನ ಕೊಠಡಿಯಲ್ಲಿ ಬಾಗಿಲು ಹಾಕಿಕೊಂಡು ಇರುತ್ತಿದ್ದಳು. ನದಿಗೆ ನೀರು ತರಲು ಹೋದಾಗ ಮಾತ್ರ ಆಕೆ ಜನರ ಕಣ್ಣಿಗೆ ಬೀಳುತ್ತಿದ್ದಳು. ಅವಳನ್ನು ನೋಡಿ ದ್ವಾರಕನೂ ಸಹ ಒಮ್ಮೊಮ್ಮೆ ದಂಗಾಗಿಬಿಡುತ್ತಿದ್ದನು. ಸೂರ್ಯನ ಕಿರಣವೊಂದು ಕೆಳಗೆ ಇಳಿದು ಬಂದು ನದಿಯಲ್ಲಿ ಮುಳುಗು ಹಾಕುತ್ತಿದೆಯೇನೋ ಎಂದು ಅವನಿಗೆ ಅನ್ನಿಸುತ್ತಿತ್ತು.

ನಿಧಾನವಾಗಿ ದ್ವಾರಕ ಹೆಚ್ಚು ಹೆಚ್ಚು ಕಿರಿಕಿರಿಯ ಮತ್ತು ಉದ್ದಂಡ ವರ್ತನೆ ತೋರಿಸತೊಡಗಿದನು. ದ್ವಾರಕನ ತಲೆಯಲ್ಲಿ ಯಾವಾಗಲೂ ಬಂದೂಕು ತುಂಬಿಕೊಂಡಿರುತ್ತದೆ ಎಂದು ಹಳ್ಳಿಗರು ಗಾಳಿಸುದ್ದಿ ಹಬ್ಬಿಸಿಬಿಟ್ಟಿದ್ದರು. ಒಂದು ದಿನ ಇದ್ದಕ್ಕಿದ್ದಂತೆಯೇ ದಿವಾನರು ದ್ವಾರಕನ ಬಳಿಗೆ ಬಂದು ''ಅರೆ ನನಗೆ ಬಹಳ ಅನ್ಯಾಯವಾಗಿಬಿಟ್ಟಿದೆ. ನನಗೇಕೆ ದೇವರು ಇಂತಹ ಕಷ್ಟ ಕೊಟ್ಟಿದ್ದಾನೋ ತಿಳಿಯದು. ದ್ವಾರಕಾ ನೀನು ನನಗೆ ಸಹಾಯ ಮಾಡಲೇಬೇಕು. ನನ್ನ ಹೆಸರಿಗೆ ಮಸಿ ಹತ್ತುವುದು ನಿನಗೆ ಇಷ್ಟವಿಲ್ಲ ತಾನೇ ?... ನನ್ನ ಮಗಳು ನಿನಗೆ ಗೊತ್ತು ತಾನೆ ?'' ಎಂದರು.

ಒಂದು ಕ್ಷಣ ದ್ವಾರಕ ಸುಮ್ಮನಾಗಿಬಿಟ್ಟನು. ಅವರ ಮಗಳನ್ನು ಅವನೆಂದೂ ನೋಡಿಯೇ ಇಲ್ಲವೇನೋ ಎನ್ನುವಂತೆ. ನಂತರ ''ಹೂಂ, ಹೇಳಿರಿ. ನಾನು ಏನು ಮಾಡಬೇಕೆನ್ನುವುದನ್ನು ಕೆಲವೇ ಮಾತುಗಳಲ್ಲಿ ಹೇಳಿರಿ'' ಎಂದನು.

ದಿವಾನರು ಎತ್ತಲೋ ನೋಡುತ್ತಿರುವವರಂತೆ ನೋಡುತ್ತಾ ''ನನ್ನ ಮಗಳು ಯಾವುದೋ ಕೆಳಜಾತಿಯವನ ಪ್ರೇಮದಲ್ಲಿ ಸಿಲುಕಿದ್ದಾಳೆ ಎಂದು ನನಗೆ ಇದೇ ತಾನೇ ಗೊತ್ತಾಯಿತು. ಆ ಬದ್ಮಾಶನು ಹೇಗೋ ಏನೋ ನನ್ನ ಮಗಳನ್ನು ವಶ ಮಾಡಿಕೊಂಡು ಬಿಟ್ಟಿದ್ದಾನೆ. ದಟ್ಟ ಕಾಡಿನ ಒಂದು ಕಡೆ ಅವರಿಬ್ಬರೂ ಸೇರುತ್ತಿರುತ್ತಾರೆ. ನಾನು ನಿನಗೆ ಆ ಜಾಗ ತೋರಿಸುತ್ತೇನೆ. ನೀನು ಒಮ್ಮೆ ಆ ಬಡ್ಡಿಮಗನಿಗೆ ಸರಿಯಾದ ಪಾಠ ಕಲಿಸಬೇಕು'' ಎಂದರು.

ಹೀಗೆ ಹೇಳುತ್ತಿರುವಾಗ ದಿವಾನರ ಮುಖದಲ್ಲಿ ಹೇಸಿಗೆಯ ಭಾವನೆಯ ಜೊತೆ ಜೊತೆಗೆ ಭೀತಿಯೂ ಸಹ ಇಣುಕಿ ಹಾಕಿತ್ತು. ನಂತರ ಅವರು ಮಾತನ್ನು ಮುಂದುವರೆಸಿ, ತಮ್ಮ ಕಾರ್ಯ ಯೋಜನೆಯನ್ನು ವಿವರಿಸಿದರು. ''ಮುಂದಿನ ಸಾರಿ ಅವರಿಬ್ಬರು ಭೇಟಿಯಾದಾಗ ನೀನು ಅಲ್ಲಿದ್ದು ಆ ಹುಡುಗನ ಎದೆಗೆ ನಿನ್ನ ಬಂದೂಕಿನಿಂದ ಗುರಿ ಇಡು. ಇದರಿಂದ ಅವನು ಸರಿಯಾದ ದಾರಿಗೆ ಬರುತ್ತಾನೆ. ನಿನಗೆ ಕಾಡಿನ ಆ ಭಾಗ ಗೊತ್ತು ತಾನೇ ? ಅದು ಕಾಜಿರಂಗ ಮತ್ತು ಮನಸ ಕಾಡು ಗಳಿಗಿಂತಲೂ ಭಯಂಕರವಾದುದಾಗಿದೆ. ನಿನ್ನ ಬಗ್ಗೆ ಯಾರಿಗೂ ಗೊತ್ತಾಗುವುದಿಲ್ಲ ಮುಂದೆ ಉಳಿದುದನ್ನು ನಾನು ನೋಡಿಕೊಳ್ಳುತ್ತೇನೆ'' ಎಂದರು.

ದ್ವಾರಕನಿಗೆ ಮನಸ್ಸಿನಲ್ಲಿಯೇ ಬಹಳ ಆನಂದವಾಯಿತು. ಅದು ನಸುನಗೆಯ ರೂಪದಲ್ಲಿ ಅವನ ಮುಖದ ಮೇಲೆ ಹರಡಿತು. ಅವನು ತನ್ನ ಎರಡೂ ಕೈಗಳನ್ನು ಉಜ್ಜಿಕೊಂಡನು. ಬಂದೂಕು ತನಗೆ ದೊರೆತಾಗಿನಿಂದಲೂ ಯಾರನ್ನೂ ಸಾಯಿಸುವ ಅವಕಾಶ ಅವನಿಗೆ ದೊರೆತಿರಲಿಲ್ಲ. ಆದರೆ ಈ ಅವಕಾಶ ಈಗ ತಂತಾನೇ ಅವನ ಬಳಿಗೆ ಬಂದಿದೆ.

ದ್ವಾರಕನ ಮುಖದ ಮೇಲೆ ಆಗುತ್ತಿದ್ದ ಬದಲಾವಣೆಗಳನ್ನು ಕಾಣುತ್ತಿರುವಂತೆಯೇ ದಿವಾನರಿಗೆ ಒಂದಿಷ್ಟು ಗಲಿಬಿಲಿ ಉಂಟಾಯಿತು. ''ನೋಡು ಅವನನ್ನು ಸಾಯಿಸಬೇಡ. ಒಂದಿಷ್ಟು ಗಾಯ ಮಾಡಿದರೆ ಸಾಕು. ಇದರಿಂದ ನಮ್ಮ ಕೆಲಸ ಆಗುತ್ತದೆ'' ಎಂದರು.

ದ್ವಾರಕ ಏನನ್ನೂ ಹೇಳಲಿಲ್ಲ. ಸುಮ್ಮನೆ ನಸುನಗುತ್ತಾ ನಿಂತಿದ್ದನು.

ಈ ಮಾತುಗಳಾದ ಕೆಲದಿನಗಳ ನಂತರ, ಒಂದು ದಿನ ದ್ವಾರಕ ತನ್ನ ಹಾಸಿಗೆಯ ಮೇಲೆ ಕುಳಿತುಕೊಂಡಿದ್ದನು. ಹೊರಗೆ ಜೋರಾಗಿ ಮಳೆ ಬೀಳುತ್ತಿತ್ತು. ಇಂತಹ ಮಳೆ ಅಸ್ಸಾಮಿನಲ್ಲಿ ಬೀಳುತ್ತಲೇ ಇರುತ್ತದೆ – ಮಳೆಯ ಸದ್ದು ಅವನಿಗೆ ಖುಷಿ ನೀಡುತ್ತಿತ್ತು. ಆ ಕಡೆ ದಡ ಮೀರಿ ಹರಿಯುತ್ತಿದ್ದ ನದಿಯ ಭೋರ್ಗರೆಯುವ ಸದ್ದೂ ಸಹ ಅವನಿಗೆ ಅಷ್ಟೇ ಖುಷಿ ನೀಡುತ್ತಿತ್ತು. ಬಿರು ಬೇಸಿಗೆಯ ಬಿಸಿಲಿನಿಂದ ಪಾರಾಗಿ ಒಯಸಿಸ್ಸಿನಲ್ಲಿ ಕುಳಿತಿರುವಂತೆ ಅವನಿಗೆ ಅನ್ನಿಸುತ್ತಿತ್ತು. ಅವನೀಗ ಒಳ್ಳೆಯ ಲಹರಿಯಲ್ಲಿದ್ದನು. ಇಂತಹ ಲಹರಿ ಇತ್ತೀಚಿನ ದಿನಗಳಲ್ಲಿ ಕಡಿಮೆಯಾಗಿತ್ತು. ಇದೇ ಲಹರಿ ಇನ್ನೂ ಸ್ವಲ್ಪ ಕಾಲ ಮುಂದುವರೆದರೆ ತಾನೊಬ್ಬ ಸಂತನೇ ಆಗಿಬಿಡುತ್ತೇನೆ ಎಂದು ಅವನು ಅಂದುಕೊಳ್ಳುತ್ತಿದ್ದನು.

ಹೀಗೆ ಯೋಚಿಸುತ್ತಿರುವಾಗಲೇ ಅವನು ಹಾಸಿಗೆಯ ಮೇಲೆ ತನ್ನ ಪಕ್ಕದಲ್ಲಿ ಇರಿಸಿಕೊಂಡಿದ್ದ ಬಂದೂಕನ್ನು ಸವರುತ್ತಿದ್ದನು. ಹೊರಗೆ ಬಿರುಗಾಳಿ ಇನ್ನಷ್ಟು ರಭಸವಾಗಿ ಬೀಸತೊಡಗಿತು. ಅದೇ ಸಮಯಕ್ಕೆ ತಟ್ಟನೆ ಬಾಗಿಲನ್ನು ತೆರೆದುಕೊಂಡು, ಗಾಳಿ ಹಾಗೂ ಮಳೆ ಹನಿಗಳ ಜೊತೆ ಜೊತೆಗೆ ಒಬ್ಬ ಯುವತಿ ಕೊಠಡಿಯೊಳಕ್ಕೆ ಬಂದಳು. ಆಕೆಯ ನೆನೆದ ಬಟ್ಟೆಗಳು ಯೌವನ ತುಂಬಿದ್ದ ಆಕೆಯ ಮೈಗೆ ಅಂಟಿಕೊಂಡಿದ್ದವು. ಆಕೆ ಒಳಗೆ ಬರುತ್ತಿರುವಂತೆಯೇ ಕಬ್ಬನ್ನು ಅರೆಯುವಾಗ ಹೊರಬರುವ ಮೋಹಕ ಸುವಾಸನೆಯು ಕೊಠಡಿಯಲ್ಲಿ ಹರಡಿಕೊಂಡಿತು. ಆಕೆ ದಿವಾನರ ಮಗಳಾಗಿದ್ದಳು.

ದ್ವಾರಕ ಸ್ತಂಭಿಸಿ, ಸುಮ್ಮನೆ ಅವಳನ್ನೇ ನೋಡತೊಡಗಿದನು.

ಆಕೆ ತನ್ನ ಶಕ್ತಿಯನ್ನೆಲ್ಲ ಬಳಸಿ ಜೋರು ಜೋರಾಗಿ ಮಾತನಾಡತೊಡಗಿದಳು. ಆಕೆ ಏದುಸಿರು ಬಿಡುತ್ತಿದ್ದಳು. ಜೊತೆಗೆ ಸಣ್ಣಗೆ ನಡುಗುತ್ತಿದ್ದಳು. ''ಅಪ್ಪಾಜಿ ಈ ದಿನ ಹೊರಗೆ ಹೋಗಿದ್ದಾರೆ. ಆದುದರಿಂದಲೇ ಈ ಭಾರೀ ಮಳೆಗಾಳಿಗಳಲ್ಲಿ ನಾನು ಇಲ್ಲಿಗೆ ಬರಲು ಸಾಧ್ಯವಾಗಿದೆ. ಆ ದಿನ ಅಪ್ಪಾಜಿ ನಿನಗೆ ಹೇಳಿದ ಮಾತುಗಳೆಲ್ಲವನ್ನೂ ನಾನು ಕೇಳಿಸಿಕೊಂಡಿದ್ದೇನೆ. ನೀನು ನನ್ನ ಗೆಳೆಯನನ್ನು ಸಾಯಿಸಿದರೆ ನಿನಗೆ ಏನೂ ಸಿಗುವುದಿಲ್ಲ. ಈಗಲೇ ಹೇಳಿರುತ್ತೇನೆ. ಹುಷಾರು ! ಹಾಗೇನಾದರೂ ಮಾಡಿದಲ್ಲಿ ನಾನು ನಿನ್ನ ಮೇಲೆ ಪ್ರತೀಕಾರ ತೀರಿಸಿಕೋಬೇಕಾಗುತ್ತೆ, ನೆನಪಿನಲ್ಲಿರಿಸಿಕೋ'' ಎಂದಳು.

ಆಕೆಯ ಆವೇಗ ಹಾಗೂ ಸಿಟ್ಟಿನಿಂದ ಕೂಡಿದ ಮಾತುಗಳನ್ನು ಕೇಳಿ, ದ್ವಾರಕ ಗರ ಬಡಿದವನಂತೆ ಕುಳಿತುಬಿಟ್ಟನು. ಅವನ ಬಾಯಿಂದ ಒಂದು ಶಬ್ದವೂ ಹೊರಬೀಳಲಿಲ್ಲ

ಇದ್ದಕ್ಕಿದ್ದಂತೆ ಆ ಯುವತಿಯ ಕಣ್ಣುಗಳಲ್ಲಿ ಕಣ್ಣೀರು ತುಂಬಿಕೊಂಡಿತು. ಕಣ್ಣನ್ನು ಒರೆಸಿಕೊಳ್ಳುತ್ತಾ ಆಕೆ ಮೆಲ್ಲಗೆ ''ಯಾವತ್ತಾದರೂ ನೀವು ಪ್ರೀತಿಯ ಅನುಭವ ಪಡೆದಿದ್ದೀರೇನು ?'' ಎಂದು ಕೇಳಿದಳು.

ದ್ವಾರಕನಿಗೆ ಏನು ಹೇಳಬೇಕೆನ್ನುವುದೇ ತಿಳಿಯುತ್ತಿಲ್ಲ. ''ಹೇಳಿ, ನನ್ನಿಂದ ನಿಮಗೆ



# ಮಿಗಿಲು ನನ್ನಮ್ಮ

ಕೋಗಿಲೆ ಕಂಠಕ್ಕಿಂತ
ಮುರಳಿ ಗಾನಕ್ಕಿಂತ
ಸಂಗೀತದ ಆಲಾಪಕ್ಕಿಂತ
ಭಾವಲಹರಿ ನನ್ನಮ್ಮ

ಜೋಗದ ಜಿಗಿಯುವಿಕೆಗಿಂತ
ನಯಾಗರದ ನೆಗೆಯುವಿಕೆಗಿಂತ
ಬಣ್ಣಬಣ್ಣದ ಕಾರಂಜಿಗಿಂತ
ಜಲಧಾರೆ ನನ್ನಮ್ಮ

ನಿಸರ್ಗ ಸೌಂದರ್ಯಕ್ಕಿಂತ
ಬೇಲೂರ ಶಿಲ್ಪಕ್ಕಿಂತ
ಮೈಸೂರ ಕಲೆಗಿಂತ
ಸುಂದರ ನನ್ನಮ್ಮ

ಮಲೆನಾಡಿನ ಮಲೆಗಳಿಗಿಂತ
ಸಪ್ತಗಿರಿಗಳಿಗಿಂತ
ಹಿಮಾಲಯ ಪರ್ವತಗಳಿಗಿಂತ
ಉನ್ನತ ನನ್ನಮ್ಮ

ಗೆಳೆಯರ ಸ್ನೇಹಕ್ಕಿಂತ
ಪ್ರಿಯತಮೆ ಮುತ್ತಿಗಿಂತ
ಮಗುವಿನ ಅಪ್ಪುಗೆಗಿಂತ
ಪ್ರೀತಿ ನನ್ನಮ್ಮ

ವಜ್ರದ ಗಟ್ಟಿಗಿಂತ
ಬಂಗಾರದ ಮೃದುಗಿಂತ
ಮುತ್ತಿನ ಹೊಳಪಿಗಿಂತ
ಶಕ್ತಿ ನನ್ನಮ್ಮ

**ಹೂ**ಗಳ ಪರಿಮಳಕ್ಕಿಂತ
ಗಂಧದ ಕಂಪಿಗಿಂತ
ಉಸಿರಾಡುವ ತಂಗಾಳಿಗಿಂತ
ಆಹ್ಲಾದ ನನ್ನಮ್ಮ

ಜೇನಿನ ಸಿಹಿಗಿಂತ
ಸಮುದ್ರದ ಉಪ್ಪಿಗಿಂತ
ಅಮೃತದ ರುಚಿಗಿಂತ
ಸ್ವಾದ ನನ್ನಮ್ಮ

ಹಾರುವ ಹಕ್ಕಿಗಿಂತ
ಓಡುವ ಜಿಂಕೆಗಿಂತ
ಈಜುವ ಮೀನಿಗಿಂತ
ಉತ್ಸಾಹಿ ನನ್ನಮ್ಮ

ಗಂಗಾ ಮಾತೆಗಿಂತ
ಕಾವೇರಿ ತಾಯಿಗಿಂತ
ಎಲ್ಲಾ ನದಿಗಳಿಗಿಂತ
ಜೀವನದಿ ನನ್ನಮ್ಮ

ಮಿನುಗುವ ನಕ್ಷತ್ರಕ್ಕಿಂತ
ಬೆಳದಿಂಗಳ ಚಂದ್ರನಿಗಿಂತ
ಬೆಳಗುವ ಸೂರ್ಯನಿಗಿಂತ
ಕೇತನ ನನ್ನಮ್ಮ

ಗುಡಿಯ ಮೂರ್ತಿಗಿಂತ
ಕರ್ಪೂರದ ಆರತಿಗಿಂತ
ತುಳಸಿಯ ತೀರ್ಥಕ್ಕಿಂತ
ಪವಿತ್ರೆ ನನ್ನಮ್ಮ

**ಕಮಲಂ ಅರಸು**, ೧೧, ೧೦ನೇ ಅಡ್ಡರಸ್ತೆ ೩ನೇ ಬಡಾವಣೆ, ತ್ಯಾಗರಾಜನಗರ, ಬೆಂಗಳೂರು - ೫೬೦ ೦೨೮

ಏನಾಗಬೇಕಾಗಿದೆ ? ನೀವು ಹೇಳಿದಂತೆಯೇ ಮಾಡುತ್ತೇನೆ. ಆದರೆ ಒಂದು ಷರತ್ತು, ನನಗೂ ಒಮ್ಮೆ ಆ ಪ್ರೀತಿಯ ಅನುಭವ ಮಾಡಿಕೊಡಬೇಕು'' ಎಂದನು.

ಯುವತಿ ಗಲಿಬಿಲಿಗೊಂಡಳು. ನಂತರ ''ಏನು ? ನೀವು ಹೇಳುತ್ತಿರುವುದೇನು ? ನಿಮ್ಮ ಮಾತಿನ ಅರ್ಥವೇನು ? ನಿಮ್ಮ ಮಾತುಗಳು ನನಗೆ ಅರ್ಥವಾಗುತ್ತಿಲ್ಲ'' ಎಂದಳು.

ಆ ಹೊತ್ತಿಗಾಗಲೇ ಆಕೆಯು ಅವನ ಮುಖಚಹರೆಯನ್ನು ಅರ್ಥಮಾಡಿಕೊಂಡಳು. ತಾನು ಒಂದು ವಿಷದ ನಾಗರದ ಎದುರಿನಲ್ಲಿ ನಿಂತುಕೊಂಡಿದ್ದೇನೆ ಎಂದುಕೊಂಡಳು. ಅವಳ ಎದೆ ಢವಗುಟ್ಟತೊಡಗಿತು. ಅವನ ಈ ದೃಷ್ಟಿಯಿಂದ ತಪ್ಪಿಸಿಕೊಳ್ಳಬೇಕು ಎಂದುಕೊಂಡಳು. ಒದ್ದೆಯಾಗಿದ್ದ ತನ್ನ ಸೀರೆಯನ್ನು ಸರಿಪಡಿಸಿಕೊಂಡವಳೇ ಬಂದಂತೆಯೇ ವೇಗವಾಗಿ ಆ ಬಿರುಗಾಳಿ ಬಿರುಮಳೆಯಲ್ಲಿ ಮರೆಯಾದಳು.

ಮಾರನೆಯ ದಿನ ಬೆಳಗಾಗುತ್ತಿರುವಂತೆಯೇ, ದ್ವಾರಕನು ಎಂದಿನಂತೆಯೇ ಬಂದೂಕನ್ನು ತನ್ನ ಹೆಗಲ ಮೇಲೆ ಇರಿಸಿಕೊಂಡು ಸಾಲ ಮರಗಳ ಕಾಡಿನತ್ತ ಹೆಜ್ಜೆ ಹಾಕಿದನು. ಆ ಕಾಡನ್ನು ಅವನು ಚೆನ್ನಾಗಿ ತಿಳಿದಿದ್ದನು. ಆ ಹೊತ್ತಿಗಾಗಲೇ ಮಳೆ ನಿಂತಿತ್ತು. ಆದರೂ ಸಾಲ ಮರದ ಅಗಲವಾದ ಎಲೆಗಳಿಂದ ನೀರು ತೊಟ್ಟಿಕ್ಕುತ್ತಿತ್ತು. ಕಾಡಿನೊಳಗಿನ ನೆಲದೊಳಗಿನಿಂದ ಆವಿ ಮೇಲೇಳುತ್ತಿದ್ದುದರಿಂದ ಮಸುಕು ಮುಸುಕಿತ್ತು. ಅವನು ಅಶಾಂತಿಯಿಂದ ತಳಮಳಿಸುತ್ತಿದ್ದನು. ಇಡೀ ದಿನ ಏನನ್ನೂ ತಿನ್ನದೆ ಕಾಡಿನಲ್ಲಿ ಸುಮ್ಮನೆ ಅಲೆಯುತ್ತಿದ್ದು, ಸಂಜೆಗತ್ತಲು ಇಳಿದು ಬರುತ್ತಿರುವುದನ್ನು ಕಂಡನು.

ಇದ್ದಕ್ಕಿದ್ದಂತೆಯೇ ಇಳಿದು ಬರುತ್ತಿದ್ದ ಸಂಜೆಗತ್ತಲಲ್ಲಿ ಬೆಂಕಿಯ ಕಿಡಿಗಳಂತೆ ಹೊಳೆಯುತ್ತಿದ್ದ ಎರಡು ಕಣ್ಣುಗಳು ಕಾಣಿಸಿದವು. ಅವು ಅಶುಭ ಸೂಚನೆಯ ಹುಡು ಹಕ್ಕಿಯ ಕಣ್ಣುಗಳು ಎನ್ನುವುದು ಕೂಡಲೇ ಅವನಿಗೆ ಅರ್ಥವಾಯಿತು. ಕೂಡಲೇ ಅವನು ತನ್ನ ಬಂದೂಕನ್ನು ಎತ್ತಿಕೊಂಡವನೇ ಆ ಎರಡು ಕಣ್ಣುಗಳ ನಡುವೆ ಗುರಿ ಇಟ್ಟು ಗುಂಡು ಹಾರಿಸಿದನು. ಹಕ್ಕಿ ದೊಪ್ಪನೆ ಕೆಳಗೆ ಬಿತ್ತು. ಆಗಲೇ ಅದರ ಪ್ರಾಣಪಕ್ಷಿ ಹಾರಿ ಹೋಗಿತ್ತು. ದ್ವಾರಕನಿಗೆ ರೋಮಾಂಚನವಾಯಿತು. ಕೊನೆಗೂ ಅವನು ಶಿಕಾರಿ ಮಾಡಿದ್ದನು. ಅವನಲ್ಲಿ ಹೊಸ ಶಕ್ತಿಯ ಸಂಚಾರವಾಗಿತ್ತು. ಇನ್ನಷ್ಟು ಪಕ್ಷಿಗಳಿಗಾಗಿ ಹುಡುಕುತ್ತಾ ಅವನು ಕಾಡಿನಲ್ಲಿ ಮತ್ತಷ್ಟು ಅಲೆದನು. ಆದರೆ ಬೇರೆ ಯಾವ ಪಕ್ಷಿಯೂ ಅವನಿಗೆ ಸಿಗಲಿಲ್ಲ.

ಮಾರನೆಯ ದಿನ ಅವನು ಸೂರ್ಯ ಮುಳುಗುವವರೆಗೂ ಕಾಡಿನಲ್ಲಿ ಅಲೆಯುತ್ತಿದ್ದನು. ಸಂಜೆಯ ನಸುಬೆಳಕಿನಲ್ಲಿ ಅವನು ಹೆಜ್ಜೆ ಹಾಕುತ್ತಾ ದಿವಾನರು ಹೇಳಿದ್ದ ಕಾಡಿನ ಜಾಗಕ್ಕೆ ಬಂದನು. ಆ ಭಾಗದಲ್ಲಿ ಕಾಚಿಡರಿಯಾ ಹುಲ್ಲು ದಟ್ಟವಾಗಿ ಬೆಳೆದುಕೊಂಡಿತ್ತು. ಇದು ಕವುಜಗ ಪಕ್ಷಿಗಳಿಗೆ ಬಹಳ ಪ್ರಿಯವಾದ ಜಾಗವಾಗಿತ್ತು. ದ್ವಾರಕನು ಮೆಲ್ಲಗೆ ಹೆಜ್ಜೆ ಹಾಕುತ್ತಾ ದಟ್ಟವಾದ ಹುಲ್ಲಿನ ಜಾಗದ ಇನ್ನೊಂದು ಬದಿಗೆ ಹೋಗಿ, ಹಸಿದ ಹುಲಿಯಂತೆ ಬಾಗಿ ಕುಳಿತುಕೊಂಡನು. ಸ್ವಲ್ಪ ಹೊತ್ತಿನಲ್ಲಿಯೇ ಸುಮಾರು ಇಪ್ಪತ್ತು ವರ್ಷ ವಯಸ್ಸಿನ ಒಬ್ಬ ಹುಡುಗ ಅಲ್ಲಿಗೆ ಬಂದನು.

ದಿವಾನರು ಹೇಳಿದ್ದ ಅವರ ಮಗಳ ಪ್ರಿಯತಮ ಇವನೇ ಎನ್ನುವುದು ಅವನಿಗೆ ಅರ್ಥವಾಗಿ ಬಿಟ್ಟಿತು. ಬಹಳ ಹೊತ್ತಿನವರೆಗೆ ಅವನು ರೆಪ್ಪೆ ಮಿಟುಕಿಸದೆ ಆ ಹುಡುಗನನ್ನೇ ನೋಡತೊಡಗಿದನು. 'ಇವನೇ ಅಲ್ಲವೆ ಅವನು... ನನ್ನ ಎದುರಿಗೇ ನಿಂತಿದ್ದಾನೆ... ನನ್ನ ಬದುಕಿನ ಇಪ್ಪತ್ತು ವರ್ಷಗಳು, ಆ ಇಪ್ಪತ್ತು ವರ್ಷಗಳನ್ನು ನಾನು ಸುಮ್ಮನೆ ಹಾಳು ಮಾಡಿಬಿಟ್ಟಿದ್ದೇನೆ. ಅವು ಮತ್ತೆ ಎಂದೂ ಮರಳಿ ಬರಲಾರವು. ಕಳೆದುಹೋಗಿರುವ ಯೌವ್ವನ ಇದೇ. ಇಲ್ಲಿಯೇ... ನನ್ನ ಎದುರಿನಲ್ಲಿಯೇ ನಿಂತಿದೆ...' ಎಂದು ಯೋಚಿಸತೊಡಗಿದನು.

ತಾನು ಬಂದೂಕನ್ನು ಹಾಕಿಕೊಳ್ಳುತ್ತಿದ್ದ ಹೆಗಲಿನಲ್ಲಿ ಸಣ್ಣಗೆ ನೋವು ಕಾಣಿಸಿಕೊಳ್ಳುತ್ತಿದೆ ಎನ್ನಿಸಿತು. ತನ್ನ ಕೆನ್ನೆಗಳು ಇಳಿಬಿದ್ದಿವೆ ಎನ್ನಿಸಿತು. ತನಗೆ ಈಗಾಗಲೇ ವಯಸ್ಸಾಗಿದೆ ಎಂದೂ ಅಂದುಕೊಂಡನು. ಹೀಗೆ ಯೋಚಿಸುತ್ತಲೇ ಅವನ ಇಡೀ ದೇಹ ತಣ್ಣಗಾಯಿತು. ಆ ಸುಂದರ ಯುವತಿಯ ಕಣ್ಣುಗಳಲ್ಲಿನ ಭೀತಿ ಮತ್ತು ತಿರಸ್ಕಾರ ಅವನ ಕಣ್ಣ ಮುಂದೆ ಬಂದವು. ತನ್ನೊಳಗಿನ ಯಾವುದೋ ಅಸಹಾಯಕತೆಯಿಂದ ಎನ್ನುವಂತೆ, ದ್ವಾರಕನು ಯಂತ್ರದಂತೆ ತನ್ನ ಹೆಗಲಮೇಲಿದ್ದ ಬಂದೂಕನ್ನು ಎತ್ತಿಕೊಂಡವನೇ ಗುರಿ ಇರಿಸಿ ಎರಡು ಗುಂಡು ಹಾರಿಸಿದನು. ಹುಡುಗನು ಬುಡಕಡಿದ ಮರದಂತೆ ದೊಪ್ಪನೆ ಕೆಳಗೆ ಬಿದ್ದುದನ್ನು ನೋಡಿದನು. ತಾನು ಆ ಹುಡುಗನನ್ನು ಸಾಯಿಸಿದ್ದೇನೆ ಎಂದು ದ್ವಾರಕನಿಗೆ ಅನ್ನಿಸಿತು.

ದ್ವಾರಕನನ್ನು ಸೆರೆ ಹಿಡಿಯಲಾಯಿತು. ಅವನಿಗೆ ಹದಿನೈದು ವರ್ಷಗಳ ಸಶ್ರಮ ಜೈಲುವಾಸದ ಶಿಕ್ಷೆಯೂ ಆಯಿತು. ಅವನು ಜೈಲಿನಲ್ಲಿ ಇರುವಾಗಲೇ ಅವನ ತಮ್ಮನ ಮದುವೆಯಾಯಿತು. ಅವನ ಮಲತಮ್ಮನು ದ್ವಾರಕನ ಬಗ್ಗೆ ಸಾಸುವೆಯಷ್ಟೂ ಯೋಚನೆ ಮಾಡುತ್ತಿರಲಿಲ್ಲ. ಆದರೆ ಅವನ ಹೆಂಡತಿ ಬಹಳ ಒಳ್ಳೆಯವಳಾಗಿದ್ದಳು. ಅವಳು ಆಗಿಂದಾಗ್ಗೆ ಜೈಲಿಗೆ ಬಂದು ಅವನ ಬಗ್ಗೆ, ಅವನ ಒಬ್ಬಂಟಿತನದ ಬಗ್ಗೆ ದುಃಖ ವ್ಯಕ್ತಪಡಿಸುತ್ತಿದ್ದಳು. ಅವನಿಗಾಗಿ ರುಚಿಕಟ್ಟಾದ ಅಡುಗೆಯನ್ನು ಮಾಡಿಕೊಂಡು ಬರುತ್ತಿದ್ದಳು ಮತ್ತು ಅವನೊಂದಿಗೆ ಪ್ರೀತಿಯಿಂದ ಮಾತನಾಡುತ್ತಿದ್ದಳು. ಅವಳ ವರ್ತನೆ ದ್ವಾರಕನಲ್ಲಿ ಮತ್ತೆ ಬದುಕುವ ಆಸೆಯನ್ನು ಹುಟ್ಟಿಸಿತು. ಜೈಲಿನ ಸಲಾಕೆಗಳು ತನ್ನನ್ನ ಜೀವನವಿಡೀ ಹಿಡಿದಿಡುವುದಿಲ್ಲ ಎನ್ನುವುದು ಅವನಿಗೆ ತಿಳಿದಿತ್ತು. ದಿವಾನರ ಮಗಳ ನೆನಪೂ ಸಹ ಬರುತ್ತಿತ್ತು. ಅದೇ ತಾನೇ ಹಿಂಡಿದ ಕಬ್ಬಿನ ಹಾಲಿನ ಸುವಾಸನೆ ಅವನನ್ನು ಹುಚ್ಚನನ್ನಾಗಿಸುತ್ತಿತ್ತು.

ಅವನು ಪದೇ ಪದೇ ತನ್ನ ತಮ್ಮನ ಹೆಂಡತಿಯ ಬಗ್ಗೆ ಯೋಚಿಸತೊಡಗಿದನು. ಅವನ ಬಗ್ಗೆ ಅವಳಿಗೆ ಏಕೆ ಇಷ್ಟೊಂದು ಆಕರ್ಷಣೆ ? ಆಕೆಗೆ ಕೊಡುವಂತಹ ವಸ್ತು ಅವನಲ್ಲಿ ಏನಿದೆ ? ಜಮೀನೇ, ಮನೆಯೇ, ಹಸು-ಕರುಗಳೇ ? ಸತ್ತ ಮೇಲೆ ಅವಳಿಗಾಗಿ ಅವನು ಏನನ್ನು ಬಿಟ್ಟುಹೋಗುವನು ? ಆದಾಗ್ಯೂ ಅವನನ್ನು ನೋಡಲು ಆಕೆ ಜೈಲಿಗೆ ಪದೇ ಪದೇ ಏಕೆ ಬರುತ್ತಿದ್ದಾಳೆ ? ಬಹುಶಃ ಗಾಢ ಪ್ರೀತಿಯೇ ಈ ಅದ್ಭುತ ಭಾವನೆಯ ಹಿನ್ನೆಲೆಯಾಗಿರಬೇಕು.

ಅವನಲ್ಲಿ ಖುಷಿಯ ಅಲೆಗಳು ಏಳಲಾರಂಭಿಸಿದ್ದವು. ಅದರ ಜೊತೆ ಜೊತೆಗೇ ನೋವೂ ಸಹ. ತನ್ನ ಬಂದೂಕನ್ನು ಸವರಲು ಅವನ ಕೈ ಮುಂದಾಯಿತು. ಆದರೆ ಅಲ್ಲಿ ಏನೂ ಇರಲಿಲ್ಲ. ಕೇವಲ ಖಾಲಿ ಜಾಗ. ಪಂಜರದಲ್ಲಿ ಹಿಡಿದಿಟ್ಟಿರುವ ಪಕ್ಷಿಯಂತೆ ತಾನು ಜೈಲಿನ ಈ ಸಲಾಕೆಗಳ ಹಿಂದೆ ಇರುವುದಾಗಿ ಅವನು ಭಾವಿಸಿದನು. ತನ್ನ ಈ ಪರಿಸ್ಥಿತಿಗಾಗಿ ಅವನಿಗೇ ದುಃಖವೆನ್ನಿಸಿತು.

ಕೆಲವು ವರ್ಷಗಳ ನಂತರ ಗಾಂಧೀಜಿಯವರ ಜನ್ಮಶತಾಬ್ಧಿಯ ಸಂದರ್ಭದಲ್ಲಿ ಬಹಳಷ್ಟು ಖೈದಿಗಳಿಗೆ ಕ್ಷಮಾದಾನ ನೀಡಲಾಯಿತು. ದ್ವಾರಕನಿಗೂ ಸಹ ಕ್ಷಮಾದಾನ ದೊರೆತು, ಅವನು ಜೈಲಿನಿಂದ ಹೊರಗೆ ಬಂದನು. ಹೊರಗೆ ಬಂದವನೇ ತನ್ನ ತಮ್ಮನ ಜಮೀನಿನಲ್ಲಿದ್ದ ಒಂದು ಹಳೆಯ ಮುರುಕು ಝೋಪಡಿಯಲ್ಲಿ ವಾಸ ಮಾಡ ತೊಡಗಿದನು. ಅವನ ಪ್ರೀತಿಯ ಬಂದೂಕು ಅವನ ಹೆಗಲಿಗೇರಿತು. ಆ ಬಂದೂಕನ್ನು ಸರಕಾರದಿಂದ ವಾಪಾಸು ಪಡೆಯುವುದು ದ್ವಾರಕನಿಗೆ ಸುಲಭವಾಗಿರಲಿಲ್ಲ. ಇದಕ್ಕಾಗಿ ಅವನು ಬಹಳಷ್ಟು ಕಷ್ಟಪಡಬೇಕಾಯಿತು. ಈಗ ಅದನ್ನು ತನ್ನ ಹೆಗಲ ಮೇಲೆ ಇರಿಸಿಕೊಂಡು ಅವನು ಹಳ್ಳಿ-ಹಳ್ಳಿಗಳನ್ನು ಸುತ್ತತೊಡಗಿದನು. ಆದರೆ ಹಳ್ಳಿಯ ಜನರು ಈಗ ಅವನ ಬಗ್ಗೆ ಗಮನ ಕೊಡುತ್ತಲೇ ಇರಲಿಲ್ಲ. ಅಷ್ಟೇ ಅಲ್ಲ, ದಾರಿಯಲ್ಲಿ ಅವನು ಎದುರಿಗೆ ಬಂದರೆ ಅದೊಂದು ಅಪಶಕುನ ಎಂದು ಅವರು ಭಾವಿಸುತ್ತಿದ್ದರು.

ಈ ಕಡೆ ವೃದ್ಧ ದಿವಾನರು ತಮ್ಮ ಮಗಳನ್ನು ಒಳ್ಳೆಯ ಶ್ರೀಮಂತ ಮನೆತನದ ಹುಡುಗನಿಗೆ ಮದುವೆ ಮಾಡಿಕೊಟ್ಟಿದ್ದರು. ನಂತರದ ಸ್ವಲ್ಪ ದಿನಗಳಲ್ಲಿಯೇ ಅವರು ಮರಣವನ್ನಪ್ಪಿದ್ದರು. ಬಹಳ ದಿನಗಳ ನಂತರ ಮೊದಲನೆಯ ಹೆರಿಗೆಗಾಗಿ ಆಕೆ ತವರು ಮನೆಗೆ ಬಂದಿದ್ದಳು. ಒಂದು ದಿನ ದ್ವಾರಕ ಅವಳನ್ನು ನೋಡಿದನು. ಅವಳನ್ನು ನೋಡುತ್ತಲೇ ಹಳೆಯ ನೆನಪುಗಳು ಅವನನ್ನು ಕಾಡತೊಡಗಿದವು. ತನ್ನ ಹಿಂದಿನ ಎಲ್ಲ ಭಾನಗಡಿಗಳನ್ನು ಅವಳು ಕ್ಷಮಿಸಿದ್ದಾಳೆಯೇ ಇಲ್ಲವೇ ಎಂದು ಅವಳನ್ನು ಅವನು ಕೇಳಬಯಸಿದ್ದನು. ಆದರೆ ಆಕೆ ಈಗ ನೀರು ತರಲು ನದಿಗೆ ಬರುತ್ತಿಲ್ಲ. ಹೀಗಾಗಿ ಅವಳನ್ನು ಭೇಟಿಯಾಗಲು ಅವನಿಗೆ ಸಾಧ್ಯವಾಗಲಿಲ್ಲ.

ಆದರೆ ಅಂತಹ ಒಂದು ಅವಕಾಶ ಅವನಿಗೆ ದೊರೆಯಿತು. ಒಂದು ದಿನ ಆಕೆ ತನ್ನ ಗೆಳತಿಯರ ಜೊತೆಯಲ್ಲಿ ತನ್ನ ಮನೆಯಿಂದ ಹೊರಗೆ ಬರುತ್ತಿರುವುದನ್ನು ಅವನು ನೋಡಿದನು. ಅವರು ನಗುತ್ತಾ, ಹರಟೆ ಹೊಡೆಯುತ್ತಾ ನಡೆದು ಹೋಗುತ್ತಿದ್ದರು. ಆಕೆಯನ್ನು ನೋಡುತ್ತಲೇ ದ್ವಾರಕನು ಆ ಹುಡುಗಿಯರ ಹಿಂದೆ ಹೆಜ್ಜೆ ಹಾಕ ತೊಡಗಿದನು. ಸ್ವಲ್ಪ ಹೊತ್ತಿನಲ್ಲಿಯೇ ದ್ವಾರಕನು ತಮ್ಮನ್ನು ಹಿಂಬಾಲಿಸುತ್ತಿರುವುದನ್ನು ಆ ಹುಡುಗಿಯರು ನೋಡಿದರು. ಕೂಡಲೆ ಅವರು ಹೆದರಿ, ದಾಪುಗಾಲು ಹಾಕತೊಡಗಿದರು. ಅವರೊಂದಿಗೆ ಹೆಜ್ಜೆ ಹಾಕಲಾಗದ ದಿವಾನರ ಮಗಳು ಒಂಟಿಯಾದಳು. ದ್ವಾರಕನನ್ನು ನೋಡಿ ಆಕೆ ತಟ್ಟನೆ ನಿಂತುಬಿಟ್ಟಳು.

''ನೀವು ನನ್ನನ್ನು ಕ್ಷಮಿಸಿದ್ದೀರೇನು ?...'' ಎಂದು ದ್ವಾರಕನು ತೊದಲಿದನು.

ಆ ತರುಣಿಯ ಕಣ್ಣುಗಳಲ್ಲಿ ಕ್ಷಣ ಹೊತ್ತು ದ್ವೇಷ ಹತ್ತಿ ಉರಿಯಿತು. ಆದರೆ ಮರುಕ್ಷಣದಲ್ಲಿಯೇ, ''ನೀನು ಮಾಡಿದುದು ಕೊನೆಯಲ್ಲಿ ನನಗೆ ಒಳ್ಳೆಯದೇ ಆಯಿತು'' ಎನ್ನುತ್ತಾ ತನ್ನ ಉಬ್ಬಿದ್ದ ಹೊಟ್ಟೆಯನ್ನು ಸವರಿಕೊಳ್ಳುತ್ತಾ, ''ನನ್ನ ಮಗ ಬಹಳ ಸುಖದಿಂದ ಇರುತ್ತಾನೆ. ಅವನ ಬಳಿ ಸಾಕಷ್ಟು ದುಡ್ಡು-ಕಾಸು ಇರುತ್ತದೆ'' ಎಂದಳು.

ಕೂಡಲೆ ದ್ವಾರಕನು ಬಂದೂಕನ್ನು ಮುಂದಕ್ಕೆ ಚಾಚುತ್ತ, ಕಿರಿಕಿರಿಯಿಂದ, ''ಹಾಗಾದ್ರೆ ಈ ಬಂದೂಕು ನನಗೆ ಅನಿಷ್ಟವಾಗಿದೆ ಎಂದು ನೀವು ಯೋಚಿಸುತ್ತಾ ಇಲ್ಲವೇನು ?'' ಎಂದನು.

ಆ ಯುವತಿಯೂ ಸಹ ಕೈ ಚಾಚಿ, ತನ್ನ ಕೋಮಲ ಬೆರಳುಗಳಿಂದ ಆ ಬಂದೂಕವನ್ನು ಪ್ರೀತಿಯಿಂದ ಸವರಿದಳು. ನಂತರ ಇದ್ದಕ್ಕಿದ್ದಂತೆಯೇ ಆ ಬಂದೂಕಿನಿಂದ ಕರೆಂಟ್ ಹೊಡೆಯಿತೇನೋ ಎನ್ನುವಂತೆ ತಟ್ಟನೆ ಕೈಯನ್ನು ಹಿಂದಕ್ಕೆ ತೆಗೆದುಕೊಂಡಳು. ನೋಡನೋಡುತ್ತಿರುವಂತೆಯೇ ಅವಳು ಬೇರೊಂದು ಮನೋಸ್ಥಿತಿಯನ್ನು ಹೊಂದಿದವಳಂತೆ ಕೋಪದಿಂದ, ''ಏಯ್ ಹರಾಮಿ ! ಇಲಿಗಳ ರೀತಿಯಲ್ಲಿ ಆ ಜೈಲಿನಲ್ಲಿ ಏಕೆ ಕೊಳೆಯುತ್ತಾ ಇಲ್ಲ. ಅಲ್ಲೇ ಯಾಕೆ ನಿನ್ನ ಸಮಾಧಿ ಆಗಲಿಲ್ಲ'' ಎಂದು ಚೀರಿದಳು.

ಹಾಗೆ ಚೀರಿದವಳೇ ಜೋರಾಗಿ ಅಳುತ್ತಾ, ಹಿಂದಕ್ಕೆ ತಿರುಗಿ ದಾಪುಗಾಲು ಹಾಕುತ್ತಾ ಹೋಗಿ ತನ್ನ ಗೆಳತಿಯರನ್ನು ಸೇರಿಕೊಂಡಳು.

...ದ್ವಾರಕ ಹಳೆಯ ಮರದ ಕೆಳಗೆ ತನ್ನ ಎಂದಿನ ಜಾಗದಲ್ಲಿ ಕುಳಿತಿದ್ದನು. ಅಲ್ಲಿಯೇ ಕುಳಿತುಕೊಂಡು ಶೂನ್ಯದತ್ತ ನಿಟ್ಟಿಸಿ ನೋಡುತ್ತಿದ್ದನು. ಮಧ್ಯಾಹ್ನ ಅವನು ಊಟಕ್ಕೆ ಬಾರದೆ ಇದ್ದಾಗ ಅವನ ತಮ್ಮನ ಹೆಂಡತಿ ಚಿಂತೆಯಿಂದ ಅವನನ್ನು ಹುಡುಕಿಕೊಂಡು ಅಲ್ಲಿಗೆ ಬಂದಳು. ಅವನನ್ನು ಕಾಣುತ್ತಲೇ ಚಿಂತೆಯಿಂದ ಮುಕ್ತಳಾದವಳಂತೆ ತನ್ನ ಎದೆಯ ಮೇಲೆ ಕೈ ಇರಿಸಿಕೊಂಡಳು. ಆಕೆಯ ಎದೆ ಡವಡವನೆ ಬಡಿದುಕೊಳ್ಳುತ್ತಿತ್ತು. ಆಕೆ ಹೆದರಿಬಿಟ್ಟಿದ್ದಳು. ಮೆಲ್ಲಗೆ ಬಂದವಳೇ ಬಹಳಷ್ಟು ಮೆಲುದನಿಯಲ್ಲಿ, ''ಓಹ್ ನೀನು ಅಲ್ಲಿಗೆ ಹೋಗಿದ್ದೆ ಮತ್ತು ಆಕೆಯನ್ನು ಭೇಟಿಯಾಗಿದ್ದೆ ಅಲ್ಲವೇ ?'' ಎಂದು ಕೇಳಿದಳು.

ದ್ವಾರಕ ತಲೆಯಲ್ಲಾಡಿಸುತ್ತ ಮೆಲ್ಲಗಿನ ದನಿಯಲ್ಲಿ ''ಹೂಂ'' ಎಂದನು.



ಅಸ್ಸಾಮಿ ಮೂಲ : ಇಂದಿರಾ ಗೋಸ್ವಾಮಿ
ಹಿಂದಿಯಿಂದ ಕನ್ನಡಕ್ಕೆ : ಜಿ. ಕುಮಾರಪ್ಪ
ಪಿ-೮, ಅರ್ಕೆಡಿಯಾ ಎಕ್ಸ್‌ಟೆನ್ಷನ್,
ಬೆಹಾಲಾ, ಕೋಲ್ಕತಾ - ೭೦೦ ೦೩೪




# ಗ್ರಾಮೀಣ ಬದುಕನ್ನು ದಾಖಲಿಸುವ ಮಿತ್ರಾ ವೆಂಕಟ್ರಾಜರ ಪಾಚಿ ಕಟ್ಟಿದ ಪಾಗಾರ



ಪುಟಗಳು : ೩೮೪ ಬೆಲೆ : ರೂ. ೨೫೦

ಲೇಖಕರು
**ಮಿತ್ರಾ ವೆಂಕಟ್ರಾಜ**

ಪ್ರಕಾಶನ
**ಮನೋಹರ ಗ್ರಂಥ ಮಾಲಾ**
ಲಕ್ಷ್ಮೀಭವನ, ಸುಭಾಸ ರೋಡ
ಧಾರವಾಡ - ೫೮೦ ೦೦೧

**ಮ**ಹಿಳೆಯರ ಸಾಹಿತ್ಯವನ್ನು ಅಡುಗೆ ಮನೆ ಸಾಹಿತ್ಯ ಎಂದು ಜಗತ್ತಿನಾದ್ಯಂತ ಪುರುಷರು ಟೀಕಿಸುತ್ತ ಬಂದಿದ್ದಾರೆ. ಅದು ಹೌದೆನ್ನುವಂತೆ ತೀರಾ ಲಘು ಶೈಲಿಯ, ಪ್ರೀತಿ-ಪ್ರೇಮ ಮದುವೆ-ಸಂಸಾರಗಳೆಂಬ ಚರ್ವಿತ-ಚರ್ವಣ ವಸ್ತುಗಳುಳ್ಳ ಮಹಿಳಾ ಕಾದಂಬರಿಗಳು ಎಲ್ಲ ಭಾಷೆಗಳಲ್ಲೂ ಹೇರಳವಾಗಿ ಬಂದಿವೆ. ಹಾಗೆಂದು ಎಚ್. ವಿ. ಸಾವಿತ್ರಮ್ಮ, ತ್ರಿವೇಣಿ, ಅನುಪಮಾ ನಿರಂಜನ, ಎಂ. ಕೆ. ಇಂದಿರಾ ಅವರಂಥ - ಮಹಿಳಾ ಶಿಕ್ಷಣ, ನಗರದ ಬದುಕು, ಕುಟುಂಬ ಜೀವನದಲ್ಲಾದ ಬದಲಾವಣೆಗಳು ಮುಂತಾದ ಗಂಭೀರ ಕಥಾವಸ್ತುಗಳನ್ನು ಆಯ್ದುಕೊಂಡು ಕಾದಂಬರಿಗಳನ್ನು ರಚಿಸಿದ ಲೇಖಕಿಯರೂ ಇಲ್ಲವೆಂದಿಲ್ಲ. ಮನೆಯ ಒಳಗೂ ಹೊರಗೂ ದುಡಿದು ಹೈರಾಣಾಗುವ ಮಹಿಳೆಗೆ ಬರೆಯುವ ಪ್ರತಿಭೆ-ಸಾಮರ್ಥ್ಯಗಳಿದ್ದರೂ ಒಂದೆಡೆ ಪೂರ್ತಿ ನಿಶ್ಚಿಂತಳಾಗಿ ಬರೆಯುವ ಸಮಯಾವಕಾಶವಾಗಲಿ, ಮನಃಸ್ಥಿತಿಯಾಗಲಿ ಆಕೆಗೆ ಸಿಗುವುದಿಲ್ಲವೆನ್ನುವುದು ಇದಕ್ಕೆ ಕಾರಣ. ಮಹಿಳೆಗೆ ಸಿಕ್ಕಿದೆಯೆಂದು ನಂಬಲಾಗುವ ಸ್ವಾತಂತ್ರ್ಯದ ಹೊರತಾಗಿಯೂ ಮುಂದುವರಿಯುತ್ತಿರುವ ಲಿಂಗತಾರತಮ್ಯವೇ ಮಹಿಳಾ ಸಾಹಿತ್ಯ ರಚನೆಗೆ ಅಡ್ಡಿಯಾಗಿ ನಿಲ್ಲುತ್ತಿದೆ. ಆದರೂ ಕಾಲಕ್ಕೆ ತಕ್ಕಂತೆ ಆಧುನಿಕೋತ್ತರ ಶೈಲಿಯಲ್ಲಿ ಪುರಾಣಗಳ ಮರು ಓದು, ಗ್ರಾಮೀಣ ಬದುಕು, ದಲಿತ ಶೋಷಣೆ, ಮಹಿಳಾ ಶೋಷಣೆ, ಜನಪದರ ಬದುಕು – ಹೀಗೆ ಹಿಂದಿನ ಸಾಹಿತ್ಯವು ಗಮನಿಸದೇ ಇದ್ದ ಅಂಶಗಳನ್ನು ವಸ್ತುವಾಗಿ ತೆಗೆದುಕೊಂಡು ವೈದೇಹಿ, ಗೀತಾ ನಾಗಭೂಷಣ, ಎಚ್. ನಾಗವೇಣಿ ಮುಂತಾದವರು ಕಾದಂಬರಿಗಳನ್ನು ಬರೆದಿದ್ದಾರೆ. ಈ ಸಾಲಿಗೆ ಇತ್ತೀಚೆಗೆ ಸೇರ್ಪಡೆಯಾಗಿರುವ ಮಹತ್ವದ ಕಾದಂಬರಿ ಮುಂಬಯಿನ ಮಿತ್ರಾ ವೆಂಕಟ್ರಾಜರ 'ಪಾಚಿ ಕಟ್ಟಿದ ಪಾಗಾರ.'

ಕಥಾ ವಸ್ತುವಿಗಾಗಿ ಮಿತ್ರಾ ಅವರು ತಮ್ಮ ಕಣ್ಣ ಮುಂದಿರುವ ಥಳಕು ಬಳುಕಿನ ಮಹಾನಗರವನ್ನು ಬಿಟ್ಟು, ದಶಕಗಳ ಹಿಂದಿನ ದಕ್ಷಿಣ ಕನ್ನಡದ ಗ್ರಾಮೀಣ ಬದುಕಿನತ್ತ ಕಣ್ಣುಹಾಯಿಸುತ್ತಾರೆ. ಬಾಲ್ಯದ ಅನುಭವಗಳತ್ತ ಜಾರುತ್ತಾರೆ. ಅವರ ಸಮೃದ್ಧವಾದ ನೆನಪುಗಳು ಹಳ್ಳಿಯ ಚಿತ್ರಗಳನ್ನು ಕಣ್ಣಿಗೆ ಕಟ್ಟುವ ಹಾಗೆ ಕಟ್ಟಿಕೊಡುತ್ತವೆ.

ಕಥೆಯ ನಿರೂಪಣೆಗೆ ಶಿಷ್ಟ ಕನ್ನಡವನ್ನು, ಸಂಭಾಷಣೆಗಳಿಗೆ ಬಂಟ್ವಾಳದಲ್ಲಿ ನೆಲೆಸಿರುವ ಕೋಟ ಬ್ರಾಹ್ಮಣರ ಭಾಷೆ ಮತ್ತು ತುಳು ಭಾಷೆಗಳನ್ನು ಅವರು ಬಳಸುತ್ತಾರೆ. ವೈದೇಹಿಯವರೂ ತಮ್ಮ ಕೆಲವು ಕಥೆಗಳಲ್ಲಿ ಈ ಭಾಷೆಯನ್ನು ಬಳಸಿಕೊಂಡಿದ್ದಾರೆ.

ಕಥೆ ಪ್ರಾರಂಭವಾಗುವುದು ಅಸಹಾಯಕ ಹೆಣ್ಣುಮಗಳು ಪಾರಳ ಮದುವೆಯ ಸಮಸ್ಯೆಯಿಂದಾದರೂ, ಮುಖ್ಯಪಾತ್ರಗಳ ಪ್ರವೇಶವಾಗುವುದು ಕೆಮ್ಮಾಡಿ ಮನೆಯ ಉಲ್ಲೇಖವಾದ ನಂತರ. ಸುತ್ತ ಮುತ್ತಿನಲ್ಲೆಲ್ಲ ದೊಡ್ಡಮನೆ ಎಂದು ಹೆಸರು ಹೋದ (ಪು.೧೧) ಕೆಮ್ಮಾಡಿ ಮನೆಯ ವೈಭವ, ಅಲ್ಲಿನ ಯಜಮಾನ ಕೃಷ್ಣದೇವರಾಯರು, ಯಜಮಾನಿತಿ ಲಕ್ಷ್ಮೀದೇವಮ್ಮ, ಮನೆಗೆಲಸದವರು, ಆಳುಕಾಳುಗಳನ್ನು ಹೊಂದಿದ ಭವ್ಯ ಜಗತ್ತು ಇಲ್ಲಿ ವರ್ಣಿತವಾಗಿದೆ. ಶಿಸ್ತು-ಸನ್ನಡತೆಗಳಿಗೆ ಹೆಸರಾದ ಮನೆತನ ಅವರದು. ತಮ್ಮ ಧೈರ್ಯ, ಶಿಸ್ತು, ಸಾಮರ್ಥ್ಯ, ಜವಾಬ್ದಾರಿಯ ಪ್ರಜ್ಞೆಗಳ ಮೂಲಕ ಪತಿಯ ಮರಣಾನಂತರ ಮಗ ದೊಡ್ಡವನಾಗುವ ತನಕವೂ ಅಷ್ಟು ದೊಡ್ಡ ಆಸ್ತಿಯ ವ್ಯವಹಾರಗಳನ್ನು ಏಕಾಂಗಿಯಾಗಿ ನಡೆಸಿದವರು ಕೃಷ್ಣದೇವರಾಯರ ತಾಯಿ ಸೀತಮ್ಮ. ಆದರೆ ಕೃಷ್ಣದೇವರಾಯರ ಮಗ ಮಾಧವ ತಂದೆಯ ಸ್ವಭಾವಕ್ಕೆ ತದ್ವಿರುದ್ಧವಾಗಿ ಬೆಳೆಯುತ್ತಾನೆ. ಮೆಟ್ರಿಕ್ ಮುಗಿಸಿ ಮುಂದೆ ಓದಲೆಂದು ದೂರಹೋದವನು, ಪದವಿಗೆ ಬದಲಾಗಿ ಕೆಟ್ಟ ಚಟಗಳನ್ನೂ, ಸೊಕ್ಕು-ದರ್ಪ-ಅಹಂಕಾರ-ಹಠಗಳನ್ನು ಬೆಳೆಸಿಕೊಂಡೇ ಮನೆಗೆ ಹಿಂದಿರುಗುತ್ತಾನೆ ಅವನ ಸ್ವಭಾವವನ್ನು ಸರಿಪಡಿಸಲೆಂದು ಪಾರಳಂತಹ ಸರಳ ಹೆಣ್ಣನ್ನು ಅವನಿಗೆ ಕೊಟ್ಟು ಮದುವೆ ಮಾಡಿಸುವುದೆಂದು, ಅವನೊಂದಿಗೆ ಚರ್ಚಿಸದೆ, ಹಿರಿಯರು ನಿಶ್ಚಯಿಸುತ್ತಾರೆ. ಮದುವೆಗೆ ಎಲ್ಲ ತಯಾರಿ ನಡೆದರೂ ಕೊನೆಗೆ ಮಾಧವನ ವಿರೋಧದಿಂದಾಗಿ ಮದುವೆ ಮುರಿದು ಬೀಳುತ್ತದೆ. ಅಪಮಾನ ಮತ್ತು ದುಃಖಗಳನ್ನು ತಡೆಯಲಾರದೆ ಕೃಷ್ಣದೇವರಾಯರು ಹಾಸಿಗೆ ಹಿಡಿಯುತ್ತಾರೆ. ಈ ಮಧ್ಯೆ ಇದ್ದಕ್ಕಿದ್ದಂತೆ, ಮಾಧವ ಮನೆ ಮತ್ತು ಆಸ್ತಿ ವ್ಯವಹಾರದ ಸಂಪೂರ್ಣ ಜವಾಬ್ದಾರಿಯನ್ನು ಹೊತ್ತಿದ್ದಾನೆಂದು ತಿಳಿದಾಗ ಕೃಷ್ಣದೇವರಾಯರು ನಿಶ್ಚಿಂತರಾಗುತ್ತಾರೆ. ಆದರೆ ಮಗ ಆಳು-ಕಾಳು-ಒಕ್ಕಲುಗಳ ಮೇಲೆ ದೌರ್ಜನ್ಯ ತೋರಿಸಿ ಬಲಾತ್ಕಾರವಾಗಿ ಗೇಣಿ ವಸೂಲಿ ಮಾಡುತ್ತಾನೆಂದೂ, ಶ್ಯಾನುಭಾಗರ ಬಳಿ ಹೋಗಿ ತನಗೆ ಸೇರಬೇಕಾದ ಭೂಮಿಯಲ್ಲದೆ ಅದಕ್ಕೆ ತಾಗಿರುವ ಬೇರೆಯವರ ಜಾಗವನ್ನೂ ಒಳಗೆ ಹಾಕಿಕೊಂಡು ಗಡಿ ಹಾಕಿಸಿ ಪಾಗಾರ ಕಟ್ಟಿಸಿದ್ದಾನೆಂದು ತಿಳಿದಾಗ ಕೃಷ್ಣದೇವರಾಯರು ಭೂಮಿಗಿಳಿದು ಹೋಗುತ್ತಾರೆ ಮತ್ತು ಅದೇ ಕೊರಗಿನಲ್ಲಿ ಸಾಯುತ್ತಾರೆ. ಇಲ್ಲಿಂದ ಕೆಮ್ಮಾಡಿ ಮನೆಯ ಅವನತಿ ಪ್ರಾರಂಭವಾಗುತ್ತದೆ. ಮುಂದಿನದ್ದೆಲ್ಲ ಮಾಧವನ ಹಿಟ್ಲರ್‌ತನದ ಕಥೆ. ತನ್ನವರ ಬಗ್ಗೆ ಅವನಿಗೆ ಎಲ್ಲಿಲ್ಲದ ಅಕ್ಕರೆಯಿದ್ದರೂ, ಯಾರೂ ಆತ ಹಾಕಿದ ಗೆರೆಯನ್ನು ದಾಟಕೂಡದು. ಅಮ್ಮನ ಕೇಳಿಕೆಯ ಮೇರೆಗೆ ಅನೇಕರಿಗೆ ಆಶ್ರಯ ಕೊಡುತ್ತಾನೆ. ಅಪ್ಪಿ ತಪ್ಪಿ ಯಾರಾದರೂ ಆತನಿಗೆ ಇಷ್ಟವಿಲ್ಲದ ಮಾತನಾಡಿದರೆ ಗುಡುಗು-ಸಿಡಿಲುಗಳ ಆರ್ಭಟ. ಆಳುಕಾಳುಗಳನ್ನು ಅಳತೆ ಮೀರಿ ದುಡಿಸುತ್ತಾನೆ. ಓರ್ವ ಪಾಳೆಯಗಾರನಂತೆ

ಪಾರ್ವತಿ ಜಿ. ಐತಾಳ್

ದರ್ಪದಿಂದ ಮೆರೆಯುತ್ತಾನೆ. ತನಿಯನಿಗೆ ಹೊಡೆದು ಗೇಣಿವಸೂಲಿ ಮಾಡುತ್ತಾನೆ. ಚೀಂಕ್ರ ಅವನಿಗೆ ಎದುರು ನಿಂತಾಗ ಅವನ ಗುಡಿಸಲಿಗೆ ಬೆಂಕಿಹಾಕಿ ಅವನ ಬರ್ಬರ ಬದುಕಿಗೆ ಕಾರಣನಾಗುತ್ತಾನೆ. ಸ್ವಾತಂತ್ರ್ಯಾನಂತರ ನಡೆದ ರಾಜಕೀಯ ಬೆಳವಣಿಗೆಗಳಲ್ಲಿ ಕಮ್ಯುನಿಸ್ಟ್ ಪಕ್ಷದವರು ಬಡವರನ್ನು ಮತ್ತು ಕೆಳವರ್ಗದವರನ್ನು ಬೆಂಬಲಿಸತೊಡಗಿ, ಉಳುವವನೇ ಹೊಲದೊಡೆಯನೆಂದು ಘೋಷಿಸಬೇಕೆಂದು ತಂದ ಒತ್ತಾಯದ ಹಿನ್ನೆಲೆಯಲ್ಲಿ ಸರ್ಕಾರವು ಭೂ ಮಸೂದೆಯನ್ನು ಜಾರಿಗೆ ತಂದಾಗ ಮಾಧವ ಕಟ್ಟಿದ ಪಾಗಾರಕ್ಕೆ ಪಾಚಿ ಹಿಡಿದುಕೊಳ್ಳುತ್ತದೆ. ಯಾರ ಯಾರದ್ದೋ ಕುತಂತ್ರದಿಂದ ಹಸನಬ್ಬನ ಕೊಲೆಯ ಕೇಸಿನಲ್ಲಿ ಸಿಕ್ಕಿಹಾಕಿಕೊಂಡು ಮಾಧವ ಜೈಲು ಸೇರುತ್ತಾನೆ. ಜೈಲಿನಿಂದ ಹಿಂದಿರುಗಿ ಮನೆಗೆ ಬಂದಾಗ ಎಲ್ಲರ ಬಗ್ಗೆ ಸಂಶಯ ಬೆಳೆದು ಅವನಿಗೆ ಬುದ್ಧಿಭ್ರಮಣೆಯಾದಂತಾಗುತ್ತದೆ. ಮನೆಯ ಮುಂಭಾಗದಲ್ಲಿ ವಿಶಾಲವಾಗಿ ಹರಡಿದ್ದ ದೈತ್ಯ ಮರಗಳನ್ನು ಅವನು ಕಡಿಸಿದಾಗ ಅಮ್ಮ ಲಕ್ಷ್ಮಿದೇವಿ, ''ಅವಂಗಿನ್ನು ಅಂತ್ಯಕಾಲ ಬಂತು'' ಎಂದಂತೆ, ಒಂದು ದಿನ ಪತ್ರಿಕೆಯಲ್ಲಿ ಉಳುವವನೇ ಹೊಲದೊಡೆಯನಾದನೆಂದು ಕೇಳಿ ಕೂಡಲೆ ಸಾಯುತ್ತಾನೆ. ಅವನ ಆಸ್ತಿಯಲ್ಲಿ ಹೆಚ್ಚಿನ ಭಾಗವು ಒಕ್ಕಲುಗಳ ವಶವಾಗಿ ಸಣ್ಣದೊಂದು ಭಾಗ ಮಾತ್ರ ಸೀತಾರಾಮನ ಪಾಲಿಗೆ ಉಳಿಯುತ್ತದೆ. ಹೀಗೆ ಮಾಧವ ಕಟ್ಟಿದ ಸಾಮ್ರಾಜ್ಯ ಪತನಗೊಳ್ಳುತ್ತದೆ.

ಇಡೀ ಕಾದಂಬರಿಯಲ್ಲಿ ಹಲವು ಪಾತ್ರಗಳು ಜೀವಂತವಾಗಿ ಎದ್ದುಬಂದಂತಿವೆ. ಕೃಷ್ಣದೇವರಾಯರು ಮತ್ತು ನರ್ಸಪ್ಪಯ್ಯರಂಥ ಹಿರಿಯರ ಸಾತ್ವಿಕ ಸ್ವಭಾವಕ್ಕೆ ವಿರುದ್ಧವಾಗಿ ಮಾಧವನ ರಾಜಸ ಗುಣಗಳು ನಿಲ್ಲುತ್ತವೆ. ಹಿರಿಯರ ಕಾಲದಲ್ಲಿ ಧಣಿ ಮತ್ತು ಒಕ್ಕಲುಗಳ ನಡುವೆ ಪರಸ್ಪರ ಪ್ರೀತಿ, ವಿಶ್ವಾಸ, ಸೌಹಾರ್ದತೆ ಮತ್ತು ಹೃದಯವೈಶಾಲ್ಯಗಳಿದ್ದವು. ಮನುಷ್ಯ ಮನುಷ್ಯರ ನಡುವೆ ಗೋಡೆಗಳಿರಲಿಲ್ಲ. ಅವರೆಂದೂ ತಮ್ಮ ಭೂಮಿಗೆ ಗಡಿ ಹಾಕಿ ಪಾಗಾರ ಕಟ್ಟಿಕೊಳ್ಳಲಿಲ್ಲ. ಆದರೆ ಮಾಧವನ ಆಡಳಿತದಲ್ಲಿ ಎಲ್ಲವೂ ತಲೆಕೆಳಗಾಗಿ ಅವನೊಬ್ಬ ಟೈರಂಟ್ ಆಗುತ್ತಾನೆ, ಸ್ವಾರ್ಥಿಯಾಗುತ್ತಾನೆ. ತಾನು-ತನ್ನ ರಕ್ತಸಂಬಂಧಿಗಳು ಬಿಟ್ಟರೆ ಬೇರಾರಿಗೂ ಅವನ ಜಗತ್ತಿನಲ್ಲಿ ಸ್ಥಾನವಿಲ್ಲ. ತನಗೆ ಎಲ್ಲರೂ ಹೆದರಿ ನಡೆಯಬೇಕು ಎಂದೆಣಿಸುತ್ತ ತನ್ನ ಸುತ್ತ ಭಯದ ಪಾಗಾರವನ್ನು ಸ್ವಯಂ ನಿರ್ಮಿಸಿಕೊಳ್ಳುತ್ತಾನೆ. ಅಣ್ಣನ ಅತಿಪ್ರೀತಿಗೆ ಬಲಿಯಾಗುವ ಸೀತಾರಾಮನಲ್ಲಿ ಸ್ವತಂತ್ರ ವ್ಯಕ್ತಿತ್ವವೇ ಇರುವುದಿಲ್ಲ. ಅವನನ್ನು ಪ್ರೀತಿಸಿ ಮದುವೆಯಾಗುವ ಕಮಲಿಗೆ ಇದು ನುಂಗಲಾರದ ತುತ್ತಾಗುತ್ತದೆ. ತನ್ನ ಗಂಡನಲ್ಲಿರುವ ಬುದ್ಧಿವಂತಿಕೆ, ಕಲಾಪ್ರತಿಭೆಗಳನ್ನು ಅವಳು ಚೆನ್ನಾಗಿಯೇ ಗುರುತಿಸುತ್ತಾಳೆ. ತನ್ನ ಒಳ್ಳೆಯ ಸ್ವಭಾವದಿಂದ ಆಳುಕಾಳುಗಳನ್ನು ಆಕರ್ಷಿಸಿ ಅವರಿಂದ ಸುಲಭದಲ್ಲಿ ತೋಟ, ಗದ್ದೆಗಳ ಕೆಲಸ ಮಾಡಿಸಲು ಅವಳಿಗೆ ಗೊತ್ತಿದೆ. ಆದರೆ ತನ್ನ ಗಂಡ ಸ್ವತಂತ್ರನಾಗಿರಬೇಕು ಎನ್ನುವ ಕಮಲಳ ಬಯಕೆ ಎಂದೂ ಪೂರೈಸುವುದಿಲ್ಲ. ಮಾಧವನ ಕರಾಳ ನೆರಳು ಸೀತಾರಾಮನನ್ನು ಮಾನಸಿಕ ರೋಗಿಯನ್ನಾಗಿಸಿ, ಅವನು ಮನೋರೋಗ ತಜ್ಞರನ್ನು ಭೇಟಿಯಾಗಬೇಕಾಗಿ ಬರುವುದು ಒಂದು ದೊಡ್ಡ ದುರಂತ.

ಪುರುಷ ಪಾತ್ರಗಳಿಗಿಂತ ಸಶಕ್ತವಾಗಿ ತಲೆಯತ್ತಿ ನಿಂತು ನಮ್ಮ ಮೆಚ್ಚುಗೆಗಳಿಸುವ ಹಲವು ಸ್ತ್ರೀ ಪಾತ್ರಗಳು ಕಾದಂಬರಿಯಲ್ಲಿವೆ. ಕೃಷ್ಣದೇವರಾಯರ ತಾಯಿ ಸೀತಮ್ಮ ಅಷ್ಟು ದೊಡ್ಡ ಆಸ್ತಿ ವ್ಯವಹಾರವನ್ನು ಏಕಾಕಿಯಾಗಿ ನಡೆಸಿದ ಧೀರೆ. ಲಕ್ಷ್ಮಿದೇವಮ್ಮನ ಪಾತ್ರ ಓರ್ವ ಆದರ್ಶ ಗೃಹಿಣಿಯದ್ದು. ಮೃದುಮನಸ್ಸಿನ ಸಾಧ್ವಿ ಆಕೆ. ಪತಿಯ ಮರಣಾನಂತರ ಮಗ ಮಾಡುವ ಅನ್ಯಾಯಗಳನ್ನು ನೋಡಲಾರದೆ, ಅವನನ್ನು ಎದುರಿಸಲೂ ಆಗದೆ ಒಳಗೊಳಗೇ ಕೊರಗುತ್ತಾಳೆ. ಆದರೂ ತನ್ನ ಬುದ್ಧಿವಂತಿಕೆಯನ್ನುಪಯೋಗಿಸಿ, ಅವನ ಮನ ಒಲಿಸಿ ಕೆಲವು ಒಳ್ಳೆಯ ಕೆಲಸಗಳನ್ನು ಮಾಧವನಿಂದ ಮಾಡಿಸುವವಳು ಆಕೆಯೇ. ಪಾರ ವಿಧವೆಯಾಗಿ, ಅಸಹಾಯಕಿಯಾದಾಗ ಅವಳಿಗೂ ಅವಳ ಮಗ ಲಚ್ಚಣನಿಗೂ, ಚೀಂಕ್ರ ಸತ್ತಾಗ ಅವನ ಮಗ ಕರಿಯನಿಗೂ ಕೆಮ್ಮಾಡಿ ಮನೆಯಲ್ಲಿ ಆಶ್ರಯ ಸಿಗುವುದು ಹೀಗೆ.

ಶಂಕರಿ ಸ್ವತಂತ್ರ ವ್ಯಕ್ತಿತ್ವವನ್ನು ಬೆಳೆಸಿಕೊಂಡ ಓರ್ವ ಪ್ರಭಾವಿ ಹೆಣ್ಣು. ಅನ್ಯಾಯದ ವಿರುದ್ಧ ಮಾತನಾಡಲಾಗದ ಆಕೆಯ ಗಂಡ ಶ್ರೀನಿವಾಸನಿಗಿಂತ ಹೆಚ್ಚು ಸುಸಂಸ್ಕೃತಳು ಆಕೆ. ಗಂಡನ ಮನೆಯವರು ತನ್ನ ವಜ್ರದ ಬೆಂಡೋಲೆಯನ್ನು ಅಡಗಿಸಿಟ್ಟಾಗ ಅವರ ಹೀನ ಧೋರಣೆಯ ವಿರುದ್ಧ ಅವಳು ಸೆಟೆದು ನಿಲ್ಲುತ್ತಾಳೆ. ತನ್ನ ತಮ್ಮ ಮಾಧವ ಕುಡಿತದ ಚಟಕ್ಕೆ ಬಿದ್ದಾಗ ಅವನಿಗೆ ಸೂಕ್ತ ಉಪದೇಶ ನೀಡಿ ಆತ ದಾರಿಗೆ ಬರುವಂತೆ ಪ್ರೇರೇಪಿಸಿದವಳು ಶಂಕರಿ. ಇನ್ನೊಂದು ಗಮನಾರ್ಹ ಸ್ತ್ರೀ ಪಾತ್ರ ಕಮಲಿಯದು. ಮೊದ ಮೊದಲು ಚೆಲ್ಲು ಸ್ವಭಾವವೆಂದು ಅನ್ನಿಸಿದರೂ ಸೀತಾರಾಮನನ್ನು ಮದುವೆಯಾದ ನಂತರ ಗಂಡನ ಸ್ವಾತಂತ್ರ್ಯದ ಬಗ್ಗೆ ಗಂಭೀರವಾಗಿ ಯೋಚಿಸುವ ಪತ್ನಿಯಾಗಿ ಆಕೆ ಬೆಳೆಯುತ್ತಾಳೆ. ಪಾರಳ ಪಾತ್ರವೂ ಕಾದಂಬರಿಯಲ್ಲಿ ಮಹತ್ವ ಪಡೆಯುತ್ತದೆ. ಮನೆಯ ಒಳಗಿನ ಹಾಗೂ ಹೊರಗಿನ ಎಲ್ಲ ಕೆಲಸಗಳಲ್ಲೂ ಸೈ ಎನ್ನಿಸಿ ಕೊಳ್ಳುವ ಆಕೆ ಜೀವನದಲ್ಲಿ ಅಡಿಗಡಿಗೂ ಕಷ್ಟ-ದುಃಖಗಳನ್ನೆದುರಿಸಿದವಳು, ಆಕೆಯ ಕಷ್ಟದೊಂದಿಗೆ ಆರಂಭವಾಗುವ ಕಾದಂಬರಿ ಆಕೆಯ ಸುಖದೊಂದಿಗೆ ಕೊನೆಗೊಳ್ಳುವುದು ಆಕೆಯ ಪಾತ್ರಕ್ಕಿರುವ ಪ್ರಾಮುಖ್ಯತೆಗೆ ಸಾಕ್ಷಿ. ಮಿತ್ರಾ ಅವರ ಸ್ತ್ರೀ ಪಾತ್ರಗಳೆಲ್ಲವೂ ಶಿವರಾಮ ಕಾರಂತರ ಸ್ತ್ರೀ ಪಾತ್ರಗಳಂತೆ ಬದುಕಿನ ಅಗ್ನಿಪರೀಕ್ಷೆಯಲ್ಲಿ ಹೋರಾಡಿ ಗೆಲ್ಲುವ ಪಾತ್ರಗಳಾಗಿವೆ.

ಕಾದಂಬರಿಯಲ್ಲಿ ಸಿಗುವ ಗ್ರಾಮೀಣ ಬದುಕಿನ ವಿವರಗಳು ಲೇಖಕಿಯ ಸೂಕ್ಷ್ಮ ದೃಷ್ಟಿಗೆ ಸಾಕ್ಷಿಯಾಗಿ ನಿಲ್ಲುತ್ತವೆ. ಹಳ್ಳಿಯ ರಾಜಕೀಯದೊಂದಿಗೆ ಸ್ವಾತಂತ್ರ್ಯಾನಂತರದ ದೇಶದ ರಾಜಕೀಯ ಬೆಳವಣಿಗೆಯನ್ನು ಬೆಸೆದಿರುವುದು ಕಾದಂಬರಿಯ ಸಂದರ್ಭದಲ್ಲಿ ಔಚಿತ್ಯಪೂರ್ಣವಾಗಿದೆ.

'ಪಾಚಿ ಕಟ್ಟಿದ ಪಾಗಾರ' ಎನ್ನುವ ಶೀರ್ಷಿಕೆಯ ಧ್ವನಿ ಏನು ಎನ್ನುವುದು ಇಲ್ಲಿ ಹುಟ್ಟುವ ಒಂದು ಪ್ರಶ್ನೆ. ಮನುಷ್ಯ-ಮನುಷ್ಯರನ್ನು ಬೇರ್ಪಡಿಸುವ ಪಾಗಾರಕ್ಕೆ ಪಾಚಿ ಕಟ್ಟಿದರೇನು, ಮುರಿದುಬಿದ್ದರೇನು, ಅದು ನಮಗೆ ಸಂತೋಷದ ವಿಷಯವಲ್ಲವೆ ? ಇಲ್ಲಿ ನನಗೆ ಅಮೆರಿಕನ್ ಕವಿ ರಾಬರ್ಟ್ ಫ್ರಾಸ್ಟನ 'ಮೆಂಡಿಂಗ್ ವಾಲ್' ಎನ್ನುವ ಕವನದ ನೆನಪಾಗುತ್ತದೆ. ಗೋಡೆಯನ್ನು ದುರಸ್ತಿಮಾಡುವುದು ಬೇಡ, ನಮಗೆ ಪರಸ್ಪರ ಸಂಬಂಧ -ಸಂಪರ್ಕಗಳು ಬೇಕು ಎನ್ನುತಾನೆ ಕವಿ. ಇಲ್ಲಿ ಮಾಧವ ಪಾಗಾರ ಕಟ್ಟಿಸುತ್ತಾನೆ. ಪ್ರತ್ಯೇಕವಾಗಿ ನಿಲ್ಲುತ್ತಾನೆ. 'ಉಳುವವನೇ ಹೊಲದೊಡೆಯ' ಕಾನೂನು ಬಂದಾಗ ಪಾಗಾರ ಮರೆಯಾಗಲೇಬೇಕಾಗುತ್ತದೆ. ಎಲ್ಲರೂ ಸಮಾನರಾಗುತ್ತಾರೆ. ಆದ್ದರಿಂದ ಇಲ್ಲಿನ ಶೀರ್ಷಿಕೆಯಲ್ಲಿ ಬಿಡುಗಡೆಯ ಧ್ವನಿಯೂ ಇದೆ. ಅಥವಾ ಇನ್ನೊಂದು ಅರ್ಥದಲ್ಲಿ, ಪಾಗಾರವನ್ನು ವೈಭವದ ಸಂಕೇತವೆಂದು ಪರಿಗಣಿಸಿದರೆ, ಮಾಧವನ ಪತನದ ನಂತರ ಅದು ಪಾಚಿಗಟ್ಟಿ ಹಾಳಾಯಿತು ಎಂದೂ ಅರ್ಥ ಮಾಡಿಕೊಳ್ಳಬಹುದು. 'ಪಾಚಿ ಕಟ್ಟಿದ ಪಾಗಾರ' ಓದುಗರಿಗೆ ಒಂದು ಹೊಸ ಅನುಭವ ನೀಡುವ ಶಕ್ತಿಯನ್ನು ಹೊಂದಿದೆ ಎಂಬುದು ನಿರ್ವಿವಾದವಾದ ಸಂಗತಿ.

**ಪಾರ್ವತಿ ಜಿ.ಐತಾಳ್**
ಸುರಗಂಗಾ, ಬಿ.ಸಿ.ರಸ್ತೆ, ಕುಂದಾಪುರ - ೫೭೬ ೨೦೧



# ಬೌದ್ಧ ಗತಿತಾರ್ಕಿಕತೆಯ ಉಗಮ

ಟಿ. ಪಿ. ಜಯಸ್ವಾಲ್

ಗೌತಮ ಬುದ್ಧ ಒಬ್ಬ ವೈದ್ಯನ ವಿಧಾನ ಅನುಸರಿಸಿದ್ದವನು. ರೋಗವೊಂದನ್ನು ಗುಣಪಡಿಸಬೇಕಾದರೆ ಮೊದಲು ರೋಗದ ಕಾರಣ ಗುರುತಿಸಬೇಕೆಂಬುದು ಆ ವಿಧಾನದ ಒಂದು ಭಾಗ. ದುಃಖದ ಮೂಲಕಾರಣ ತಿಳಿದು ಅದನ್ನು ಹೋಗಲಾಡಿಸುವುದು ಬುದ್ಧನ ಆಶಯ. ಕಾರ್ಯ-ಕಾರಣ ಸಂಬಂಧವು ಸಾರ್ವತ್ರಿಕ ಮತ್ತು ಸಾರ್ವಕಾಲಿಕ, ಆದ್ದರಿಂದ ಎಲ್ಲ ಘಟನೆಗಳನ್ನೂ ಆ ನೆಲೆಯಲ್ಲಿ ಅರ್ಥಮಾಡಿಕೊಳ್ಳಬೇಕೆಂದು ಬುದ್ಧ ಬಯಸಿದ. ಈ ನಿಯಮ ಅಥವಾ ಧರ್ಮವು ಪ್ರಜ್ಞೆಯುಳ್ಳ ಬೇರಾವುದೋ ವ್ಯಕ್ತಿ ಅಥವಾ ವಸ್ತುವಿನಿಂದ ಪ್ರೇರಣೆ ಪಡೆಯುವುದಿಲ್ಲ, ಅದು ಸ್ವಯಂ ಚಾಲಿತವಾದ ಧರ್ಮ. ಕಾರಣವಿದ್ದಾಗ ಕಾರ್ಯ ಉಂಟಾಗುತ್ತದೆ ಎಂಬುದನ್ನು 'ಅಸ್ಮಿನ್ ಸತಿ ಇದಂ ಭವತಿ' ಎಂಬ ಸೂತ್ರದಿಂದ ಸೂಚಿಸಲಾಗುತ್ತದೆ. ಅಸ್ತಿತ್ವದಲ್ಲಿರುವ ಎಲ್ಲದಕ್ಕೂ ಒಂದು ಕಾರಣ ಇರಲೇಬೇಕು, ಕಾರ್ಯವು ಕಾರಣವನ್ನಾಧರಿಸುತ್ತದೆ, ಯಾವುದೂ ಯಾದೃಚ್ಛಿಕವಲ್ಲ, ಎಂಬ ಬೌದ್ಧ ತತ್ವವು ಆವರೆಗೆ ಪ್ರಚಲಿತವಿದ್ದ ಬೇರೊಂದು ತಿಳಿವಳಿಕೆಗೆ ಭಂಗ ತಂದಿತು. ಒಂದು ಕಾರಣದಿಂದ ಒಂದು ಕಾರ್ಯ ಅಥವಾ ಹಲವು ಕಾರ್ಯಗಳು ಉದ್ಭವಿಸಬಹುದೆಂಬುದು ಆ ತಿಳಿವಳಿಕೆ. ಉಪನಿಷತ್ತುಗಳ ಕರ್ತೃಗಳ ಪೈಕಿ ಕೆಲವರ ಪ್ರಕಾರ ಒಂದೇ ಆತ್ಮನಿಂದ ಹತ್ತಾರು ಅಸಾಧಾರಣ ವಸ್ತುಗಳು ಪರಿಣಮಿಸುತ್ತವೆ. ಭೌತ ಜಗತ್ತಿನಲ್ಲಿ ಸಹ ಒಂದು ಭೂತ ದ್ರವ್ಯವು ಕಾರಣವೆನಿಸಿಕೊಳ್ಳುತ್ತದೆ ಮತ್ತು ಅದರಿಂದ ಪರಿಣಮಿಸುವುದು ಕಾರ್ಯ ಎನಿಸಿಕೊಳ್ಳುತ್ತದೆ. ಬೌದ್ಧ ತತ್ವಶಾಸ್ತ್ರದಲ್ಲಿ ಇದಕ್ಕೆ ಭಿನ್ನವಾದ ಕಲ್ಪನೆ ಇದೆ : ಯಾವ ವಸ್ತುವೂ, ಅಥವಾ ಅಲ್ಲಿ ಕರೆಯಲಾಗುವಂತೆ ಯಾವ ಧರ್ಮವೂ, ಒಂದೇ ಕಾರಣದಿಂದ ಪರಿಣಮಿಸಿರಬೇಕಾಗಿಲ್ಲ. ಕಾರ್ಯವೊಂದರ ಹಿಂದೆ ಕೇವಲ ಒಂದು ಕಾರಣವಿರುತ್ತದೆಂದು ಹೇಳಲಾಗದು; ಹಲವು ಕಾರಣಗಳು ಒಟ್ಟಾಗಿ ಕಾರ್ಯವೊಂದನ್ನು ಉಂಟುಮಾಡುತ್ತವೆ, ಎಂಬುದು ಈ ಕಲ್ಪನೆ. ಅದನ್ನು 'ಪ್ರತೀತ್ಯ ಸಮುತ್ಪಾದ' ಎಂದು ಕರೆಯಲಾಗಿದೆ.

ಪ್ರತೀತ್ಯ ಸಮುತ್ಪಾದದ ತತ್ವವು ಪದಾರ್ಥಗಳು ಕ್ಷಣಿಕವೆಂಬ ಬೌದ್ಧ ತತ್ವಕ್ಕೆ ನಮ್ಮನ್ನು ಕೊಂಡೊಯ್ಯುತ್ತದೆ. ಅದರ ಪ್ರಕಾರ ಎಲ್ಲವೂ ಕ್ಷಣಿಕ ಮತ್ತು ಎಲ್ಲವೂ ಬದಲಾಗುತ್ತಿರುತ್ತವೆ, ಆದರೆ ಪ್ರತಿಯೊಂದೂ ಸಂಬಂಧಿತ. ಅಂದರೆ, ಹಿಂದಿನದು ಮತ್ತು ಮುಂದಿನದು ಸಂಬಂಧವಿಲ್ಲದವುಗಳಲ್ಲ. ಪ್ರತಿಯೊಂದರ ಅಸ್ತಿತ್ವಕ್ಕೂ ಒಂದು ಸನ್ನಿವೇಶ ಇದೆ, ಆ ಸನ್ನಿವೇಶ ಬದಲಾದರೆ ಅದರ ಅಸ್ತಿತ್ವದಲ್ಲೂ ಬದಲಾವಣೆ ಉಂಟಾಗುತ್ತದೆ. ಧಮ್ಮಪದ ಮತ್ತು ಮಹಾಪರಿನಿಬ್ಬಾಣಸುತ್ತದಲ್ಲಿ ಕ್ಷಣಿಕತೆಯನ್ನು ಕುರಿತ ಪ್ರಸ್ತಾಪಗಳಿವೆ. ಧಮ್ಮಪದದ ಒಂದು ಮಾತಿನಂತೆ ''ಅಸ್ತಿತ್ವದಲ್ಲಿರುವ ಯಾವುದೂ ಉಳಿಯುವಂಥದಲ್ಲ; ಮಾನವನ ಜೀವನವು ಕುಂಬಾರನು ತಯಾರಿಸಿದ ಮಡಕೆಯಂತೆ.'' ಇನ್ನೊಂದೆಡೆ ಬರುವ ಮಾತಿದು : ''ನದಿಯ ನೀರು ಸದಾ ಹರಿದು ಹೊರಟುಹೋಗುತ್ತಿರುವಂತೆ, ಒಮ್ಮೆ ಹೋದರೆ ತಿರುಗಿ ಬಾರದಂತೆ, ಇರುವುದು ಮಾನವ ಜೀವನ. ಒಮ್ಮೆ ಹೋಯಿತೆಂದರೆ ಅದು ಹಿಂದಿರುಗಲಾರದು.''

ಬೌದ್ಧ ದರ್ಶನದಲ್ಲಿ ಎಲ್ಲವೂ ಅನಿತ್ಯ, ಎಲ್ಲವೂ ಬದಲಾವಣೆಗೆ ಪಾತ್ರವಾಗುವಂಥದು, ಬದಲಾಗುತ್ತಾ ಎಲ್ಲವೂ ಸಂಬಂಧ ಹೊಂದಿರುವಂಥದು, ಎಂಬುದು ಮುಖ್ಯ ಪ್ರಮೇಯ. ನಂತರದ ಕಾಲದ ಬೌದ್ಧರು ಕ್ಷಣಿಕ ಎಂಬುದರ ಬದಲು ಅನಿತ್ಯ ಎಂಬ ಪದದ ಪ್ರಯೋಗ ಮಾಡುತ್ತಾರೆ. ಅವರ ಪ್ರಕಾರ ಯಾವುದೆಲ್ಲಾ ಅಸ್ತಿತ್ವದಲ್ಲಿದೆಯೋ ಅದೆಲ್ಲಾ ಕ್ಷಣಿಕ ಮತ್ತು ಪರಿವರ್ತನಶೀಲ. ಅದು ಕ್ಷಣಿಕವಲ್ಲದಿದ್ದರೆ ನೈಜ ಅಸ್ತಿತ್ವ ಹೊಂದಿರುವುದಿಲ್ಲ.

ಈ ರೀತಿಯ ಗತಿತಾರ್ಕಿಕ ಸಿದ್ಧಾಂತವು ಬುದ್ಧನ ಪ್ರಮುಖ ಕೊಡುಗೆಗಳಲ್ಲೊಂದು. ಪಾಶ್ಚಿಮಾತ್ಯ ತತ್ವಶಾಸ್ತ್ರದಲ್ಲಿ ಮಾರ್ಕ್ಸ್ ನಿರೂಪಿಸಿದ ಗತಿತಾರ್ಕಿಕ ಭೌತವಾದವು ಎಷ್ಟು ಪ್ರಮುಖವೋ ಇದೂ ಅಷ್ಟೇ ಪ್ರಮುಖ. ಬುದ್ಧನಿಗೆ ಈ ಗತಿತಾರ್ಕಿಕ ಪ್ರಕ್ರಿಯೆಯ ಕಲ್ಪನೆ ದೊರೆತದ್ದಾದರೂ ಎಲ್ಲಿಂದ ? ಬುದ್ಧನ ಜೀವನ ಚರಿತ್ರೆಯನ್ನು ಲಲಿತವಿಸ್ತರ, ಬುದ್ಧಚರಿತ, ಮುಂತಾದ ಬೌದ್ಧ ಸಾಹಿತ್ಯ ಕೃತಿಗಳಲ್ಲಿ ಚಿತ್ರಿಸಲಾಗಿದೆ. ಅದನ್ನು ಪರಿಶೀಲಿಸಿದರೆ ಈ ಪ್ರಶ್ನೆಗೆ ಉತ್ತರ ದೊರೆಯುತ್ತದೆ.

ತನ್ನ ಯೌವನಾವಸ್ಥೆಯಲ್ಲಿ ಬುದ್ಧನು ಸಾಂಪ್ರದಾಯಿಕ ಹಾದಿಯಲ್ಲಿ ಸ್ವಲ್ಪ ಶಿಕ್ಷಣ ಪಡೆದಿದ್ದನೆಂದು ಹೇಳಲಾಗಿದೆ. ಅವನ ಹಿನ್ನೆಲೆಯಲ್ಲಿ ಅದು ಸ್ವಾಭಾವಿಕವೇ. ವೇದ, ಉಪನಿಷತ್ತುಗಳು, ಭಾರತೀಯ ಆಸ್ತಿಕ ದರ್ಶನಗಳು, ಇವನ್ನೆಲ್ಲಾ ಯಾವುದಾದರೂ ಗುರುವಿನ ಬಳಿ ಅಭ್ಯಾಸ ಮಾಡಿದ್ದನೇನೋ ತಿಳಿಯದು; ಆದರೆ ಹಾಗೆ ಮಾಡಿದ್ದನೆಂಬ ಪ್ರತೀತಿ ಇದೆ. ಏನೇ ಇರಲಿ, ಸಾಂಪ್ರದಾಯಿಕ ವಿದ್ವತ್ತಿನ ಪರಿಚಯವಂತೂ ಅವನಿಗಿತ್ತು. ಅವನ ಈ ಹಿನ್ನೆಲೆಯನ್ನು ಲಲಿತವಿಸ್ತರದಲ್ಲಿ ದಾಖಲಿಸಲಾಗಿದೆ. ಅಶ್ವಘೋಷನ ಬುದ್ಧಚರಿತದಲ್ಲಿ ಹೇಳಿರುವಂತೆ ಅವನು ಆರಡ ಎಂಬುವನಿಂದ ಸಾಂಖ್ಯ ದರ್ಶನದ ಪಾಠಗಳನ್ನು ಆಮೂಲಾಗ್ರವಾಗಿ ಕಲಿತ (೧೨-೮೨). ಅಂತಹ ಪ್ರಕಾಂಡ ಪಂಡಿತನ ಬಳಿ ಕಲಿತಿದ್ದಾಗ್ಯೂ, ಅವನಿಗೆ ಈ ದರ್ಶನಗಳ ಪ್ರತಿಪಾದನೆಯು ಒಪ್ಪಿಗೆಯಾಗಲಿಲ್ಲ. ಅವುಗಳೆಲ್ಲವುಗಳ ಪ್ರಭಾವವಂತೂ ಸಾಕಷ್ಟಿದ್ದಿರಬೇಕು. ಅಂತೂ ತನ್ನದೇ ಆದ ನೈತಿಕ ಮತ್ತು ದಾರ್ಶನಿಕ ಧೋರಣೆಗಳನ್ನು ಬುದ್ಧ ರೂಪಿಸಿಕೊಂಡ. ಅವನ ಮೂಲ ಬೋಧನೆಯು ಕಾಲಕ್ರಮದಲ್ಲಿ ವಿವಿಧ ಬದಲಾವಣೆಗಳನ್ನು ಕಂಡಿತು. ಕೆಲ ಶತಮಾನಗಳ ನಂತರ ಅವನ ಚಿಂತನೆಯು ನಾಗಾರ್ಜುನ, ದಿಙ್ನಾಗ, ವಸುಬಂಧು, ಧರ್ಮಕೀರ್ತಿ, ಮುಂತಾದವರ ಹೊಸ ವ್ಯಾಖ್ಯಾನಗಳಲ್ಲಿ ಎಷ್ಟೋ ಮೂಲಭೂತ ಬದಲಾವಣೆಗಳನ್ನು ಕಂಡಿತು. ಅವರ

ವೇಳೆಗಾಗಲೆ ಬುದ್ಧನ ಮೂಲತತ್ತ್ವವು ಹಲವು ರೀತಿಗಳಲ್ಲಿ ಮಾರ್ಪಾಟುಗಳನ್ನು ಹೊಂದಿದ್ದಿತೆಂದು ತೋರುತ್ತದೆ. ಬುದ್ಧ ಹಾಗೂ ಅವನ ನಂತರದ ಅನುಯಾಯಿಗಳೆಲ್ಲಾ ಭಾರತೀಯ ದರ್ಶನಗಳ ಪರಂಪರಾಗತ ಧೋರಣೆಗಳನ್ನು ಸಮಗ್ರವಾಗಿಯೇ ಪರಿಚಯಿಸಿಕೊಂಡಿದ್ದರೆಂಬುದು ಅವರ ಗ್ರಂಥಗಳಿಂದ ತಿಳಿದುಬರುತ್ತದೆ. ಪ್ರಾಚೀನ ಬೌದ್ಧ ದಾರ್ಶನಿಕರಲ್ಲಿ ಒಂದು ಬಣವು ಪದಾರ್ಥಗಳ ವಿಕಾಸ ಮತ್ತು ಬದಲಾವಣೆಗಳನ್ನು ಅಂಗೀಕರಿಸಿದೆ. ಅಂದರೆ, ಆ ಬಣದವರು ದಾರ್ಶನಿಕ ದೃಷ್ಟಿಯಿಂದ ಪರಿಣಾಮವಾದಿಗಳು. ಶಾಂತರಕ್ಷಿತನ ತತ್ತ್ವ ಸಂಗ್ರಹದಲ್ಲಿ ಅವರ ವಾದಗಳನ್ನೆಲ್ಲಾ ಸಮಗ್ರವಾಗಿ ನಿರೂಪಿಸಲಾಗಿದೆ. ಅವರಿಗೆ ಪರಿಣಾಮ ಅಥವಾ ಬದಲಾವಣೆಯ ತತ್ವವು ಆಕಸ್ಮಿಕವಾಗಿ ಅಂಟಿಕೊಂಡಂಥದೇನೂ ಅಲ್ಲ. ಅದು ಪ್ರಾಚೀನ ಸಾಂಖ್ಯ ತತ್ವದಲ್ಲಿ ವಿಸ್ತಾರವಾಗಿ ಚರ್ಚಿಸಲಾಗಿದ್ದಿತು. ಅದರ ಪ್ರಕಾರ ಭೌತ ವಸ್ತುವು ಪ್ರತಿಕ್ಷಣದಲ್ಲೂ ಪರಿಣಾಮ ಸ್ವಭಾವಕ್ಕೆ ಗುರಿಯಾಗಿರುತ್ತದೆ, ಅವಸ್ಥಾಂತರಕ್ಕೆ ಕ್ರಮಿಸುತ್ತಿರುತ್ತದೆ. ಅಂತಹ ಸ್ವಭಾವವಿರದ ಭೌತವಸ್ತುವೇ ಇಲ್ಲ. ಈ ರೀತಿಯ ಪರಿಣಾಮವು ಮೂರು ವಿಧದಲ್ಲಿರುತ್ತದೆ: ಗುಣ ಅಥವಾ ಧರ್ಮ ಪರಿಣಾಮ, ಭೂತ-ವರ್ತಮಾನ ಮತ್ತು ಭವಿಷ್ಯ ಕಾಲಗಳಿಗೆ ಸಂಬಂಧಿಸಿದಂತೆ ಲಕ್ಷಣ ಪರಿಣಾಮ ಮತ್ತು ಅಸ್ತಿತ್ವದಲ್ಲಿನ ಭಿನ್ನತೆಯನ್ನು ಸೂಚಿಸುವ ಅವಸ್ಥಾ ಪರಿಣಾಮ (ಯೋಗಸೂತ್ರ ೩.೧೩).

ಯೋಗಸೂತ್ರದ ಈ ವಿಭಜನೆಯನ್ನು ಪ್ರಾಚೀನ ಬೌದ್ಧ ದಾರ್ಶನಿಕರು ಅಂಗೀಕರಿಸಿದ್ದಾರೆ ಮತ್ತು ನಾಲ್ಕನೆಯ ಇನ್ನೊಂದು ಪರಿಣಾಮವನ್ನು ಸೇರಿಸಿದ್ದಾರೆ. ಅದು ಕಾರಿತ್ರ ಪರಿಣಾಮ ಅಥವಾ ಫಲ ಕೊಡುವಂತಹ ಸಾಮರ್ಥ್ಯವುಳ್ಳದ್ದು. ಪರಿಣಾಮದ ಈ ರೀತಿಯ ವಿಭಜನೆಗಳನ್ನು ಕಮಲಶೀಲನು ತತ್ತ್ವಸಂಗ್ರಹದ ಮೇಲಿನ ತನ್ನ ಭಾಷ್ಯದಲ್ಲಿ ನಮೂದಿಸಿದ್ದಾನೆ ಹಾಗೂ ಆ ವಿಭಜನೆಗಳನ್ನು ಗುರುತಿಸಿರುವ ತತ್ತ್ವಶಾಸ್ತ್ರಜ್ಞರನ್ನು ಹೆಸರಿಸಿದ್ದಾನೆ. ಅವನು ಇನ್ನೊಂದು ಮಾತನ್ನು ಸೇರಿಸಿದ್ದಾನೆ: ಸಾಂಖ್ಯ-ಯೋಗದ ಪರಿಣಾಮ ತತ್ವಗಳನ್ನು ಕುರಿತು ಯಾವ ಆಕ್ಷೇಪಗಳನ್ನೆತ್ತಬಹುದೋ ಅವನ್ನು ಬೌದ್ಧರ ವಿಭಜನೆಯ ಬಗೆಗೂ ಎತ್ತಲು ಸಾಧ್ಯ, ಎಂದು. ಅದೇ ಕಾರಣದಿಂದ ತಾನು ಆಕ್ಷೇಪಗಳ ಖಂಡನೆಗೆ ತೊಡಗುವುದಿಲ್ಲವೆಂದು ಹೇಳಿದ್ದಾನೆ. ತನ್ನ ಮುಂಚಿನ ತತ್ತ್ವಶಾಸ್ತ್ರಜ್ಞರು ಪರಿಣಾಮ ಸಿದ್ಧಾಂತವನ್ನು ಕುರಿತಂತೆ ಹೇಳಿದ್ದುದನ್ನೆಲ್ಲಾ ದಾಖಲಿಸಿ ಅವುಗಳಲ್ಲಿ ಅನಂಗೀಕಾರಾರ್ಹವಾದ್ದು ಏನೇನಿದೆಯೆಂಬುದನ್ನು ನಿಖರವಾಗಿ ಮಂಡಿಸುವುದು ಕಮಲಶೀಲನ ಪಾಲಿಗೆ ಬಂತು. ಅದನ್ನಿಲ್ಲಿ ವಿವರವಾಗಿ ಹೇಳುವ ಪ್ರಮೇಯವಿಲ್ಲ.

ಬೌದ್ಧ ಪರಿಣಾಮ ತತ್ವವು ಸಾಂಖ್ಯ-ಯೋಗದ ಅದೇ ತತ್ವದಿಂದ ವಿಶೇಷವಾಗಿ ಪ್ರಭಾವಿತವಾಗಿದೆಯೆಂಬುದು ಖಚಿತವಾಗಿದೆ. ಪತಂಜಲಿಯ ಯೋಗಸೂತ್ರ (೩.೧೩) ಹೀಗಿದೆ: ಏತೇನ ಭೂತೇಂದ್ರಿಯೇಷು ಧರ್ಮಲಕ್ಷಣ ಪರಿಣಾಮಾವಸ್ಥಾ ಪರಿಣಾಮಾಃ ವ್ಯಾಖ್ಯಾತಾಃ॥ ಇದರ ಮೇಲಿನ ವ್ಯಾಖ್ಯಾನದಲ್ಲಿ ವ್ಯಾಸನು ಭೌತ ದ್ರವ್ಯವು ಸದಾ ಬದಲಾಗುತ್ತಿರುತ್ತದೆಂದು ಹೇಳಿದ್ದಾನೆ. ಪ್ರತಿಕ್ಷಣದಲ್ಲೂ ಅದು ಪರಿಣಮಿಸುತ್ತಿರುತ್ತದೆ. ಬದಲಾವಣೆಯಿಂದ ಭೌತದ್ರವ್ಯವನ್ನು ಹೊರತುಪಡಿಸಲಾಗುವುದಿಲ್ಲ, ಪ್ರತ್ಯೇಕಿಸಲಾಗುವುದಿಲ್ಲ. ಈ ರೀತಿಯ ಪರಿಣಾಮವನ್ನು ಉಂಟು ಮಾಡದಿರದ ಕ್ಷಣ ಎಂಬುದಿಲ್ಲ. ಇದನ್ನೇ ಬೌದ್ಧರು ಭೌತದ್ರವ್ಯದ ಮೂಲಭೂತ ಲಕ್ಷಣವೇ ಪರಿಣಾಮ ಎಂದು ಹೇಳುತ್ತಾರೆ. ಕ್ಷಣಿಕತ್ವವು ಅದರ ಗುಣ; ಪರಿಣಾಮತ್ವಕ್ಕಿಂತಲೂ ಕ್ಷಣಿಕತ್ವಕ್ಕೆ ಅವರು ಹೆಚ್ಚು ಒತ್ತುಕೊಡುತ್ತಾರೆ. ಒಂದು ಕ್ಷಣದಲ್ಲಿ ಭೌತ ದ್ರವ್ಯವು ಅಸ್ತಿತ್ವಕ್ಕೆ ಬರುತ್ತದೆ, ಅದರ ಮುಂದಿನ ಕ್ಷಣದಲ್ಲೇ ಅದು ನಾಶವಾಗುತ್ತದೆ. ಅದರ ಸುಳಿವನ್ನು ಸಹ ಅದು ಬಿಟ್ಟುಹೋಗುವುದಿಲ್ಲವಾದ್ದರಿಂದ ಅದರ ಪೂರ್ವಾವಸ್ಥೆಯನ್ನು ಹೊಂದುವುದು ಅಶಕ್ಯ. ಮುಂದೆ ಬರುವುದು ಪೂರ್ತಿ ಹೊಸದಾದೊಂದು ಭೌತದ್ರವ್ಯ. ಅದಕ್ಕೂ ಹಿಂದಿನ ಭೌತದ್ರವ್ಯಕ್ಕುಂಟಾದ ನಾಶವೇ ಕಾದಿರುತ್ತದೆ. ಕ್ಷಣದಿಂದ ಕ್ಷಣಕ್ಕೆ ಹೀಗೆ ಅಸ್ತಿತ್ವ ಮತ್ತು ನಾಶಕ್ಕೊಳಗಾಗುವ ಭೌತದ್ರವ್ಯಗಳ ನಡುವೆ ಸಂಬಂಧವನ್ನು ಗ್ರಹಿಸುವುದು ಭ್ರಮೆ, ಏಕೆಂದರೆ ಕ್ಷಣಗಳ ಗಣನೆ ಸಾಧ್ಯವಿಲ್ಲದ್ದು.

ಈ ಪ್ರತಿಪಾದನೆಗೂ ಸಾಂಖ್ಯಯೋಗದ ಪರಿಣಾಮ ತತ್ವದ ಪ್ರತಿಪಾದನೆಗೂ ಸಾಮ್ಯವಿದೆ. ಆದರೆ ಸೂಕ್ಷ್ಮವಾದೊಂದು ವ್ಯತ್ಯಾಸವೂ ಇದೆ. ಸಾಂಖ್ಯ ತತ್ವದ ಪ್ರಕಾರ ಭೌತದ್ರವ್ಯವು ಪ್ರತಿಕ್ಷಣದಲ್ಲೂ ಬದಲಾಗುತ್ತಿರುತ್ತದಾದರೂ ಹಿಂದಿನ ಮತ್ತು ಮುಂದಿನ ದ್ರವ್ಯ ಸಂಬಂಧಿಸಿವೆ; ಏಕೆಂದರೆ, ಭೌತದ್ರವ್ಯದ ಮೂಲಭೂತ ಲಕ್ಷಣವು ನಾಶಹೊಂದುವುದಿಲ್ಲ. ಅದರ ರೂಪ ಬದಲಾವಣೆ ಸಾಧ್ಯ, ಆದರೆ ಮೂಲ ಲಕ್ಷಣಕ್ಕೆ ಚ್ಯುತಿಯಿಲ್ಲ. ಬೌದ್ಧರ ಚಿಂತನೆಯಲ್ಲಿ ಹಾಗಿಲ್ಲ. ಅದು ಒಂದು ರೂಪದಿಂದ ಇನ್ನೊಂದು ರೂಪ ಧರಿಸುವಂತಹ ಬದಲಾವಣೆಯಲ್ಲ; ಅದು ನಾಶಹೊಂದುವ ಬದಲಾವಣೆ. ಭೌತದ್ರವ್ಯದ ಲಕ್ಷಣವನ್ನು ಸಾಂಖ್ಯಯೋಗವು ಪ್ರತಿಪಾದಿಸಿರುವುದು ಆಧುನಿಕ ವಿಜ್ಞಾನದ ಪ್ರತಿಪಾದನೆಗೆ ಹತ್ತಿರವಾಗಿದೆ. ಭೌತದ್ರವ್ಯ ಮತ್ತು ಶಕ್ತಿ (ಎನರ್ಜಿ) ಉಳಿಯುತ್ತಾ ಮುಂದುವರಿಯುತ್ತವೆಂಬ ಸಿದ್ಧಾಂತ ಆಧುನಿಕ ವಿಜ್ಞಾನದ್ದು. ಹಾಗೆ ನೋಡಿದರೆ, ಬೌದ್ಧ ಮತ್ತು ವೈಶೇಷಿಕ ಚಿಂತನೆಗಳು ಈ ವಿಷಯದಲ್ಲಿ ಹೆಚ್ಚು ಸಾಮ್ಯ ಹೊಂದಿವೆ. ಪ್ರತಿಕ್ಷಣದಲ್ಲೂ ಭೌತದ್ರವ್ಯವು ನಾಶವಾಗುತ್ತಿರುತ್ತದೆಂದು ವೈಶೇಷಿಕರು ಹೇಳುವುದಿಲ್ಲ, ಆದರೆ ಭೌತದ್ರವ್ಯವು ವಸ್ತುವಾಗಿ ರೂಪ ಧರಿಸಿದಾಗ ಅದಕ್ಕೆ ನಾಶ ಸಾಧ್ಯವೆಂಬುದನ್ನವರು ಅಂಗೀಕರಿಸುತ್ತಾರೆ. ಸಾಂಖ್ಯ ಮತ್ತು ವೈಶೇಷಿಕ ಚಿಂತನೆಗಳೆರಡೂ ಬೌದ್ಧ ಚಿಂತನೆಯನ್ನು ಪ್ರಭಾವಿಸಿರುವುದು ಸಾಧ್ಯ. ಲಲಿತವಿಸ್ತರದ ಪ್ರಕಾರ ಸ್ವತಃ ಬುದ್ಧನೇ ಅವೆರಡನ್ನೂ ಅಭ್ಯಾಸ ಮಾಡಿದ್ದ (ಇದು ಚಾರಿತ್ರಿಕವಾಗಿ ಅಸಂಬದ್ಧ, ಏಕೆಂದರೆ ಅವು ನಿರ್ದಿಷ್ಟ ರೂಪದಲ್ಲಿ ದಾರ್ಶನಿಕ ತತ್ವಗಳಾಗಿ ಹೊಮ್ಮಿದ್ದು ಬುದ್ಧನ ನಂತರದಲ್ಲಿ). ಬುದ್ಧನು ಜೀವನದ ಕ್ಷಣಿಕತ್ವವನ್ನು ಹೇಳಿದ್ದ, ಅದರ ಜಾಗದಲ್ಲಿ ಸೌತ್ರಾಂತಿಕ ಬೌದ್ಧರು ಕ್ಷಣಿಕವಾದವನ್ನು ಸ್ಥಾಪಿಸಿದರು. ಇದರಂತೆ ಎಲ್ಲವೂ ಕ್ಷಣಿಕವಾದ್ದರಿಂದ ಪ್ರಜ್ಞೆ ಅಥವಾ ಆತ್ಮ ಸಹ ಕ್ಷಣಿಕವೇ ಆಗಿರಬೇಕು ಮತ್ತು ಮರುಕ್ಷಣದಲ್ಲಿ ನಾಶ ಹೊಂದುವಂತಿರಬೇಕು. ಸಾಂಖ್ಯರ ಪ್ರಕಾರ ಪ್ರಜ್ಞೆಯು ಈ ಮಾದರಿಯ ಕ್ಷಣಿಕತ್ವವನ್ನು ಹೊಂದಿಲ್ಲ. ಬಹುಶಃ ಬೌದ್ಧರ ವೈರಾಗ್ಯ ಮತ್ತು ಧ್ಯಾನ (ಅಥವಾ ಝಾನ) ಕ್ಷಣಿಕವಾದಕ್ಕೆ ಇಂಬು ಕೊಟ್ಟಿರಬೇಕು. ಅವರ ದೃಷ್ಟಿ ಕೇಂದ್ರೀಕೃತವಾದ್ದು ಝಾನದ ಸಾಧನೆಯಲ್ಲಿ. ಆಸೆಯ ಅಂತ್ಯಗೊಳ್ಳುವಿಕೆಯು ಸತ್ಯದ ಅರಿವಿಗೆ ಅಗತ್ಯವಾದ್ದರಿಂದ ಬೌದ್ಧರು ಕ್ಷಣಿಕತ್ವಕ್ಕೆ ಹೆಚ್ಚು ಮಾನ್ಯತೆ ನೀಡಿದರೆಂಬ ಒಂದು ಅಭಿಪ್ರಾಯವಿದೆ. ಸಾರ್ವತ್ರಿಕ ದುಃಖ ಮತ್ತು ವ್ಯಸನದ ಅಂತ್ಯವು ಬೌದ್ಧ ದರ್ಶನದ ಆಶಯವಾದ್ದರಿಂದ ಆಸೆಯನ್ನು ಮೀರಿನಿಲ್ಲುವುದು ಅಗತ್ಯವೆಂಬುದು ಅದರ ನೀತಿ. ಈ ಇಡೀ ಪ್ರತಿಪಾದನೆಯಲ್ಲಿ ಗತಿತಾರ್ಕಿಕತೆಯ ಸೂತ್ರವಿರುವುದು ಬೌದ್ಧ ದರ್ಶನದ ವೈಶಿಷ್ಟ್ಯ.

ಓ. ಪಿ. ಜಯಸ್ವಾಲ್
ನಿವೃತ್ತ ಇತಿಹಾಸ ಪ್ರಾಧ್ಯಾಪಕ, ನಂ. ೬, ಮೈತ್ರಿ ಶಾಂತಿ ಭವನ, ಬಿ. ಎಂ. ದಾಸ್ ರೋಡ್, ಪಾಟ್ನ - ೮೦೦ ೦೦೪

## ಫೈಜ್ ಶತಮಾನೋತ್ಸವ ವರ್ಷ

# ಗಜಲ್-ನಜ಼್ಮ್‌ಗಳ ಜನತೆಯ ಕವಿ ಫೈಜ್ ಅಹಮ್ಮದ್ ಫೈಜ್

**ಭಾ**ರತ ೧೯೩೦-೫೦ರ ದಶಕಗಳ ಅವಧಿಯಲ್ಲಿ ಅನೇಕ ಸ್ಥಿತ್ಯಂತರಗಳನ್ನು ಕಂಡಿತು. ವಸಾಹತುಶಾಹಿ, ಸಾಮ್ರಾಜ್ಯಶಾಹಿ, ಫ್ಯಾಸಿಸ್ಟ್, ನಾಜಿ ಶಕ್ತಿಗಳ ವಿರುದ್ಧ ಜನಪರ ಚಳುವಳಿಗಳ ಮೂಲಕ ಪ್ರಬಲ ಪ್ರತಿರೋಧ ವ್ಯಕ್ತವಾಯಿತು. ನಮ್ಮಲ್ಲಿದ್ದ ಅನೇಕ ರೂಢಿಗತ 'ಮೌಲ್ಯ'ಗಳು ಮರುವಿಶ್ಲೇಷಣೆಗೆ ಒಳಗಾದವು. ಅನೇಕ ಪ್ರಶ್ನೆಗಳಿಗೆ ಪಕ್ಕಾದವು. ಸಮತಾವಾದವೂ ದಟ್ಟವಾಗಿ ಪ್ರಭಾವಿಸಿತು.

ಕಲೆ, ಸಾಹಿತ್ಯ ಇತ್ಯಾದಿ ಪ್ರಕಾರಗಳಲ್ಲಿ ಸೃಜನಶೀಲತೆ ಮತ್ತು ಸಾಮಾಜಿಕ ಸಂವೇದನೆಗಳ ಮೈತ್ರಿಯಿಂದ ಅನೇಕ ಮೌಲ್ಯಯುತ ಕೃತಿಗಳು ಹೊರಬಂದವು. ಈ ಕಾಲಘಟ್ಟದಲ್ಲೇ ಇಂಡಿಯನ್ ಪೀಪಲ್ಸ್ ಥಿಯೇಟರ್ ಅಸೋಸಿಯೇಷನ್ (ಇಪ್ಟಾ), ಪ್ರೊಗ್ರೆಸಿವ್ ರೈಟರ್ಸ್ ಅಸೋಸಿಯೇಷನ್ (ಪಿ.ಡಬ್ಲ್ಯೂ.ಎ.) ಸಂಸ್ಥೆಗಳು ಅಸ್ತಿತ್ವಕ್ಕೆ ಬಂದವು. ಇವು 'ಕಲೆ ಕಲೆಗಾಗಿ ಅಲ್ಲ, ಜೀವನಕ್ಕಾಗಿ' ಎಂಬ ತತ್ವವನ್ನು ಪ್ರತಿಪಾದಿಸಿದವು. ಕೈಫಿ ಆಜ್ಮಿ, ಮಜ್ರುಹ್ ಸುಲ್ತಾನ್‌ಪುರಿ, ಸರ್ದಾರ್ ಜಾಫ್ರಿ, ಅಮೃತಾ ಪ್ರೀತಂ, ಇಸ್ಮತ್ ಚುಗ್‌ತಾಯ್, ಶೈಲೇಂದ್ರ, ದೇವೇಂದ್ರ ಸತ್ಯಾರ್ಥಿ, ಸಾದತ್ ಹಸನ್ ಮಾಂಟೋ, ರಘುಪತಿ ಸಹಾಯ್ 'ಫಿರಾಖ್', 'ಜೋಶ್' ಮಲಿಹಬಾದಿ ಮತ್ತು ಇತರ ಅನೇಕರು ಉರ್ದು, ಹಿಂದಿ ಮತ್ತು ಪಂಜಾಬಿ ಸಾಹಿತ್ಯದ ಮೂಲಕ ೧೯೪೦ನೇ ದಶಕದಲ್ಲಿ ನಮ್ಮ ಉಪಖಂಡದಲ್ಲಿ ಒಂದು ಸಂಚಲನವನ್ನುಂಟು ಮಾಡಿದರು. ಈ ಪುರೋಗಾಮಿ ಬರಹಗಾರರು ತಮ್ಮ ಬರೆಹಗಳ ಮೂಲಕ ಸ್ವಾತಂತ್ರ್ಯಕ್ಕಾಗಿ ಹೋರಾಡಿದರು; ಸಾಮಾನ್ಯ ಜನರ ಬವಣೆಗಳಿಗೆ ಸ್ಪಂದಿಸಿದರು. ತಮ್ಮ ವಿಚಾರ-ಕೃತಿಗಳ ಮೂಲಕ ಕ್ರಿಯಾಶಾಲಿಗಳಾದರು. ಅಂತಹ ಸಾಹಿತ್ಯಕ ಅಧ್ವರ್ಯುಗಳಲ್ಲಿ ಫೈಜ್ ಅಹಮ್ಮದ್ ಫೈಜ್ ಒಬ್ಬರಾಗಿದ್ದರು.

ಫೈಜ್ ಫೆಬ್ರುವರಿ ೧೩, ೧೯೧೧ರಂದು ಪಂಜಾಬ್ ಪ್ರಾಂತ್ಯದ ಸಿಯಾಲ್‌ಕೋಟ್‌ನ ಕಲಕದೆರ್ ಹಳ್ಳಿಯಲ್ಲಿ ಜನಿಸಿದರು. 'ಸಾರೆ ಜಹಾಂಸೆ ಅಚ್ಛಾ, ಹಿಂದೂಸ್ಥಾನ್ ಹಮಾರ...' ಬರೆದ ಪಾಕಿಸ್ತಾನದ ರಾಷ್ಟ್ರೀಯ ಕವಿ ಅಲ್ಲಮ ಮೊಹಮ್ಮದ್ ಇಕ್ಬಾಲ್ ಸಹ ಇದೇ ಸ್ಥಳದಲ್ಲಿ ಹುಟ್ಟಿದ್ದು ಒಂದು ಕಾಕತಾಳೀಯ ವಿಶೇಷ ಸಂಗತಿ. ಫೈಜ್‌ರ ತಂದೆ ಸುಲ್ತಾನ್ ಮೊಹಮ್ಮದ್ ಖಾನ್‌ರದ್ದು ಕುರಿಗಳನ್ನು ಕಾಯುವ ಕಾಯಕವಾಗಿತ್ತು. ಅನಂತರ ಮನೆಯಿಂದ ಓಡಿ ಹೋಗಿ, ಲಾಹೋರ್‌ನ ಮಸೀದಿಯೊಂದರಲ್ಲಿ ವಾಸಮಾಡುತ್ತ ಪಾರ್ಸಿ (ಪರ್ಷಿಯನ್) ಉರ್ದು ಮತ್ತು ಇಂಗ್ಲಿಷ್ ಭಾಷೆಗಳನ್ನು ಕಲಿತರು. ಅವರನ್ನು, ಬದುಕಿನ ತಿರುವುಗಳು ಆಫ್ಘಾನ್ ದೊರೆಯ ಆಪ್ತ ದುಭಾಷಿ ಮತ್ತು ಹಿರಿಯ ಮಂತ್ರಿಯ ಸ್ಥಾನಕ್ಕೆ ಏರಿಸಿದವು. ಕೇಂಬ್ರಿಡ್ಜ್ ವಿಶ್ವವಿದ್ಯಾಲಯದಲ್ಲಿ ಕಾನೂನು ಪದವಿಯನ್ನೂ ಪಡೆದರು. ಫೈಜ್‌ರ ತಾಯಿ ಫತಿಮಾ ಖಾನ್‌ರ ಕೊನೆಯ ಪತ್ನಿಯಾಗಿದ್ದರು.

ಆ ಕಾಲದಲ್ಲಿದ್ದ ಸಂಪ್ರದಾಯದಂತೆ, ಫೈಜರು ಮೊದಲು ಒಂದು ಮದ್ರಸಾದಲ್ಲಿ ಶಿಕ್ಷಣ ಪಡೆದರು. ನಂತರ ಸ್ಕಾಚ್ ಮಿಷನ್ ಹೈಸ್ಕೂಲ್‌ನಲ್ಲಿ ಅವರಿಗೆ 'ಶಮ್ಸ್-ಉಲ್-ಉಲೇಮ' (ವಿದ್ವಾಂಸರ ಸೂರ್ಯ) ಎಂದು ಖ್ಯಾತರಾಗಿದ್ದ ಸಯ್ಯಿದ್ ಮಿರ್ ಹಸನ್ ಮಾರ್ಗದರ್ಶನದಲ್ಲಿ ಶಿಕ್ಷಣ ದೊರೆಯಿತು. ಮಿರ್ ಹಸನ್ ಎಂಬಾತ ಇಕ್ಬಾಲ್‌ರಿಗೂ ಗುರುವಾಗಿದ್ದರು. ಈ ಸಮಯದಲ್ಲೇ ಅವರು ಅರೇಬಿಕ್, ಪರ್ಶಿಯನ್, ಉರ್ದು ಮತ್ತು ಆಂಗ್ಲ ಭಾಷೆಗಳನ್ನು ಕಲಿತರು. ತಾರುಣ್ಯದಲ್ಲೇ ಉರ್ದು ಮತ್ತು ಆಂಗ್ಲ ಭಾಷೆಯ ಕ್ಲಾಸಿಕಲ್ ಗ್ರಂಥಗಳನ್ನು ಓದಿದ್ದರು. ಸ್ಥಳೀಯ ಮುಷೈರಾಗಳಲ್ಲಿ ಅಲ್ಲಮ ಇಕ್ಬಾಲ್ ಯುವಕ ಫೈಜ್‌ರ ಕವನಗಳನ್ನು ಆಲಿಸಿದ್ದರು. ಕವನ ಸ್ಪರ್ಧೆಯೊಂದರಲ್ಲಿ ವಿಜೇತರಾಗಿದ್ದ ಫೈಜ್‌ರಿಗೆ ಬಹುಮಾನವನ್ನೂ ನೀಡಿದ್ದರು. ಇಕ್ಬಾಲ್‌ರು ಫೈಜ್‌ರಿಗೆ ಲಾಹೋರಿನ ಸರ್ಕಾರಿ ಕಾಲೇಜಿನಲ್ಲಿ ಉನ್ನತ ವಿದ್ಯಾಭ್ಯಾಸ ಮುಂದುವರೆಸುವಂತೆ ಸಲಹೆ ನೀಡಿದರು. ಪದವಿ ಶಿಕ್ಷಣವನ್ನು ಸಿಯಾಲ್‌ಕೋಟ್‌ನ ಮುರ್ರೇ ಕಾಲೇಜ್‌ನಲ್ಲಿ ಪಡೆದ ಫೈಜರು ಲಾಹೋರ್‌ನ ಸರ್ಕಾರಿ ಕಾಲೇಜು ಮತ್ತು ಓರಿಯಂಟಲ್ ಕಾಲೇಜ್‌ಗಳಲ್ಲಿ ಕ್ರಮವಾಗಿ ಆಂಗ್ಲ ಮತ್ತು ಅರೇಬಿಕ್ ಸಾಹಿತ್ಯಗಳನ್ನು ಓದಿ, ಸ್ನಾತಕೋತ್ತರ ಪದವಿ ಪಡೆದರು. ಆ ಕಾಲದಲ್ಲಿ ಅವರು, ಉರ್ದು ಭಾಷೆಯ ಕಾವ್ಯಕ್ಷೇತ್ರದ ದಿಗ್ಗಜರಾಗಿದ್ದ ಮಿರ್ ತಾಖಿ 'ಮಿರ್' ಮಿರ್ಜಾ ರಫಿ 'ಸೌಧ' ಮತ್ತು ಅಸಾದುಲ್ಲ ಖಾನ್ 'ಗಾಲೀಬ್'ರಿಂದ ಪ್ರಭಾವಿತರಾಗಿದ್ದರು.

ಫೈಜ್‌ರ ಮೊದಲ ಕವನ ಸಂಕಲನ – 'ನಖ್ಶ್-ಎ-ಫರ್ಯಾದಿ' [ಪ್ರಲಾಪಿಸುವ ಪ್ರತಿಬಿಂಬ (ಪ್ರತಿಮೆ)] ಯಲ್ಲಿ ಪ್ರೇಮ, ಚೆಲುವು, ವಿರಹ, ಪ್ರಿಯಕರಳ ಮುಖಾರವಿಂದ ಇತ್ಯಾದಿ ಕುರಿತ ಕೆಲವು ಕವನಗಳಿವೆ. ಸಾಮಾನ್ಯವಾಗಿ ಯೌವನಾವಸ್ಥೆಯಲ್ಲಿರುವ ಕವಿಗಳು ಬರೆಯುವಂತೆ ಫೈಜರೂ ಸಹ ತಮ್ಮ ಮಧುರ ಭಾವನೆಗಳನ್ನು ಈ ಕವನಗಳಲ್ಲಿ ಹರಿಬಿಟ್ಟಿದ್ದಾರೆ. ಒಬ್ಬ ಗದ್ಯಬರಹಗಾರನ ಬರೆಹಗಳು ವರ್ಷಗಳು ಉರುಳಿದಂತೆ ಮಾಗುತ್ತವೆ; ಒಬ್ಬ ಕವಿ ತನ್ನ ಯೌವನದಲ್ಲೇ ಉತ್ಕೃಷ್ಟವಾದದ್ದನ್ನು ರಚಿಸುತ್ತಾನೆ ಎಂಬ ಒಂದು ಸಾಮಾನ್ಯ ಗ್ರಹಿಕೆಯಿದೆ. ಇದು ಮಿರ್ಜಾ ಗಾಲೀಬ್‌ನ ವಿಷಯದಲ್ಲಿ ಸತ್ಯವಾಯಿತು. ಏಕೆಂದರೆ, ಅವನು ತನ್ನ ಇಪ್ಪತ್ತರ ಹರೆಯದಲ್ಲೇ ಕೆಲವು ಅತ್ಯುತ್ತಮ ಅನುಭಾವಿ ಕವನಗಳನ್ನು ರಚಿಸಿದ. ಆದರೆ ಫೈಜ್‌ರ ವಿಷಯದಲ್ಲಿ ಇದು ತಿರುಗಮುರುಗ ಆಯಿತು.



1965ರಲ್ಲಿ ಇಂಡೋ-ಪಾಕ್ ಸಮರ ಪ್ರಾರಂಭವಾದಾಗ ಫೈಜ್ ಸಂದಿಗ್ಧಕ್ಕೆ ಬಿದ್ದರು. ಸ್ನೇಹಿತರು ರಾಷ್ಟ್ರಭಕ್ತಿ ಗೀತೆಗಳನ್ನು ಬರೆಯಲು ಒತ್ತಾಯಿಸಿದರು. ಆದರೆ ಅವರು ಮೃತ ಸೈನಿಕನ ಕುರಿತು ಒಂದು ಹಾಡನ್ನು ಬರೆದರು. ಎರಡೂ ಕಡೆಯ ಸೈನಿಕರು ಪ್ರಾಣಾರ್ಪಣೆ ಮಾಡುತ್ತಿರುವುದನ್ನು ಕಂಡ ಅವರು ತಮ್ಮ ಆಳವಾದ ವಿಷಾದವನ್ನು ಬಹಿರಂಗಗೊಳಿಸಿದರು. ಇದರಿಂದ ಅವರು ತಮ್ಮ ದೇಶದ ರಾಷ್ಟ್ರೀಯವಾದಿಗಳು ಮತ್ತು ಕೆಲವು ಎಡಪಂಥೀಯರ ಕ್ರೋಧಕ್ಕೆ ತುತ್ತಾದರು. 1971ರಲ್ಲಿ ಪಾಕಿಸ್ತಾನದ ಎರಡನೇ ವಿಭಜನೆಯ ಅನಂತರ ಬಾಂಗ್ಲಾದೇಶ ಅಸ್ತಿತ್ವಕ್ಕೆ ಬಂದಿತು. ಪಾಕಿಸ್ತಾನದಲ್ಲೂ ಒಂದು ಚುನಾಯಿತ ಸರ್ಕಾರ ಅಧಿಕಾರದ ಚುಕ್ಕಾಣಿ ಹಿಡಿಯಿತು. ಫೈಜ್ ಅದರ ಸಾಂಸ್ಕೃತಿಕ ಸಲಹೆಗಾರರಾಗಿ ನೇಮಕಗೊಂಡರು.

ಮ. ಶ್ರೀ. ಮುರಳಿ ಕೃಷ್ಣ

ಫೈಜ್ ೧೯೩೫ರಲ್ಲಿ ಅಮೃತಸರದ ಮೊಹಮ್ಮಡನ್ ಆಂಗ್ಲೋ ಓರಿಯಂಟಲ್ ಕಾಲೇಜ್‌ನಲ್ಲಿ ಆಂಗ್ಲ ಉಪನ್ಯಾಸಕರಾಗಿ ನೇಮಕಗೊಂಡರು. ಆ ಕಾಲಘಟ್ಟದಲ್ಲಿ ನಮ್ಮ ಉಪಖಂಡ ಮಾತ್ರವಲ್ಲದೇ ಇಡೀ ವಿಶ್ವವೇ ಮಹಾ ಆರ್ಥಿಕ ಕುಸಿತದಿಂದ ತತ್ತರಿಸಿತ್ತು. ನಿರುದ್ಯೋಗ, ಬಡತನ ಮತ್ತು ಒಂದು ರೀತಿಯ ಆತಂಕ, ಭಯ ಮನೆಮಾಡಿದ್ದವು. ಫೈಜ್ ಐದು ವರ್ಷಗಳ ಕಾಲ ಆ ಕಾಲೇಜಿನಲ್ಲಿ ಪಾಠ ಮಾಡಿದರು. ಈ ಅವಧಿಯಲ್ಲೇ ಹಿಂದಿಗಿಂತಲೂ ಬೇರೆ ತೆರನಾಗಿ ಜಗತ್ತನ್ನು ಗ್ರಹಿಸುವ ಫೈಜ್ ಜನ್ಮತಾಳಿದ್ದ. ಕಾಲೇಜಿನ ಪ್ರಿನ್ಸಿಪಾಲರಾಗಿದ್ದ ಸಾಹಿಬ್‌ಜಾದ ಮಹಮ್ಮೂದ್ದೂ ಝಫರ್, ಆತನ ಮಡದಿ ಡಾ|| ರಶೀದ್ ಜೆಹಾನ್, ಸಜ್ಜಾದ್ ಜಹೀರ್ ಮತ್ತು ಅಹಮ್ಮದ್ ೧೯೩೨ರಲ್ಲಿ 'ಅಂಗಾರೆ' ಎಂಬ ಒಂದು ಸಣ್ಣಕಥೆಗಳ ಸಂಕಲನವನ್ನು ಪ್ರಕಟಿಸಿದರು. ಅದರಲ್ಲಿ, ಚಾಲ್ತಿಯಲ್ಲಿದ್ದ ರೂಢಿಗತ ಧಾರ್ಮಿಕ ಮತ್ತು ಸಂಸ್ಕೃತಿಯ ಪೂರ್ವಾಗ್ರಹಗಳ ಬಗೆಗೆ ಒಂದು ವಿನೂತನ ರೀತಿಯ ಅಭಿವ್ಯಕ್ತಿಯ ಮೂಲಕ ವಿರೋಧವನ್ನು ವ್ಯಕ್ತ ಪಡಿಸಲಾಗಿತ್ತು. ಇದನ್ನು ಬ್ರಿಟಿಷ್ ಸರ್ಕಾರ ನಿಷೇಧಿಸಿತು. ಮುಂದೆ, ಇದು ಅಖಿಲ ಭಾರತ ಪುರೋಗಾಮಿ ಬರಹಗಾರರ ಸಂಘದ (ಪಿ.ಡಬ್ಲ್ಯೂ.ಎ.) ಸ್ಥಾಪನೆಗೆ ಪ್ರೇರಣೆಯಾಯಿತು. ಈ ಬೆಳವಣಿಗೆಗಳ ದಟ್ಟ ಪ್ರಭಾವ ಫೈಜ್‌ರ ಮೇಲೆ ಆಯಿತು. ಅವರೂ ಪಿ.ಡಬ್ಲ್ಯೂ.ಎ. ಸೇರಿದರು. ಅವರ ದೃಷ್ಟಿಕೋನ ಬದಲಾಯಿಸಿತು. ಪ್ರೀತಿಯ ಬಗೆಗಿನ ಮಧುರ ಭಾವನೆಗಳು ಲೋಕ ಪ್ರೀತಿಯಾಗಿ ಮಾರ್ಪಾಟಾಯಿತು. ವೈಯಕ್ತಿಕತೆಯ ಸಾಮಾಜಿಕ ಆಯಾಮದ ಅರಿವಾಯಿತು. ಈ ಸಮಯದಲ್ಲೇ ಅವರ ಲೇಖನಿಯಿಂದ –

''ಔರ್ ಭಿ ದುಃಖ್ ಹೈ, ಜಮಾನೇ ಮೇಂ
ಮೊಹಬ್ಬತ್ ಕೆ ಸಿವಾ
ರಾಹತೇಂ ಔರ್ ಭಿ ಹೈಂ ವಸ್ಲ್ ಕಿ ರಾಹತ್ ಕೆ ಸಿವಾ''

(ಪ್ರೀತಿಯ ಜೊತೆ ವಿಶ್ವದಲ್ಲಿ ಇತರ ದುಃಖಗಳು ಇವೆ, ಸಂಯೋಗದ ಜೊತೆ ಇತರ ವಿಲಾಸಗಳೂ ಇವೆ) ಎಂಬ ಸಾಲುಗಳು ಹರಿದುಬಂದವು.

ಫೈಜ್ ೧೯೩೬ರಲ್ಲಿ ಲಕ್ನೋದಲ್ಲಿ ಜರುಗಿದ ಪಿ.ಡಬ್ಲ್ಯೂ.ಎ.ಯ ಮೊದಲನೇ ಸಮ್ಮೇಳನದಲ್ಲಿ ಭಾಗವಹಿಸಿದರು. ತರುವಾಯ ''ಬೋಲ್'' (ಮಾತಾಡು) ಎಂಬ ಪದ್ಯವನ್ನು ಬರೆದರು. ಇದರಲ್ಲಿ ಸಾಮಾಜಿಕ ನ್ಯಾಯ, ಶೋಷಣೆ ಮತ್ತು ಅನ್ಯಾಯದ ವಿರುದ್ಧದ ದನಿಗಳಿವೆ. ಬ್ರಿಟಿಷ್ ಸಾಮ್ರಾಜ್ಯದ ವಿರುದ್ಧ ಶೋಷಿತರೆಲ್ಲರೂ ಕೊನೆಯ ವರೆಗೆ ಹೋರಾಡಬೇಕೆಂಬ ಆಶಯಗಳೂ ಇವೆ. ಆಗಿನ ಸೋವಿಯತ್ ಯೂನಿಯನ್‌ನಲ್ಲಿದ್ದ ಫೈಜ್‌ರ ದುಭಾಷಿ ಮತ್ತು ಆತ್ಮೀಯ ಸಂಗಾತಿ ಲುಡ್‌ಮಿಲಾ ವಸ್ಸಿಲಿಯೆವಾ ಪ್ರಕಾರ ಈ ಕವನ ಎಲ್ಲ ಬರಹಗಾರರು ಮತ್ತು ಕಲಾವಿದರು ಶಸ್ತ್ರಾಸ್ತ್ರಗಳನ್ನು ಕೈಗೆ ತೆಗೆದುಕೊಳ್ಳಬೇಕೆಂದು ಕರೆ ನೀಡಿತು. ಅದರ ಕೆಲವು ಸಾಲುಗಳು ಹೀಗಿವೆ...

ಬೋಲ್ ಕೆ ಲಬ್ ಆಝಾದ್ ಹೈಂ ತೇರೆ
ಬೋಲ್ ಜೆಬಾನ್ ಅಬ್ ತಕ್ ತೇರೀ ಹೈ
ಬೋಲ್ ಕೆ ಸಚ್ ಝಿಂದಾ ಹೈ ಅಬ್ ತಕ್
ಬೋಲ್, ಜೋ ಕುಚ್ ಕೆಹೆನಾ ಹೈ ಕೆಹ್‌ಲೇ...

ಈ ಕವನದ ಕನ್ನಡ ಅನುವಾದದ ಸಾಲುಗಳು ಫೈಜರಿಗಿದ್ದ ಸಾಮಾಜಿಕ ಕಾಳಜಿಯನ್ನು ಅನಾವರಣ ಗೊಳಿಸುತ್ತದೆ.

ತುಟಿಗಳಿಗೆ ಅಂಕೆ ಇಲ್ಲ
ಆಡು ಮಾತಾಡು
ನಾಲಿಗೆ ಇನ್ನೂ ನಿನ್ನದೇ
ಆಡು ಮಾತಾಡು
ದೇಹ ನಿನ್ನ ಸ್ವಂತದ್ದು
ಆಡು ಮಾತಾಡು
ಜೀವ ಇನ್ನೂ ಉಳಿದಿದೆ
ಆಡು ಮಾತಾಡು.
ನೋಡು ಕಮ್ಮಾರನ ಕುಲುಮೆಯಲ್ಲಿ
ಜಗಿದೆದ್ದಿದೆ ಜ್ವಾಲೆ, ಕೆಂಪೇರಿದೆ ಲೋಹ
ಸಡಿಲಾಗಿದೆ ಎಲ್ಲ ಬೀಗಗಳ ಬಾಯಿ
ತುಂಡಾಗಿ ಬಿದ್ದಿದೆ ಸರಪಳಿ.
ದೇಹ ನಾಲಿಗೆಗಳ ಸಾವಿನ ಮುಂಚಿನ
ಈ ಎರಡು ಗಳಿಗೆ ಸಮಯವೇ ಸಾಕು
ಆಡು ಮಾತಾಡು
ಸತ್ಯ ಇನ್ನೂ ಉಸಿರಾಡುತ್ತಲಿದೆ
ಆಡು ಮಾತಾಡು
ಹೇಳಲೇ ಬೇಕಾದ್ದು ಹೇಳಿಯೇ ಬಿಡು
ಆಡು ಮಾತಾಡು

(ಅನುವಾದ - ಶ್ರೀ - ಆಧಾರ : ಲಂಕೇಶ್ ವಿಶೇಷಾಂಕ - ಮಾರ್ಚ್ ೧೬, ೨೦೧೧)

ಫೈಜ್ ಸೌಂದರ್ಯೋಪಾಸಕರಾಗಿಯೇ ಸಮಾಜದ ವಿಷಮ ಸಂಗತಿಗಳ ಬಗೆಗೆ ಗಮನ ಹರಿಸಿದರು. ತಮ್ಮ ಕಣ್ಣಮುಂದೆ ಇರುವ ಭಯಾನಕ ನಗ್ನಸತ್ಯಗಳು ಮತ್ತು ಕ್ರೌರ್ಯಗಳನ್ನು ಕಲಾವಿದರು ಮತ್ತು ಬರಹಗಾರರು ಹೇಗೆ ಉಪೇಕ್ಷಿಸಬಲ್ಲರು ಎಂಬುದು ಅವರ ಪ್ರಶ್ನೆಯಾಗಿತ್ತು. ಕೆಲವರು ಸಾಮಾಜಿಕ ಸಂವೇದನೆಗಳ ಅಭಿವ್ಯಕ್ತಿಯನ್ನು 'ಪ್ರಚಾರ ಸಾಹಿತ್ಯ' ಎಂದು ಮೂಲೆ ಗುಂಪು ಮಾಡುತ್ತಾರೆ. ಅಂತಹವರು ಫೈಜ್‌ರ ಕಾಲದಲ್ಲೂ ಇದ್ದರು. ಇಂದೂ ಇದ್ದಾರೆ. ಇಸಂ, ಚಳುವಳಿ, ಸಿದ್ಧಾಂತಗಳ ಜೊತೆ ತಮ್ಮನ್ನು ಗುರುತಿಸಿಕೊಂಡು ಸೃಜನಶೀಲ ಸಾಹಿತ್ಯದ/ಕಲೆಯ ಕೊಡುಗೆಗಳನ್ನು ನೀಡಿರುವ/ನೀಡುತ್ತಿರುವ ಹಲವರು ನಮ್ಮ ನಡುವೆ ಇದ್ದಾರೆ. ಅಂತಹವರ ಸಾಹಿತ್ಯಕೃಷಿಯನ್ನು ಸಾರಾಸಗಟಾಗಿ ತಳ್ಳಿಹಾಕುವ ವಿಮರ್ಶಕರ ದಂಡೂ ಇದೆ. ಆದರೆ ಫೈಜ್‌ರಂತಹವರು ಎಡಪಂಥೀಯವಾಗಿ ಬದ್ಧತೆಯಿಂದ ಬರೆದರು; ಸೃಜನ ಶೀಲರಾಗಿ ಉತ್ತಮರೆಂದು ಶ್ಲಾಘನೆಗೆ ಒಳಗಾದರು.

ಹತ್ತೊಂಬತ್ತನೇ ಶತಮಾನದ ಮಧ್ಯಭಾಗದಲ್ಲಿ ಗಾಲೀಬ್ ಅವರಂಥ ಉರ್ದು ಕವಿಗಳಿಂದ ಗಜಲ್ ಪ್ರಕಾರ ಶಿಖರಸ್ಥಾನ ಪಡೆದಿತ್ತು. ಆದರೆ ಫೈಜ್ ಸಾಹಿತ್ಯ ಕ್ಷೇತ್ರ ಪ್ರವೇಶಿಸಿದಾಗ, ಅದು ಕಳೆಗುಂದಿತ್ತು. ಅದರ ಕಟ್ಟುನಿಟ್ಟಾದ ಛಂದೋಬದ್ಧತೆ ಮತ್ತು ಲಯ, ನವೀನಯುಗದ ಸಂಕೀರ್ಣತೆಗಳ ಅಭಿವ್ಯಕ್ತಿಗೆ ಹೆಚ್ಚು ಅವಕಾಶ ನೀಡುವುದಿಲ್ಲವೆಂಬ ಅಭಿಪ್ರಾಯವಿತ್ತು. ಇಕ್ಬಾಲ್‌ನಂತಹವರು 'ನಜ್ಮ' ಕಾವ್ಯ ಪ್ರಕಾರದ ಮೂಲಕ ಸಮರ್ಥವಾಗಿ (ಅದರಲ್ಲೂ ಮುಖ್ಯವಾಗಿ ರಾಜಕೀಯ ಸಂದೇಶಗಳನ್ನು) ಅಭಿವ್ಯಕ್ತಿಸುತ್ತ, ಅದಕ್ಕೆ ಮನ್ನಣೆ ದೊರಕುವಂತೆ ಸಾಹಿತ್ಯ ರಚಿಸಿದರು. ಆದರೆ ಫೈಜ್‌ರಿಗೆ ಬೇರೆ ತೆರನಾದ ಕಲ್ಪನೆಗಳಿದ್ದವು. ಅವರು ಗಜಲ್ ಪ್ರಕಾರಕ್ಕೆ ನವಚೇತನವನ್ನು ನೀಡಿದರು. ಮಜ್ರೂಹ್ ಸುಲ್ತಾನ್‌ಪುರಿಯಂತಹವರ ಜೊತೆಯಲ್ಲಿ, ಗಜಲ್ ಪ್ರಕಾರ ಪುನಃ ತನ್ನ ಸ್ಥಾನ ಪಡೆಯುವ ನಿಟ್ಟಿನಲ್ಲಿ, ಅನೇಕ ಗಮನಾರ್ಹ ಕೊಡುಗೆಗಳನ್ನು ನೀಡಿದರು. ನಜ್ಮ ಪ್ರಕಾರದಲ್ಲೂ ಅನೇಕ ಪ್ರಯೋಗಗಳನ್ನು ಮಾಡಿದರು. ಅವರು ಪ್ರಕೃತಿ ತತ್ವಾವಲಂಬಿ ಪರಂಪರೆಗೆ ಮೊರೆಹೋಗಿ, ಪ್ರಕೃತಿ ದೃಶ್ಯಗಳು, ಘಟನೆಗಳು ಮತ್ತು ಸನ್ನಿವೇಶಗಳ ಅನೇಕ ಅದ್ಭುತ ಪ್ರತಿಮೆಗಳನ್ನು ಸೃಷ್ಟಿಸಿದರು. ವೈಯಕ್ತಿಕ ಅನುಭವಗಳನ್ನು 'ಝಿಂದಾನ್ ಕೆ ಏಕ್ ಶಾಮ್' (ಒಂದು ಕಾರಾಗೃಹದ ಸಂಜೆ), 'ಮಂಝಾರ್' (ಪ್ರಕೃತಿ ದೃಶ್ಯ) ಮತ್ತು 'ಹಾರ್ಟ್ ಅಟ್ಯಾಕ್' ಎಂಬ ಕವನಗಳಲ್ಲಿ ಸಾರ್ವತ್ರೀಕರಣಗೊಳಿಸಿದರು.

ಅನೇಕ ಅಪ್ರತಿಮ ಗಾಯಕರು ಫೈಜ್‌ರ ಗಜಲ್‌ಗಳನ್ನು ಅಮರಗೊಳಿಸಿದ್ದಾರೆ. ಪ್ರಣಯಭಾವ ಉಳ್ಳ 'ಮುಜ್‌ಸೇ ಪೆಹ್ಲೆ ಸಿ ಮೊಹಬ್ಬತ್...' ಗಜಲನ್ನು ನೂರ್‌ಜಹಾನ್, ರಾಜಕೀಯ ದನಿಯ 'ಹಮ್ ದೇಖೆಂಗೆ...' ಗಜಲನ್ನು ಇಕ್ಬಾಲ್ ಬಾನೋ, 'ಗುಲೋಂ ಮೈ ರಂಗ್ ಭರೆ...' ಮತ್ತು 'ಆಯೆ ಕುಚ್ ಅಬ್ರ್' ಗಜಲ್‌ಗಳನ್ನು ಮೆಹದಿ ಹಸನ್ ತಮ್ಮ ಕಂಠಸಿರಿಯ ಮೂಲಕ ಶ್ರೀಮಂತಗೊಳಿಸಿದ್ದಾರೆ.

ಫೈಜ್ ಇಂಗ್ಲೆಂಡ್ ಮೂಲದ ಅಲ್ಸೈನನ್ನು ಅಕ್ಟೋಬರ್ ೧೯೪೧ರಲ್ಲಿ ವಿವಾಹವಾದರು. ಅವರ ನಿಖಾ ನೆರವೇರಿಸಿದ್ದು ನ್ಯಾಷನಲ್ ಕಾನ್‌ಫರೆನ್ಸ್ ಪಕ್ಷದ ನಾಯಕ ಶೇಖ್ ಮೊಹಮ್ಮದ್ ಅಬ್ದುಲ್ಲಾ. ಅಲ್ಸೈ ಬ್ರಿಟನ್ನಿನ ಕಮ್ಯುನಿಸ್ಟ್ ಪಕ್ಷದ ಸದಸ್ಯೆಯಾಗಿದ್ದರು. ಅಲ್ಲಿನ 'ಫ್ರಿ ಇಂಡಿಯಾ' ಚಳುವಳಿಯ ಕಾರ್ಯಕರ್ತೆಯಾಗಿದ್ದರು. ಭಾರತದ ವಿಭಜನೆ ಫೈಜರನ್ನು ಘಾಸಿಗೊಳಿಸಿತ್ತು. ತಮ್ಮ ಒಂದು ಕವನದಲ್ಲಿ ಅವರು 'ಇದೇನಾ ನಾವು ಎದುರು ನೋಡಿದ ಮುಂಜಾನೆ?' ಎಂದು ವಿಷಾದ ವ್ಯಕ್ತ ಪಡಿಸಿದ್ದಾರೆ. ಸ್ವಾತಂತ್ರ್ಯದ ಸ್ವಲ್ಪ ಮುನ್ನ, ೧೯೪೭ರಲ್ಲಿ ಫೈಜ್‌ರು 'ದಿ ಪಾಕಿಸ್ತಾನ್ ಟೈಮ್ಸ್' ಎಂಬ ಆಂಗ್ಲ ದಿನಪತ್ರಿಕೆಯ ಸಂಪಾದಕರಾದರು. ಗದ್ಯ ಮತ್ತು ಪದ್ಯಗಳ ಮೂಲಕ ಹಲವು ವಿಚಾರಗಳನ್ನು ಓದುಗರಿಗೆ ತಲುಪಿಸಿದರು. ತಮ್ಮ ಪತ್ರಿಕೆಯಲ್ಲಿ ಕಾರ್ಮಿಕರು, ಮಹಿಳೆಯರು, ರೈತರು ಮತ್ತು ಬಡವರ ನೋವು, ಒತ್ತಾಯ ಮತ್ತು ಅಶೋತ್ತರಗಳ ದನಿಗಳಿಗೆ ಅವಕಾಶ ಕಲ್ಪಿಸಿದರು. ಕಮ್ಯುನಿಸ್ಟರ ಪ್ರತಿನಿಧಿಯಾಗಿ ಫೈಜ್‌ರು ಆಗಿದ್ದ ಪ್ರಧಾನಿ ಲಿಯಾಖತ್ ಅಲಿ ಖಾನ್ ಸರ್ಕಾರವನ್ನು ಪದಚ್ಯುತಗೊಳಿಸಿ, ಒಂದು ಮಿಲಿಟರಿ ಕ್ರಾಂತಿಗೆ ಸನ್ನದ್ಧ ರಾಗಿದ್ದರೆಂಬ ಆರೋಪದ ಕಾರಣ ಅವರನ್ನು ನಾಲ್ಕು ವರ್ಷಗಳ ಕಾಲ ಬಂಧನದಲ್ಲಿ ಇಡಲಾಯಿತು. ಈ 'ರಾವಲ್ಪಿಂಡಿ ಪಿತೂರಿ ಮೊಕದ್ದಮೆ'ಯಲ್ಲಿ ಇನ್ನೂ ಅನೇಕರು ಸೆರೆಮನೆ ವಾಸವನ್ನು ಅನುಭವಿಸಿದರು. ಬಂದೀಖಾನೆಯಲ್ಲಿದ್ದಾಗಲೇ ಫೈಜ್‌ರು 'ದಸ್ತ್-ಇ-ಸಬ' (ಮಾರುತದ ಹಸ್ತ) ಮತ್ತು 'ಝಿಂದಾನ್ ನಾಮ' (ಸೆರೆಮನೆ ನೋಟ್‌ಬುಕ್) ಎಂಬ ಎರಡು ಕವನ ಸಂಕಲನಗಳನ್ನು ಹೊರತಂದರು. ಅವರು ಜೈಲಿನ ಜೀವನದ ಅವಧಿಯೇ ತಮ್ಮ ಅತ್ಯಂತ ಕ್ರಿಯಾಶೀಲ ಪರ್ವವೆಂದು ದಾಖಲಿಸಿದ್ದಾರೆ.

ಜೈಲಿನಿಂದ ಬಿಡುಗಡೆಯಾದ ತರುವಾಯ ಫೈಜ್‌ರ ಖ್ಯಾತಿ ಹೆಚ್ಚಿತು. ಹಾಗೆಯೇ ಪಾಕಿಸ್ತಾನದ ಮಿಲಿಟರಿ ಬೆಂಬಲಿತ ಸರ್ಕಾರಗಳು ಅವರ ಬಗೆಗೆ ಭಯವನ್ನು ಹೆಚ್ಚಿಸಿಕೊಂಡವು. ೧೯೬೨ರಲ್ಲಿ ಅವರಿಗೆ ಲೆನಿನ್ ಶಾಂತಿ

ಪ್ರಶಸ್ತಿ ದೊರಕಿತು. ಅವರು ಅದನ್ನು ಸ್ವೀಕರಿಸಬಾರದೆಂದು ಆಗಿನ ಸರ್ಕಾರ ತಾಕೀತು ಮಾಡಿತು. ಏಕೆಂದರೆ ಪಾಕಿಸ್ತಾನ ಅಮೆರಿಕಾದ ಕಪ್ಪವನ್ನು ಗಳಿಸಿತ್ತು ಮತ್ತು ಎಲ್ಲ ಎಡಪಂಥೀಯ ವಿರೋಧಿಗಳ ದನಿಗಳನ್ನು ಹತ್ತಿಕ್ಕಲಾಗಿತ್ತು. ಆದರೆ ಇದ್ಯಾವುದನ್ನೂ ಲೆಕ್ಕಿಸದೆ, ಫೈಜ್ ಮಾಸ್ಕೋಗೆ ತೆರಳಿದರು. ಪ್ರಶಸ್ತಿಯನ್ನು ಸ್ವೀಕರಿಸಿ, ಅವರು ಶಾಂತಿ ಮತ್ತು ಸೂಕ್ಷ್ಮಸಂವೇದನೆಯ ಸಂದೇಶಗಳಿದ್ದ ಒಂದು ಅಮೋಘ ಭಾಷಣ ಮಾಡಿದರು. ಜನರಲ್ ಅಯೂಬ್ ಖಾನ್ ಅಧಿಕಾರಸೂತ್ರ ಹಿಡಿದಿದ್ದಾಗ, ಅವರು ಅನೇಕ ಬಾರಿ ಕಂಬಿಗಳನ್ನು ಎಣಿಸಬೇಕಾಯಿತು. ೧೯೬೫ರಲ್ಲಿ ಇಂಡೋ-ಪಾಕ್ ಸಮರ ಪ್ರಾರಂಭವಾದಾಗ ಸಂದಿಗ್ಧಕ್ಕೆ ಬಿದ್ದರು. ಸ್ನೇಹಿತರು ರಾಷ್ಟ್ರಭಕ್ತಿ ಗೀತೆಗಳನ್ನು ಬರೆಯಲು ಒತ್ತಾಯಿಸಿದರು. ಆದರೆ ಅವರು ಮೃತ ಸೈನಿಕನ ಕುರಿತು ಒಂದು ಹಾಡನ್ನು ಬರೆದರು. ಎರಡೂ ಕಡೆಯ ಸೈನಿಕರು ಪ್ರಾಣಾರ್ಪಣೆ ಮಾಡುತ್ತಿರುವುದನ್ನು ಕಂಡ ಅವರು ತಮ್ಮ ವಿಷಾದವನ್ನು ಈ ರೀತಿ ಬಹಿರಂಗಗೊಳಿಸಿದರು. ಇದರಿಂದ ಅವರು ತಮ್ಮ ದೇಶದ ರಾಷ್ಟ್ರೀಯವಾದಿಗಳು ಮತ್ತು ಕೆಲವು ಎಡಪಂಥೀಯರ ಕ್ರೋಧಕ್ಕೆ ತುತ್ತಾದರು. ೧೯೭೧ರಲ್ಲಿ ಪಾಕಿಸ್ತಾನದ ಎರಡನೇ ವಿಭಜನೆಯ ಅನಂತರ ಬಾಂಗ್ಲಾದೇಶ ಅಸ್ತಿತ್ವಕ್ಕೆ ಬಂದಿತು. ಪಾಕಿಸ್ತಾನದಲ್ಲೂ ಒಂದು ಚುನಾಯಿತ ಸರ್ಕಾರ ಅಧಿಕಾರದ ಚುಕ್ಕಾಣಿ ಹಿಡಿಯಿತು. ಫೈಜ್ ಅದರ ಸಾಂಸ್ಕೃತಿಕ ಸಲಹೆಗಾರರಾಗಿ ನೇಮಕಗೊಂಡರು. ಅವರ ಮಾರ್ಗದರ್ಶನದಲ್ಲಿ ಪಾಕಿಸ್ತಾನ ಕಲಾ ರಾಷ್ಟ್ರೀಯ ಮಂಡಲಿ ಮತ್ತು ಜನಪದ ಪರಂಪರಾ ಸಂಸ್ಥೆ ಜನ್ಮತಾಳಿದವು.

೧೯೭೭ರಲ್ಲಿ ಫೈಜ್‌ರು ಬೈರೂತ್‌ಗೆ ಭೇಟಿ ನೀಡಿದರು. ಕೆಲಕಾಲ ಯಾಸ್ಸರ್ ಅರಾಫತ್ ಜೊತೆ ಕೆಲಸ ಮಾಡಿದರು. ಆಫ್ರಿಕಾ-ಏಷ್ಯಾ ಬರಹಗಾರರ ಸಂಘದ 'ಲೋಟಸ್' ಎಂಬ ಪತ್ರಿಕೆಯ ಸಂಪಾದಕರಾಗಿ ಸೇವೆ ಸಲ್ಲಿಸಿದರು. ಇಸ್ರೇಲಿ ಹೆಲಿಕಾಪ್ಟರ್‌ಗಳು ಪಿಎಲ್‌ಓನ ಆಯಕಟ್ಟಿನ ಸ್ಥಳಗಳ ಮೇಲೆ ಬಾಂಬುಗಳ ಮಳೆಗರೆಯುತ್ತಿದ್ದಾಗ, ಅವರು 'ಪ್ಯಾಲಸ್ತೀನ್ ಮಗೂಗೆ ಒಂದು ಜೋಗುಳ' ಎಂಬ ಕವನವನ್ನು ಬರೆಯುತ್ತಿದ್ದರು. ಅದರ ಕೆಲವು ಸಾಲುಗಳು :

*ಮತ್ ರೋ ಬಚ್ಚೇ*
*ರೋ ರೋ ಕೇ ಅಭಿ*
*ತೆರಿ ಅಮ್ಮಿ ಕಿ ಆಂಖ್ ಲಗೀ ಹೈ*
*ಮತ್ ರೋ ಬಚ್ಚೇ*
*ಕುಛ್ ಹೆ ಪೆಹ್ಲೆ*
*ತೆರೆ ಅಬ್ಬಾ ನೇ*
*ಅಪ್ನೆ ಘಮ್ ಸೇ ರುಕ್ಸತ್ ಲೀ ಹೈ*
*(ಎಲೈ ಕಂದ... ಅಳಬೇಡ*
*ನಿನ್ನ ತಾಯಿ ಈಗ ಮಲಗಿದಳು ಅಳುತ್ತ...*
*ಎಲೈ ಕಂದ... ಅಳಬೇಡ*
*ಗಳಿಗೆಗಳ ಹಿಂದಷ್ಟೇ ನಿನ್ನ ಅಪ್ಪ*
*ತನ್ನ ದುಃಖಗಳಿಗೆ ವಿದಾಯ ಹೇಳಿದ್ದಾನೆ...)*

ಫೈಜ್‌ರನ್ನು ನೆನೆದಾಗ, ಚಿಲಿಯ ಜನತೆಯ ಕವಿ ಪಾಬ್ಲೊ ನೆರೂಡಾರ ಚಿತ್ರ ಮನಃಪಟಲದ ಮೇಲೆ ಮೂಡುತ್ತದೆ. ಇಬ್ಬರಲ್ಲೂ ಅನೇಕ ಸಾಮ್ಯತೆಗಳಿವೆ. ಇಬ್ಬರೂ ಸ್ವಾತಂತ್ರ್ಯ ಚಳುವಳಿಯಲ್ಲಿ ಸಕ್ರಿಯವಾಗಿ ಭಾಗವಹಿಸಿದರು. ಪ್ರಾಂತ್ಯ, ದೇಶಗಳ ಎಲ್ಲೆ ಮೀರಿ ವಿಶ್ವಮಾನವ ತತ್ವವನ್ನು ಎತ್ತಿಹಿಡಿದರು. ಈ ಪ್ರಪಂಚವು, ಅತ್ಯಂತ ನಿಕೃಷ್ಟವಾಗಿ ಬಾಳುತ್ತಿರುವ ಮನುಷ್ಯನಿಗೂ ಒಂದು ಆಶ್ರಯತಾಣವಾಗಬೇಕೆಂದು ಬಯಸಿದರು. ಒಟ್ಟಿನಲ್ಲಿ ನುಡಿದಂತೆ, ನಡೆದರು. ಫೈಜ್ ತಮ್ಮ ೭೩ನೇ ವಯಸ್ಸಿನಲ್ಲಿ, ೨೦ ನವೆಂಬರ್ ೧೯೮೪ರಂದು, ಲಾಹೋರ್‌ನಲ್ಲಿ ಕೊನೆಯುಸಿರೆಳೆದರು. "ನಾವು ಪ್ರಮುಖವಾಗಿ ಅರ್ಥ ಮಾಡಿಕೊಳ್ಳಬೇಕಾದ ಸಂಗತಿಯೆಂದರೆ ಗಾರ್ಸಿಯ ಮಾರ್ಕ್ವೇಜ್‌ರಂತೆ ಫೈಜ್‌ರನ್ನು ಸಾಹಿತ್ಯ ಸುಸಂಸ್ಕೃತರು ಮತ್ತು ಸಾಮಾನ್ಯ ಜನರು ಓದುತ್ತಿದ್ದರು ಮತ್ತು ಆಲಿಸುತ್ತಿದ್ದರು. ಅವರ ಕವನಗಳಲ್ಲಿ ಯೇಟ್ಸ್‌ನ ಸೌಂದರ್ಯಸ್ಪಂದನ ಮತ್ತು ನೆರೂಡಾರ ಶಕ್ತಿಯಿದೆ. ನನ್ನ ಅಂದಾಜಿನಂತೆ, ಫೈಜ್‌ರು ಈ ಶತಮಾನದ ಒಬ್ಬ ಶ್ರೇಷ್ಠ ಕವಿ" ಎಂಬ ಎಡ್ವರ್ಡ್ ಸೈದ್‌ರ ಮಾತುಗಳು ಈ ಮೇರುಕವಿಯ ಸಾಧನೆಗಳನ್ನು ಎತ್ತಿತೋರಿಸುತ್ತವೆ.

ಫೈಜ್ ತಮ್ಮ ಬದ್ಧ ನಿಲುವುಗಳಿಗಾಗಿ ಅನೇಕ ಕಷ್ಟ ಕೋಟಲೆಗಳನ್ನು ಎದುರಿಸಿದರು. ಆದರೂ ಕೊನೆಯವರೆಗೆ ತಾವು ನಂಬಿದ ಸಿದ್ಧಾಂತ, ಮೌಲ್ಯಗಳಿಗೆ ಅತುಕೊಂಡಿದ್ದರು. ಅವರ ಜನ್ಮಶತಾಬ್ಧಿ ವರ್ಷವನ್ನು ಭಾರತ - ಪಾಕಿಸ್ತಾನಗಳಲ್ಲಿ ಆಚರಿಸಲಾಗುತ್ತಿದೆ. ಸಮಷ್ಟಿಯ ಹಿತದ ತುಡಿತಗಳಿರುವ ಫೈಜ್‌ರ ಸಾಹಿತ್ಯ ಕೃಷಿ ಭಾರತ ಪಾಕಿಸ್ತಾನದ ಜನತೆಯ ಶಾಂತಿ, ಸ್ನೇಹ ಮತ್ತು ಸೌಹಾರ್ದತೆಯ ಸೇತುವೆಯಾಗಲಿ.

ಆಧಾರ : ಹಲವು ಮೂಲಗಳು

ಮ. ಶ್ರೀ. ಮುರಳಿ ಕೃಷ್ಣ
ನಂ. ೩೮, ३ನೇ ಕ್ರಾಸ್, ರಾಜಾ ಗಾರ್ಡನಿಯಾ ಲೇಔಟ್, ತುರಹಳ್ಳಿ
ಸುಬ್ರಹ್ಮಣ್ಯಪುರ ಅಂಚೆ, ಉತ್ತರ ಹಳ್ಳಿ, ಬೆಂಗಳೂರು - ೫೬೦ ೦೬೧



## ಮಾತಿನ ಮನೆ

ಅದೆಷ್ಟೋ ದೂರದಿಂದ
ಅಂಚೆಗಳನ್ನು ಹೊತ್ತು ತಂದು
ಹಂಚುತ್ತಿದ್ದ ಅಂಚೆಯಣ್ಣನ ಚೀಲ
ಇಂದು ನಿರಾಳವಾಗಿದೆ.
ಭಾವನೆಗಳು ಲಕೋಟೆಯೊಳಗೇ
ವಟಗುಟ್ಟುತ್ತವೆ...
ಮೊಬೈಲು ಮುಗಳ್ನಗುತ್ತದೆ!

ತಿಂಗಳಿಂದ...
ಎದೆಯ ಭಾವನೆಗಳನ್ನು
ಬಿಚ್ಚಿಡಲಾಗದೆ ಪರದಾಡುತ್ತಿದ್ದ ಹುಡುಗ...
ಹುಡುಗಿಗೆ ಮೂರಕ್ಷರದ
ಮೆಸೇಜು ಕುಟ್ಟಿ ನಿಟ್ಟುಸಿರಾಗುತ್ತಾನೆ!

ಆಗಾಗ ಇನ್‌ಬಾಕ್ಸಿಗೆ
ಬಂದು ಬೀಳುವ ಮೆಸೇಜುಗಳು,
ಪದೇ ಪದೇ ಬರುವ
'ಮಿಸ್ಡ್ ಕಾಲ್'ಗಳು

ಗಂಡ-ಹೆಂಡಿರ ಮನ ಮುರಿದು
ಅನುಮಾನದ ಹುತ್ತ ಹಬ್ಬಿಸಿ
ಸಂಸಾರದ ನಿದ್ದೆಗೆಡಿಸಿ ನಗುತ್ತವೆ!

ಮೊಬೈಲು ಬಳಸಲು ಬಾರದ
ಹಳ್ಳಿಗನೊಬ್ಬ ಅದು ಹೊರಡಿಸುವ
ತರಹೇವಾರು ರಿಂಗಣಕ್ಕೆ
ಬೆಕ್ಕಸ ಬೆರಗಾಗುತ್ತಾನೆ!

ಕೊನೆ-ಮೊದಲಿಲ್ಲದ
ಮಾತುಗಳ ಸುರಿಮಳೆಗೆ
ಜೇಬು ತೂತಾಗುತ್ತದೆ.
ಕಂಪನಿಗಳ ತಿಜೋರಿ ತುಂಬುತ್ತದೆ!

'ಮಾತು ಮನೆ ಕೆಡಿಸುತ್ತದೆ'
ಎನ್ನುತ್ತಿದ್ದ ನಮ್ಮಜ್ಜ,
ಈಗೀಗ ಅದು,
ಜೇಬಿಗೂ ಕನ್ನ ಹಾಕುತ್ತಿದೆ!

ನಾಗೇಶ್ ಜೆ. ನಾಯಕ
ಶಿಕ್ಷಕರು, ಶ್ರೀ ರಾಮಲಿಂಗೇಶ್ವರ ಪ್ರೌಢಶಾಲೆ
ಉಡಿಕೇರಿ - ೫೯೧೧೦೧
ಬೈಲಹೊಂಗಲ ತಾಲ್ಲೂಕು, ಬೆಳಗಾವಿ ಜಿಲ್ಲೆ

# ಆದರ್ಶ ದಾಂಪತ್ಯ



ನಿತ್ಯ ಭೇಟಿಯಾಗತಿದ್ರೂ ಕಿಂಚಿತ್ತಾದರೂ ಮಾತಾಡಿಸದೆ ಇರುವಂಥವರು ಇದ್ದಕ್ಕಿದ್ದಂತೆ ಕುಶಲೋಪಚಾರ ವಿಚಾರಸಕತಿದ್ರ ಆಶ್ಚರ್ಯ ಆಗುತ್ತೆ ಅಲ್ವೇ ? ಹಾಗೆ ಪಮ್ಮಿ ಎರಡು ದಿನದಿಂದೀಚೆಗೆ ಬಾರಿ ಉಪಚರಿಸತೊಡಗಿದ್ದನ್ನು ನೋಡಿದಾಗ ಪದ್ದುಗ ಪರಮಾಶ್ಚರ್ಯ ಆಗಕತಿತು. ಪಮ್ಮಿ ಹಿಂಗ ಕಾಳಜಿ ವಹಿಸ್ತಾಳ ಅಂದ್ರ ತಿಂಗಳ ಕೊನಿ ಬಂತನೂ ಅಂತ ಕ್ಯಾಲೆಂಡರ ನೋಡಿ ಇಲ್ಲ ಎಂಬುದನ್ನ ಖಾತ್ರಿ ಪಡಿಸಿಕೊಂಡ. ಖರೇನ ಹಕೀಕತ್ತು ಏನದ ಅಂತ ಕೇಳಬೇಕೆನಿಸಿದರೂ ಬಹುದಿನಗಳಿಂದ ಸಿಗದ ಇಂತಹ ಪ್ರೀತಿಯ ಉಪಚಾರಕ್ಕ ಕೇಳಿ ಯಾಕ ಕಲ್ಲು ಹಾಕಿಕೊಳ್ಳಬೇಕೆಂದು ಸುಮ್ಮನಿದ್ದ. ಬಿಟ್ಟಿ ಉಪಚಾರಕ್ಕ ಪದ್ದು ಯಾವುದೆ ಪ್ರತಿಕ್ರಿಯೆ ತೋರಿಸದೆ ಇದ್ದಾಗ ಒಂದು ದಿನ ''ರೀ.. ರೀ..ಏನಂದ್ರೆ, ನಿಮ್ಮನ್ನ ಒಂದು ಮಾತು ಕೇಳಬೇಕು ಅಂದಿನ್ರಿ'' ಅಂತ ಪೀಠಿಕೆ ಹಾಕಿದಳು. ಅಂತಹ ಮೆತ್ತನ ವೈಜು ಪಮ್ಮಿದೆ ಎಂಬ ಅನುಮಾನ ಪದ್ದುಗ ಬಂದಿತಾದರೂ ಅದನ್ನು ತೋರುಗೊಡದ ''ನೀನು ಒಂದು ಕೇಳಾಕ ಇಷ್ಟೆಲ್ಲ ಪತಿ ಸೇವಾನ ಅತಿ ಶ್ರದ್ಧೆಯಿಂದ ಮಾಡಕತಿದಿ ಅಂತ ಗೊತ್ತದ, ಮೊದಲು ಮನದಾಗ ಏನದ ಕಕ್ಕು'' ಎಂದ.

''ಏನಿಲ್ಲ ನಮ್ಮೂರಿನ ಕಲಾಕ್ಷೇತ್ರದಾಗ ನಾಳೆ ಆದರ್ಶ ದಂಪತಿ ಕಾರ್ಯಕ್ರಮ ಅದ...'' ಅಂತ... ಮಾತು ಮುಂದುವರೆಸುವಷ್ಟರಲ್ಲಿ ''ಹೌದು ಅದ, ಏನ್ಮಾಡಬೇಕೀಗ...? ಆದರ್ಶ ದಂಪತಿಗಳು ಯಾರಿರುತಾರೋ ಅವರೂ ಹೋಗ್ತಾರ. ನಿನಗ್ಯಾಕ ಹೊಟ್ಟೆ ಉರಿ ?'' ಎಂದು ಜೋರು ದಬಾಯಿಸಿದ ಪದ್ದು ಸಿಕ್ಕಿದ ಛಾನ್ಸು ಅಂದು, ''ಏನಿಲ್ಲ, ನಾವು ಆ ಕಾರ್ಯಕ್ರಮಕ್ಕ...'' ಅಂತ ವರಾತ ತೆಗೆಯೋದ್ರಾಗ... ''ಹ್ಹ...ಹ್ಹ...ಹ್ಹ... ಏನೂ, ನಾವು ಅಂತ ಛಲೋ ಕಾರ್ಯಕ್ರಮದಾಗ ಹೋಗೋದಾ ? ಅಲ್ಲಿಗೆ ಹೋದ್ರ ಆ ಸಮಾರಂಭದ ಕಿಮ್ಮತ್ತ ನಮ್ಮ ಕಪಲ್‌ನಿಂದ ಕಮ್ಮಿ ಆಗುತ್ತ ನೋಡು'', ಎಂದು ರೇಗಿಸಿದ.

''ಏನ್ರೀ, ನೀವ ಹಿಂಗ ಹೇಳಿದ್ರ, ಪ್ಲೀಜ್...ಪ್ಲೀಜ್...ಪ್ಲೀಜ್ ಹಠ ಮಾಡಬೇಡಿ, ನಮ್ಮ ಲಕ್ಕ ಇದ್ರ, ಸ್ಪರ್ಧೆಗೆ ಸೆಲೆಕ್ಟ ಆಗಿ ಅದರಾಗೂ ಗೆದ್ದರ ಎಷ್ಟೊಂದು ಬಹುಮಾನ, ಹಣ ಬರತಾವರಿ'', ಎಂದ್ಲು ಪಮ್ಮಿ ವಯ್ಯಾರದಿಂದ.

''ಅಲ್ಲೇ, ಇಡೀ ಊರಿಗೆ ಗೊತ್ತದ ನಮ್ಮದು ಎಂತಹ ಆದರ್ಶ ದಾಂಪತ್ಯ ಅಂತ. ಅದನ್ನು ಅಲ್ಲಿ ಹೋಗಿ ಇನ್ನಷ್ಟು 'ಟಾಂ ಟಾಂ' ಮಾಡಬೇಕೆಂದೇನು ? ಆ ಸ್ಪರ್ಧೆಗೆ ಇಟ್ಟಿರೋ ಪದದ ಅರ್ಥ ಗೊತ್ತಿದ್ರ ಖಂಡಿತ ಆ ಬಗ್ಗೆ ಯೋಚಿಸುತ್ತಿರಲಿಲ್ಲ ಬಿಡು'' ಎಂದು ಮುಂತಾಗಿ ಸಮಯ ಸಿಕ್ಕದ ಅಂತ ಪಮ್ಮಿ ಮೇಲೆ ಭರ್ತಿ ಸವಾರಿ ಮಾಡಿದ. ಸುಮ್ಮನೆ ಇರುವ ಸಿಂಹಕ್ಕನೂ ಮೊಲದಂತಹ ಪ್ರಾಣಿಗಳು ಅಂಜಸ್ತವಂತ. ಎಂದೂ ತಡೆದುಕೊಳ್ಳಲಾರದವಳು ಪದ್ದುನ ಮಾತುಗಳನ್ನು ನುಂಗಿಕೊಂಡಿದ್ದೆ ಪವಾಡ. ಪಮ್ಮಿ ಪಿತ್ತ ನೆತ್ತಿಗೇರಿತ್ತು ''ರೀ, ಇರಲಿ ಅಂತ ಸುಮ್ಮನಿದ್ರ, ವೇದಾಂತ ಹೇಳಿಕೊಂತ ಮೇಲೇರಿ ಬರ್ತಿರಲ್ಲ. ಏನಂತದ ಜೀವ? ಸ್ಕ್ರಿಪ್ಟೆಲ್ಲ ರೆಡಿ ಮಾಡಿನಿ ತಗೋರಿ, ಇದನ್ನು ಓದಿಕೊಳ್ಳರಿ. ನಾಳೆ ದಿನ ಬಂದ್ರಿ ಸರಿ ಹೋಯ್ತು ಇಲ್ಲಂದ್ರ ಮುಂದಿನದು ಹೇಳಲ್ಲ. ಮಾಡಿ ತೋರಿಸ್ತೀನಿ'', ಎಂದು ಕಣ್ಣು ತಿರುವಿ ಹೋದಾಗ ಬಡಪಾಯಿ ಪದ್ದುನ ಬಾಯಿಂದ ಮಾತುಗಳು ಎಲ್ಲಿ ಬರಬೇಕು ಹೇಳಿ. ಪದ್ದು ಆಡಿದ ಅಷ್ಟು ಮಾತುಗಳು ಪಮ್ಮಿಯ ಒಂದೇ ಮಾತಿಗೆ ಮಟಾಶ್ ಆಗಿದ್ದವು. ಅವಳ ಕ್ರೋಧಾಗ್ನಿಗೆ ಪದ್ದುನ ಜಂಘಾಬಲವೇ ಅಡಗಿಹೋಗಿತ್ತು. ನಿರ್ವಾಹನೆ ಇಲ್ಲ ಅಮ್ಮಾವ್ರ ಅಪ್ಪಣೆ ಆಯ್ತು ಅಂದ್ರ ಲಕ್ಷ್ಮಣ ರೇಖೆ ಇದ್ದಾಂಗ. ''ಆಯ್ತು ನಾಳೆ ದಿನ ಹೋದ್ರಾಯ್ತು. ನಮ್ಮದ ಪಾಳಿ ಬರದಾಂಗ ಮಾಡಿದ್ರ, ದೇವರೆ, ನಿನಗ ನೂರು ತೆಂಗಿನ ಕಾಯಿ ಒಡಸ್ತಿನಿ'' ಅಂತ ಮ್ಯಾಲಿನಾತಗ ಪದ್ದು ಅರ್ಜಿ ಹಾಕಿದ. .

ಸಮಾರಂಭ ನಡಿಯೋ ಕಡೆ ಮರುದಿನ ಹೋದದ್ದಾಯಿತು. ಆದರ್ಶ ದಂಪತಿ ಸ್ಪರ್ಧೆಗೆ ಜೋಡಿಗಳನ್ನು ವೇದಿಕೆಗೆ ಆಹ್ವಾನಿಸಲು ಚೀಟಿ ಎತ್ತಿದ್ದಾಯಿತು. ದೇವರು ಪದ್ದುನ ಅರ್ಜಿನ ರಿಜಕ್ಟ ಮಾಡಿದಾಂಗ ಕಾಣುತ್ತೆ ಪದ್ದುಗ ವೇದಿಕೆ ಹತ್ತಲೆಬೇಕಾದ ದುರ್ಯೋಗ ಬಂತು. ಪದ್ದು ವೇದಿಕೆ ಏರುತ್ತಿದ್ದಂತ ಸಂಸಾರ ರಹಸ್ಯ ಬಲ್ಲವರು ಗೊಳ್ಳೆಂದು ನಗುತ್ತಿರುವುದು ಕಾಣುತ್ತಿತ್ತು. ಕಾರ್ಯಕ್ರಮ ಆರಂಭ ಆತು. ಬರುವಾಗ ಪಮ್ಮಿ ಅವರು ಕೇಳೋ ಪ್ರಶ್ನೆಗೆ ಹ್ಯಾಂಗ ಉತ್ತರಿಸಬೇಕು ಅಂತ ಕಿವಿ ಹಿಂಡಿ ಹೇಳಿದ ವಿಷಯಕ್ಕೆ ವಿರುದ್ಧವಾಗಿ ರಿವರ್ಸ ಸ್ವಿಂಗನಲ್ಲಿ ಉತ್ತರ ಕೊಡುತ್ತಾ ಹೊರಟ. ಒಂದು, ಎರಡು, ಮೂರು ಎಲ್ಲಾ ಸುತ್ತುಗಳು ಮುಗುದವು. ಕೊನಿಗೆ ಫಲಿತಾಂಶ ಘೋಷಣೆಯೊಂದೇ ಬಾಕಿ ಉಳದಿತ್ತು. ನಿರೂಪಕರು, ''ಟುಡೇಸ್ ಐಡಿಯಲ್ ಕಪಲ್ ಈಸ್ ಮಿಸ್ಟರ್ ಆಂಡ್ ಮಿಸೆಸ್ ಪದ್ದು'', ಅಂದಾಗ ಪದ್ದುಗ ಹುಚ್ಚು, ಮಬ್ಬು ಎರಡು ಕೂಡೆ ಹಿಡಿಯಿತು. ತಲಿಗೆ ಬಲವಾದ ಪೆಟ್ಟು ಬಿದ್ದಾಗ ಹ್ಯಾಂಗ ಆಗುತ್ತೋ ಹಾಂಗ ಗಿಮ್ಮಿ ಗಿಮ್ಮಿ ತಿರುಗಾಕತಿತು. ಅನೌನ್ಸಮೆಂಟ ಇನ್ನೊಂದು ಸಾರಿ ಮಾಡಿ ಪ್ರಶಸ್ತಿ ಸ್ವೀಕಾರಕ್ಕ ಕರದಾಗ ಪಮ್ಮಿ ''ಬರ್ರಿ ರಾಯರೇ'' ಎಂದು ಕೊಂಕಳದಲ್ಲಿ ಕೈ ಹಾಕಿ ಫೋಟೊಗೆ ಫೋಜ್ ಕೊಡಿಸಿದಳು.

ಇಂಗು ತಿಂದ ಮಂಗನಂತನಾಗಿದ್ದ ಪದ್ದು, ಸಂಘಟಕರು ಕೊಟ್ಟ ಬಹುಮಾನ ವಗೈರಾ ವಗೈರಾಗಳನೆಲ್ಲ ಅಟೋದಲ್ಲಿ ಹಾಕಿ ಸಾಗುತ್ತಿರುವಾಗ ''ಇದು ಹ್ಯಾಂಗ ಸಾಧ್ಯ ಆಯ್ತು! ಎಂಥ ಎಡವಟ್ಟು ಉತ್ತರ ಕೊಟ್ಟಿದ್ರು... ಪಮ್ಮಿ ಏನಾದ್ರೂ ಸಂಘಟಕರಿಗೆ ಲಂಚ ಕೊಟ್ಟಿದ್ದಳೊ ಹ್ಯಾಂಗೊ ?'' ಹೀಗೆ ಮುಂತಾಗಿ ಪ್ರಶ್ನೆಗಳು ತಲೆಹೊಕ್ಕವು. ತಡಕೊಳ್ಳಲಾರದ ಪದ್ದು ಕೇಳಿಯೆ ಬಿಟ್ಟ, ''ನಿಮ್ಮ ಮದುವ್ಯಾಗ ಮನೆಯವರು ಎಂಥಾ ಸೀರಿ ಉಟ್ಟಿದ್ದರು ಎಂದು ಪ್ರಶ್ನೆ ಮಾಡಿದ್ದಕ್ಕ 'ಕಪ್ಪು ಸೀರೆ' ಎಂದಿದ್ದೆ. ಯಾವುದೆ ಕಾರ್ಯದಾಗ ಅಂತಿಮ ನಿರ್ಧಾರ ಯಾರದು ಅಂದ್ರ 'ನನ್ನದೆ' ಅಂತ ರೀಲು ಬಿಟ್ಟಿದ್ದೆ. 'ಆಸೆಯೇ ದುಃಖಕ್ಕೆ ಮೂಲ' ಅಂತಾರೆ. ನಿಮಗೆ ದುಃಖ ತಂದ ಆಸೆ ಯಾವುದು, ಎಂದಾಗ ''ನಿನ್ನನ್ನು ವರಿಸಿದ್ದು'' ಎಂದು ಹೇಳಿ ಇಡಿ ಸಭಾನ ನಗೆಗಡಲಲ್ಲಿ ತೇಲಿಸಿದ್ದೆ. ಮೂಕಾಭಿನಯ ಸುತ್ತಿನಲ್ಲಿ 'ಭರತ ನಾಟ್ಯ' ಎಂದಿತ್ತು. ನಾನು ಡ್ಯಾನ್ಸ ಬ್ರೆಕ್ ಮಾಡಿದರೂ ''ಎಲ್ಲದಕ್ಕೂ ಹೇಗೆ ಸಮರ್ಥವಾಗಿ ಉತ್ತರ ಕೊಟ್ಟೆ'' ಎಂದು ಪ್ರಶ್ನೆ ಮಾಡಿದ.

''ಅಲ್ರೀ, ನಿಮ್ಮ ಜೊತಿ ಸಂಸಾರ ನಡಸಾಕತಿ ಇಷ್ಟು ವರ್ಷ ಆತು, ನಿಮ್ಮ ಬುದ್ಧಿ ನನಗ ಗೊತ್ತಿಲ್ಲೇನಿ ? ಸೇಡು ತೀರಿಸಿಕೊಳ್ಳಕ ಇಂತಹ ಎಡವಟ್ಟು ಉತ್ತರ ಕೊಡತಿರಂತ ನಾನು ಯೋಚಿಸಿಯೇ ಉತ್ತರಿಸಿದ್ದು. ನೀವು ಡ್ಯಾನ್ಸ ಬ್ರೇಕ್ ಮಾಡಿದಾಗ, ನಿಮ್ಮ ಮುಖದ ಮೇಲಿನ ವ್ಯಂಗ್ಯದ ಭಾಷೆನ ತಿಳಿಸಿಕೊಂಡಿತು, ಅದಕ ಭರತನಾಟ್ಯ ಎಂದು'' ಎಂದಾಗ ''ಲೇ, ಶಬ್ಬಾಸ್ ! ನಿಜವಾದ ಹೆಂಡತಿ ಅಂದ್ರ ನೀನ ಕಣೆ, ನೀನ'', ಎಂದ ಪದ್ದು.

''ಹಾಂಗಾದ್ರ ಇಷ್ಟು ದಿನ ಸುಳ್ಳ ಅಂತ ತಿಳಕೊಂಡಿದ್ರೆನು ?'' ಎಂದು ನಕ್ಕು ನುಡಿದಳು.

''ಬೈ ದಿ ಬೈ ಆದಿದ್ದೆಲ್ಲಾ ಒಳಿತೆ ಆಯ್ತು ಅಂತಾರಲ್ಲ. ಹಾಗೆ ನಮ್ಮಲ್ಲಿದ್ದ ಭಿನ್ನಾಭಿಪ್ರಯಗಳೆ ಇಂತಹ ಗೆಲವು ತರಕ ಸಹಾಯ ಮಾಡಿತು. ಹಳೆದನ್ನೆಲ್ಲ ಮರೆತು ಅವರು ಹೊಗಳಿ ಕೊಂಡಾಡಿದಾಂಗ ಆದರ್ಶ ದಂಪತಿಗಳಾಗಿ ಒಳ್ಳೆ ಬಂಗಾರದ ಬದುಕು ನಡೆಸೋಣ'', ಎಂದ ಪದ್ದು.

''ಏನ್ರೀ ? ಏನು ಹೇಳತಾ ಇರೋದು ! ನಿಮಗ ತಲಿ ಕೆಟ್ಟಿಲ್ಲ ತಾನೇ ? ಅದು ಮಾತ್ರ ಸಾಧ್ಯ ಇಲ್ಲರಿ'' ಎಂದ್ಲು.

''ಯಾಕೆ ನಿನಗ ಸುಖದಿಂದ ಬಾಳೋದು ಬೇಕಿಲ್ವೇನೆ ?'' ಎಂದ ಪದ್ದು ಗಾಬರಿಯಿಂದ.

''ನಾವು ಹಿಂಗ ಹಾವು ಮುಂಗುಸಿಯಾಂಗ ಇದ್ದದ್ದಕ ಇಂತಹ ಗೆಲುವು ಸಾಧ್ಯ ಆಯ್ತು. ಅದೇ ಕಾರ್ಯಕ್ರಮದಾಗ ಜೊತೆಗಿದ್ರಲ್ಲ ರಾಜೇಶ್ವರಿ, ವೀಣಾ, ಸೀತಾ ದಂಪತಿಗಳು, ಅವರೆಲ್ಲ ಎಷ್ಟು ಅನ್ಯೋನ್ಯವಾಗಿದ್ದಾರೆ. ಆದರೆ ಅವರಿಗೆ ಬಹುಮಾನ ಬಂತಾ ? ನೀವು ಯಾವುದಕ್ಕರ ಹೇಳಿ 'ಎಸ್' ಅಂತಿನಿ. ಆದರ ಈ ವಿಷಯದಾಗ ನೋ ಕಾಂಪ್ರಮೈಜ್'' ಎಂದಾಗ ಪದ್ದುಗ ಎದಿ ಒಡೆಯೋದಷ್ಟ ಬಾಕಿ ಉಳದಿತ್ತು.

ಗುಂಡುರಾವ್ ದೇಸಾಯಿ ಮಸ್ಕಿ
ಲಿಂಗಸ್ಗೂರು ತಾಲ್ಲೂಕು, ರಾಯಚೂರು ಜಿಲ್ಲೆ



**ನ್ಯಾನೊಪ್ರಪಂಚ**
(ನ್ಯಾನೊವಿಜ್ಞಾನ ಹಾಗೂ ನ್ಯಾನೊತಂತ್ರಜ್ಞಾನದ ಪರಿಚಯ)
ಸಿ. ಎನ್. ಆರ್. ರಾವ್
ಪುಟ : ೧೧೨ + ೮
ಬೆಲೆ : ರೂ. ೨೦೦
ನವಕರ್ನಾಟಕ ಪ್ರಕಾಶನ
ಎಂಬೆಸಿ ಸೆಂಟರ್
ಕ್ರೆಸೆಂಟ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ ೫೧೫೯
ಬೆಂಗಳೂರು - ೫೬೦ ೦೦೧

ಇದು ನ್ಯಾನೊತಂತ್ರಜ್ಞಾನದ ಯುಗ. ನ್ಯಾನೊ ಎಂದರೇನು ? ಗ್ಯಾಲಕ್ಸಿಗಳ ಆಳತೆಯನ್ನು ಊಹಿಸುವುದು ಬೃಹತ್ ಎಂದು ಪರಿಗಣಿಸಿದಲ್ಲಿ ಅದಕ್ಕೆ ತದ್ವಿರುದ್ಧವಾಗಿ ನ್ಯಾನೊ ಕಣಗಳನ್ನು ಎಷ್ಟು ಸಾಧ್ಯವೋ ಅಷ್ಟು ಚಿಕ್ಕ ಆಳತೆಯವೆಂದು ತಿಳಿಯಬಹುದು. ಪ್ರಪಂಚದಾದ್ಯಂತ ಇದರ ಪ್ರಸ್ತಾಪ ಕೇಳಿಬರುತ್ತಿದ್ದು ಅದರ ಕಾರ್ಯವ್ಯಾಪ್ತಿ ನಮ್ಮನ್ನು ದಂಗು ಬಡಿಸುತ್ತದೆ. ವೈದ್ಯಕೀಯ ರೋಗ ನಿರ್ಣಯ, ಔಷಧ ಸಾಮಗ್ರಿ, ಆಟೋಮೊಬೈಲ್, ಕೈಗಾರಿಕಾ ಕ್ಷೇತ್ರಗಳಷ್ಟೇ ಅಲ್ಲದೆ ಎಲ್ಲೆಂದರಲ್ಲಿ ನ್ಯಾನೊತಂತ್ರಜ್ಞಾನ ತನ್ನ ಸಾಮರ್ಥ್ಯವನ್ನು ತೋರ್ಪಡಿಸುತ್ತ ಮುನ್ನಡೆದಿದೆ, ವಿಜ್ಞಾನಿಗಳಿಗೆ ಮಣಿದಿದೆ. ಇಲೆಕ್ಟ್ರಾನಿಕ್ಸ್ ರಂಗದಲ್ಲಂತೂ ಇದರ ಉಪಯೋಗ ಬಹಳ. ಮನುಷ್ಯನಿಗೆ ಇದು ಮಿತ್ರನೋ ಶತ್ರುವೋ ಅಥವಾ ಅವೆರಡೂ ಆಗಿರಲು ಸಾಧ್ಯವಿದೆ. ನ್ಯಾನೊಕಾರುಗಳಿಗೆ ವಿಪರೀತ ಬೇಡಿಕೆಯಿದೆ. ಭವಿಷ್ಯದಲ್ಲಿ ನ್ಯಾನೊವಿಜ್ಞಾನ - ತಂತ್ರಜ್ಞಾನವು ಎಲ್ಲ ಕ್ಷೇತ್ರಗಳನ್ನು ಆವರಿಸಲಿದ್ದು ಇಂದಿನ ವಿದ್ಯಾರ್ಥಿಗಳು ತಿಳಿದುಕೊಳ್ಳಲೇಬೇಕಾದ ಅನಿವಾರ್ಯತೆ ಉಂಟಾಗಿದೆ. ಭಾರತದಲ್ಲೇ ಬಹಳ ಹಿಂದೆ ನಿರ್ಮಾಣ ಆಗುತ್ತಿದ್ದ ಡಾಮಾಸ್ಕಸ್ ಖಡ್ಗವನ್ನು ವೂಟ್ಸ್ ಉಕ್ಕಿನಿಂದ ತಯಾರಿಸುತ್ತಿದ್ದರೆಂದೂ ಅದರಲ್ಲಿ ಅವರಿಗರಿವಿಲ್ಲದೆಯೇ ನ್ಯಾನೊತಂತ್ರಜ್ಞಾನ ಬಳಕೆಯಾಗಿತ್ತೆಂದೂ ಸಂಶೋಧನೆಗಳು ತಿಳಿಸುತ್ತಿವೆ. ಈ ಪುಸ್ತಕವನ್ನು ರಚಿಸಿದ ಸಿ. ಎನ್. ಆರ್. ರಾವ್ ಅಂತರರಾಷ್ಟ್ರೀಯ ಮಟ್ಟದಲ್ಲಿ ಉನ್ನತ ವಿಜ್ಞಾನಿ. ವಿವಿಧ ವಿಶ್ವವಿದ್ಯಾಲಯಗಳಿಂದ ೫೦ ಗೌರವ ಡಾಕ್ಟರೇಟ್ ಪಡೆದಿದ್ದಾರೆ. ೪೫ಕ್ಕೂ ಹೆಚ್ಚು ಪುಸ್ತಕಗಳನ್ನು ಪ್ರಕಟಿಸಿದ್ದು, ೧೫೦೦ಕ್ಕೂ ಹೆಚ್ಚು ಲೇಖನಗಳನ್ನು ಬರೆದಿದ್ದಾರೆ.

**ಮಹಾತ್ಮಾ ಜ್ಯೋತಿರಾವ ಫುಲೆ**
ಮರಾಠಿ ಮೂಲ : ಶ್ರೀ ಧನಂಜಯ ಕೀರ; ಕನ್ನಡಕ್ಕೆ : ಡಾ|| ಜೆ. ಪಿ. ದೊಡಮನಿ
ಪುಟ : xx + ೪೨೬ ಬೆಲೆ : ರೂ. ೨೫೦
**ಸುಶಿಲ್ ಪ್ರಕಾಶನ, ತೇರದಾಳ - ೫೮೭ ೩೧೫**

ಜನರ ಒಳಿತಿಗಾಗಿ ಶ್ರಮಿಸಿ ಜೀವನವನ್ನೇ ಸಮಾಜ ಸುಧಾರಣೆಗಾಗಿ ಮುಡುಪಾಗಿಟ್ಟು ಜನಮನ್ನಣೆ ಗಳಿಸಿದವರು ಜ್ಯೋತಿರಾವ್ ಫುಲೆ. ಅಸ್ಪೃಶ್ಯತಾ ನಿವಾರಣೆ, ವಿಧವಾವಿವಾಹ, ಹೆಣ್ಣು ಮಕ್ಕಳಿಗೆ ಶಿಕ್ಷಣ ಸೌಲಭ್ಯ ಮುಂತಾದ ಪ್ರಗತಿಪರ ವಿಚಾರಗಳಿಗೆ ಹೆಚ್ಚಿನ ಮಹತ್ವ ನೀಡಿದ ಅವರು ಸಾಕಷ್ಟು ವಿರೋಧಗಳ ನಡುವೆಯೇ ಅವುಗಳನ್ನು ಸಾಧಿಸಿ ತೋರಿಸಬೇಕಾಯಿತು. ಹಿಂದೂ ಸಮಾಜದಲ್ಲಿನ ಮೌಢ್ಯ ತುಂಬಿದ ಆಚರಣೆಯಿಂದಾಗಿ ಅಸಹನೀಯ ಬಾಳು ಸಾಗಿಸುತ್ತಿದ್ದ ಮಹಿಳೆಯರು, ಕೆಳವರ್ಗದ ಶೋಷಿತ ಜನರು ಕಟ್ಟುಕಟ್ಟಳೆಗಳನ್ನು ಮೀರಿ ಹೊಸ ಹೆಜ್ಜೆಗಳನ್ನಿಡಲು ಧೈರ್ಯ ತಾಳುತ್ತಿರಲಿಲ್ಲ. ಬಲವಾಗಿ ಬೇರೂರಿದ ನಂಬಿಕೆಗಳನ್ನಲುಗಾಡಿಸಿ ಪ್ರಗತಿಯತ್ತ ಜನರನ್ನು ಸಂಘಟಿಸಿ ಮುನ್ನಡೆಸುವುದು ಅಂದಿನ ಕಾಲದಲ್ಲಿ ಸುಲಭವೇನೂ ಆಗಿರಲಿಲ್ಲ. ದೇವಮಂದಿರ, ಮಠಮಾನ್ಯಗಳ ಪಾರಮ್ಯವನ್ನು ಒಪ್ಪಿಕೊಂಡು ಭಯಭಕ್ತಿಯಿಂದ ಅವರ ಮಾತಿನಂತೆ ನಡೆಯುತ್ತಿದ್ದ ಕಾಲವದು. ಫುಲೆ ಅವರ ಸುಧಾರಣಾ ಕಾರ್ಯಕ್ರಮಗಳಿಗೆ ಅಡೆತಡೆಗಳು ದೊಡ್ಡ ಮಟ್ಟದಲ್ಲಿ ಎದುರಾದವು. ಮಹಾತ್ಮರಿಗೆ, ಗುರಿಸಾಧಕರಿಗೆ ಕಷ್ಟಗಳನ್ನೆದುರಿಸುವುದೆಂದರೆ ಹೂವಿನ ಸರ ಎತ್ತಿದಂತೆ. ಜೀವ ಬೆದರಿಕೆ ಬಂದರೂ ಫುಲೆ ಎದೆಗುಂದಲಿಲ್ಲ. ಇವರಿಗೆ ಸಹಧರ್ಮಿಣಿಯಾಗಿ ಸಾವಿತ್ರಿಬಾಯಿ ಫುಲೆಯವರೂ ಜೊತೆಯಾಗಿ ಬಂದಮೇಲೆ ಇನ್ನೂ ಹೆಚ್ಚಿನ ಬಲ ಬಂದಿತು. ಇಂಥ ಮಹಾನ್ ವ್ಯಕ್ತಿತ್ವದ ಫುಲೆಯವರ ಜೀವನಗಾಥೆಯನ್ನು ಧನಂಜಯ ಕೀರ ಮರಾಠಿಯಲ್ಲಿ ಬರೆದಿದ್ದು ಇದೀಗ ದೊಡಮನಿ ಅವರು ಕನ್ನಡಕ್ಕೆ ಅನುವಾದಿಸಿದ್ದಾರೆ. ಅಂದಿನ ಫುಲೆಯವರಂಥ ನಿಸ್ಪೃಹ ಸಮಾಜಸೇವಕರನ್ನೂ ತಮ್ಮ ಉದ್ಧಾರವೇ ಮುಖ್ಯವಾಗಿರುವ ಇಂದಿನ ಸೋಗಿನ ಸಮಾಜೋದ್ಧಾರಕರನ್ನೂ ತುಲನೆ ಮಾಡಲು ಇಂಥ ಜೀವನಚರಿತ್ರೆಯ ಓದು ಅತ್ಯವಶ್ಯಕ.



**ಕಾಡು... ಕಣಿವೆ... ಕಡಲು...**
ಡಾ|| ದೊಡ್ಡರಂಗೇಗೌಡ
ಪುಟ : xxxiv + ೧೦೦ ಬೆಲೆ : ರೂ. ೭೦
**ಅನ್ನಪೂರ್ಣ ಪ್ರಕಾಶನ, ಸಿರಿಗುಪ್ಪ ತಾಲ್ಲೂಕು - ೫೮೩ ೧೨೦, ಬಳ್ಳಾರಿ ಜಿಲ್ಲೆ**

ದೊಡ್ಡರಂಗೇಗೌಡರು ಹಲವಾರು ಗೀತೆಗಳನ್ನು ಬರೆದು ಪ್ರಸಿದ್ಧರು. ಇವರ ಕವಿತೆಗಳನ್ನು ಸಂಗೀತಪ್ರೇಮಿಗಳು ಚಲನಚಿತ್ರ, ಆಕಾಶವಾಣಿ, ಕವಿಗೋಷ್ಠಿಗಳಲ್ಲಿ ಆಗಾಗ ಕೇಳಿ ಆನಂದಿಸಿದ್ದಾರೆ. ಸರಳವಾಗಿ ಅರ್ಥವಾಗುವ ಮನಕಲಕುವ ಭಾವನೆಗಳನ್ನುಂಟುಮಾಡುವ ಇವರ ಗೀತೆಗಳು ಚಲನಚಿತ್ರಗಳಲ್ಲಿ ಯಾವುದೋ ಒಂದು ದೃಶ್ಯಕ್ಕೆ - ಸಂದರ್ಭಕ್ಕೆ ತಕ್ಕಂತೆ ಹೊಂದಿಕೊಳ್ಳುತ್ತವೆ. ಕವಿಯ ಮನಸ್ಸು ವಿವಿಧ ಭಾವಲಹರಿಗಳಿಗೆ ಮಿಡಿಯುತ್ತಲೇ ತಾನು ನೋಡಿದ, ಅನುಭವಿಸಿದ ಪ್ರತಿಯೊಂದಕ್ಕೂ ಸ್ಪಂದಿಸುತ್ತದೆ. ಕವಿಯ ಉತ್ತಮ ಕವಿತೆಗಳನ್ನು ಗಾಯಕ ಹುಡುಕುತ್ತಲೇ ಇರುತ್ತಾನೆ. ಗೀತ ರಚನೆ - ಗೀತ ಗಾಯನ ಪರಸ್ಪರ ಬೇರ್ಪಡಿಸಲಾರದ ಸಂಬಂಧ. ವಿವಿಧ ವಿಷಯಗಳಿಗೆ ಸಂಬಂಧಿಸಿದಂತೆ ಹಲವಾರು ಕವನಗಳು ಇಲ್ಲಿವೆ. ಚಲನಚಿತ್ರಗಳಿಗಾಗಿಯೇ ಗೀತೆ, ಸಂಭಾಷಣೆಗಳನ್ನು ಬರೆದ ದೊಡ್ಡರಂಗೇಗೌಡರು ಅತ್ಯುತ್ತಮ ಗೀತ ರಚನಕಾರರೆಂದು ನಾಲ್ಕು ಬಾರಿ ಪ್ರಶಸ್ತಿ ಗಳಿಸಿದ್ದಾರೆ. ಹೊಸ ಗಾಯಕರಿಗೆ, ಗೀತೆಗಳನ್ನು ಆಯ್ದು ಸಂಗ್ರಹಿಸುವವರಿಗೆ ಇಲ್ಲಿ ಹಲವಾರು ಗೀತೆಗಳು ಲಭ್ಯವಿವೆ. ಪುಟ್ಟ ಪುಟ್ಟ ಚುಟುಕಗಳೂ ಮನಸೆಳೆಯುತ್ತವೆ. ಆದರೆ – ಈ ಸಂಕಲನದಲ್ಲಿನ ಗೀತೆಗಳನ್ನು ಆಯ್ಕೆ ಮಾಡುವ ಭರದಲ್ಲಿ ಒಂದಲ್ಲ, ಎರಡಲ್ಲ, ಒಂಬತ್ತು ಕವಿತೆಗಳು ಎರಡೆರಡು ಬಾರಿ ಬೇರೆ ಬೇರೆ ಪುಟಗಳಲ್ಲಿ ನುಸುಳಿರುವುದನ್ನು ಕವಿಯಾಗಲೀ ಪ್ರಕಾಶಕರಾಗಲೀ ಗಮನಿಸದೆ ಇರುವುದು ಮಾತ್ರ ವಿಷಾದವೆನಿಸುತ್ತದೆ.

**ಮೌಢ್ಯ ಮತ್ತು ವೈಚಾರಿಕತೆ** (ಏಳು ಕೃತಿಗಳ ಸಂಕಲನ)
ವಿಚಾರವಾದಿ ಎ. ಎಸ್. ನಟರಾಜ್
ಪುಟ : ೨೨೮ ಬೆಲೆ : ರೂ. ೧೨೦
**ರಾಜ್ ವೈಚಾರಿಕ ವೇದಿಕೆ (ರಿ)**, ನಂ. ೪೩, ರೋಹಿಣಿ, ೫ನೇ ಮುಖ್ಯ ರಸ್ತೆ, ಪದ್ಮನಾಭನಗರ, ಬೆಂಗಳೂರು - ೫೬೦ ೦೭೦



ನಮ್ಮ ದೇಶದಲ್ಲಿ ಅದೇಕೆ ವೈಜ್ಞಾನಿಕ ತಿಳುವಳಿಕೆ ಮೂಡುತ್ತಿಲ್ಲ ? ನಮ್ಮ ಮನಸ್ಸೇ ಅದಕ್ಕೆ ಸಿದ್ಧವಿಲ್ಲವೇ ಅಥವಾ ನಮ್ಮನ್ನು ಯಾರಾದರೂ ನಿಯಂತ್ರಿಸುತ್ತಾರೆಯೇ ? ಅದು ಏನಾದರಾಗಲಿ, ನಾವೀಗ ವೈಜ್ಞಾನಿಕ ಮನೋಭಾವವನ್ನು ಅವಶ್ಯವಾಗಿ ಹೆಚ್ಚಿಸಿಕೊಳ್ಳಬೇಕೆಂದು ಈ ಪುಸ್ತಕವು ಒತ್ತಾಯಿಸುತ್ತಿದೆ. ನಮ್ಮ ಸುತ್ತ ನಾವೇ ಕಲ್ಪಿಸಿಕೊಂಡ ಭ್ರಮೆಗಳಿಂದಲೂ ಬಾಲ್ಯದಲ್ಲಿ ನಮ್ಮಲ್ಲುಂಟುಮಾಡಿದ ವಿಶೇಷ ನಂಬಿಕೆಗಳ ಭಯದಿಂದಲೂ ನಾವಿಂದು ಮೌಢ್ಯಗಳಿಂದ ಹೊರಬರಲಾಗುತ್ತಿಲ್ಲ. ದೇವರು-ದೆವ್ವ, ಗ್ರಹಗತಿ, ವಾಸ್ತುದೋಷ, ಪವಾಡಗಳು, ಭೂತಗಳು ಮುಂತಾದ ತಪ್ಪು ಕಲ್ಪನೆಗಳನ್ನು ಹೇರಿ ನಮ್ಮನ್ನು ನಂಬುವಂತೆ ಮಾಡಿ ಅದಕ್ಕೆ ಪರಿಹಾರವಿದೆಯೆಂದು ಬೊಗಳೆ ಬಿಡುತ್ತಾ ನಮ್ಮ ಹಣವನ್ನೂ ಸಮಯವನ್ನೂ ಕಸಿದುಕೊಂಡು ನಮ್ಮಲ್ಲಿರುವ ನೆಮ್ಮದಿಯನ್ನು ಹಾಳುಮಾಡುತ್ತಾರೆ. ಜನರ ಮೌಢ್ಯವನ್ನು ಚೆನ್ನಾಗಿ ಉಪಯೋಗಿಸಿಕೊಂಡು ತಾವು ಧನಿಕರಾಗಲು ಯತ್ನಿಸುವ ವರ್ಗದ ಹಿತಾಸಕ್ತಿ ಇದರಲ್ಲಡಗಿದೆ. ಯಾರು ಏನೇ ಹೇಳಿದರೂ ನಮ್ಮ ಸ್ವಂತ ಬುದ್ಧಿಯನ್ನು ಸರಿಯಾದ ಸಮಯದಲ್ಲಿ ಉಪಯೋಗಿಸಿದಲ್ಲಿ ಯಾವುದೇ ಮೂಢನಂಬಿಕೆಗಳಿಗೆ ನಾವು ಬಲಿಯಾಗಲು ಸಾಧ್ಯವಿಲ್ಲವೆಂದು ಈ ಪುಸ್ತಕ ಸಾರಿ ಹೇಳುತ್ತಿದೆ. ರಾಜ್ ವೈಚಾರಿಕ ವೇದಿಕೆ ಸತತವಾಗಿ ವಿಚಾರವಾದವನ್ನು ಜನರಲ್ಲಿ ಮೂಡಿಸಲು ಶ್ರಮಿಸುವ ಸಂಸ್ಥೆ. ಒಟ್ಟು ಏಳು ಕೃತಿಗಳ ಸಂಕಲನವಾಗಿ ಈ ಕೃತಿ ರೂಪುಗೊಂಡಿದೆ.

## ಭಾಷೆ ಮತ್ತು ಜಾನಪದ

*ಡಾ॥ ಕಾ. ವೆಂ. ಶ್ರೀನಿವಾಸ ಮೂರ್ತಿ*

**ಪುಟ : viii + ೮೮** **ಬೆಲೆ : ರೂ. ೫೦**

**ಕೆ. ಬಿ. ಪ್ರಗತಿ, ಬರಹ ಪಬ್ಲಿಷಿಂಗ್ ಹೌಸ್, ಬೆಂಗಳೂರು,** ನಂ. ೧೧೯
೩ನೇ ತಿರುವು, ೮ನೇ ಮುಖ್ಯರಸ್ತೆ, ಹಂಪಿನಗರ, ಬೆಂಗಳೂರು - ೫೬೦ ೧೦೪

ಕನ್ನಡ ಭಾಷೆಯ ಬಗ್ಗೆ ಕಾಳಜಿ ಮತ್ತು ಜಾನಪದ ಸಂಸ್ಕೃತಿಯ ಬಗ್ಗೆ ಗೌರವ ಇವೆರಡೂ ಇಲ್ಲಿನ ಲೇಖನಗಳಲ್ಲಿ ವ್ಯಕ್ತವಾಗಿದೆ. ಒಂದೆಡೆ ಪುರಾತನ ಕಾಲದಿಂದ ಬಳಕೆಯಲ್ಲಿದ್ದ ಕನ್ನಡ ಭಾಷೆ ತನ್ನತನವನ್ನುಳಿಸಿಕೊಳ್ಳಲು ಹೋರಾಡುತ್ತಿದೆ. ಇನ್ನೊಂದೆಡೆ ಭಾಷಾನೀತಿ - ಭಾಷಾಪ್ರೇಮ - ಭಾಷಾಬಳಕೆ ರಾಜ್ಯೋತ್ಸವಗಳಂಥ ಸಂದರ್ಭಗಳಲ್ಲಿನ ಒತ್ತಾಯದ ಆಚರಣೆಯಾಗುತ್ತಿದೆ. ಕನ್ನಡದ ಅಭಿವೃದ್ಧಿಗಾಗಿ ಕೆಲವು ಕನ್ನಡಪರ ಸಂಘ-ಸಂಸ್ಥೆಗಳು ವಿಶೇಷವಾಗಿ ಶ್ರಮಿಸಿ, ಹೋರಾಟಗಳನ್ನು ನಡೆಸಿ ತೀರ ಇತ್ತೀಚೆಗಷ್ಟೇ ಕನ್ನಡಕ್ಕೆ ಶಾಸ್ತ್ರೀಯ ಸ್ಥಾನಮಾನ ದೊರಕಿಸಿಕೊಳ್ಳುವಲ್ಲಿ ಯಶಸ್ವಿಯಾಗಿವೆ. ಇತ್ತೀಚೆಗೆ ಕನ್ನಡ ಲಿಪಿಯ ಬರವಣಿಗೆಯಲ್ಲೂ ಗೊಂದಲ - ವಿವಾದಗಳೆದ್ದು ಕೆಲವು ಅಕ್ಷರಗಳನ್ನು ಕೈಬಿಡಬಹುದೆಂಬ ಕೂಗು ಪ್ರಾಮುಖ್ಯತೆ ಪಡೆದಿದೆ. ಎರಡನೇ ಭಾಗ ಜಾನಪದರು ಸಾಹಿತ್ಯವನ್ನು ದುಡಿಸಿಕೊಂಡ ಸ್ವತಂತ್ರ ಪ್ರವೃತ್ತಿಯನ್ನು ತಿಳಿಸುತ್ತದೆ. ಅವರಿಗೆ ಗ್ರಾಮ್ಯ ಭಾಷೆಯ ಒಲವು ಮತ್ತು ಸಹಜ ನಿರೂಪಣೆ ಅಗತ್ಯವಾಗಿತ್ತು. ತ್ರಿಪದಿ, ಚೌಪದಿ, ಷಟ್ಪದಿಗಳಿಂದ ಕೂಡಿದ ಹಾಡುಗಳು ಬದುಕಿನ ಎಲ್ಲವನ್ನೂ ತಿಳಿಸಿಕೊಡುವ ಹಂಬಲ, ಉತ್ಸಾಹ ತೋರಿದ್ದವು. ಕೆಲವು ಹಾಡುಗಳನ್ನು ಉದಾಹರಿಸಿ ಗ್ರಾಮೀಣ ಗಾದೆಗಳು, ಸ್ತ್ರೀ ಸಮುದಾಯ, ಹೆಣ್ಣಿನ ಅಳಲು, ತವರ ನೆನಪು ಮುಂತಾದ ಮನಕಲಕುವ ಬದುಕೊಂದನ್ನು ಕಣ್ಮುಂದೆ ನಿಲ್ಲಿಸಲಾಗಿದೆ. ಕನ್ನಡವೇ ಆದರೂ ಅಲ್ಲಿ ಜಾನಪದ ಜಗತ್ತಿನ ವಿಶಿಷ್ಟ ಬದುಕಿನ ಕಂಪಿದೆ. ಸರಾಗವಾಗಿ ಹರಿದುಬಂದ ಭಾಷಾಶೈಲಿಯೊಂದರ ಪರಿಚಯವಿದೆ.



## ಚಪ್ಪಲಿ ರಿಪೇರಿ (ಕಥಾ ಸಂಕಲನ)



*ಹೊರೆಯಾಲ ದೊರೆಸ್ವಾಮಿ*

**ಪುಟ : ೧೮೨** ಬೆಲೆ : ರೂ. ೧೦೦

**ತನು ಮನು ಪ್ರಕಾಶನ,** ಹೆಚ್ ಐಜಿ ೧೨೬೭
'ಕಾವ್ಯಲೋಕ', ೧ನೇ ತಿರುವು, ೨ನೇ ಹಂತ
ಶ್ರೀರಾಂಪುರ ಬಡಾವಣೆ, ಮೈಸೂರು - ೫೭೦ ೦೨೩

ನಗರ ಜೀವನ - ಗ್ರಾಮೀಣ ಜೀವನ ಎರಡೂ ಕಡೆಯ ಸಂವೇದನೆಗಳನ್ನೊಳಗೊಂಡಿರುವ ಕಥೆಗಳಿವು. ಕಥೆಗಳು ಎಲ್ಲೆಲ್ಲೂ ಸೃಷ್ಟಿಯಾಗುವಂಥ ವಾತಾವರಣ, ಸನ್ನಿವೇಶ ನಮ್ಮದು. ಅವುಗಳನ್ನು ಬಿಟ್ಟು ಈ ಪ್ರಪಂಚವಿರಲು ಸಾಧ್ಯವಿಲ್ಲ. ಆದರೆ ಉತ್ತಮ ಕಥೆಗಳು ಮಾತ್ರ ಎಲ್ಲೆಂದರಲ್ಲಿ ಸೃಷ್ಟಿಯಾಗಲು ಸಾಧ್ಯವಿಲ್ಲ. ಕಥೆಯೆಂದರೆ ಬದುಕಿನ ಭಾಗವೇ ಆಗಿದ್ದು ನಿರೂಪಿಸುವಲ್ಲಿ ಪ್ರಾಮಾಣಿಕತೆ, ಸತ್ಯದ ದರ್ಶನ ಅಗತ್ಯ ಇರಬೇಕಾಗುತ್ತದೆ. ಕಥೆಗಳಿಂದಾಗಿ ಸಾಮಾಜಿಕ ಪರಿವರ್ತನೆಯಾಗಿ ಯಾರದಾದರೂ ಅಸಹನೀಯ ಬದುಕು ಸಹ್ಯವಾಗುವುದಾದರೆ ಆ ಕಥೆಗಳ ಮೌಲ್ಯ ಹೆಚ್ಚುತ್ತದೆ. ಇಲ್ಲಿ ಕಥೆಗಳ ಮೂಲಕ ನಿರೂಪಿಸಿದ ಗ್ರಾಮೀಣ ಜೀವನದ ಸ್ತರ ಒಂದು ಮುಖವಾದರೆ ನಗರ ಜೀವನದ್ದು ಅದಕ್ಕಿಂತ ಭಿನ್ನ. ಕಥೆಗಳ ಓಟ ನಿಧಾನ. ಹಳ್ಳಿಗಳ ವಾತಾವರಣದಲ್ಲಿ ಸಂಬಂಧಗಳು ಗಾಢವಾಗಿದ್ದು ಮನ ಕಲಕಿದರೆ ನಗರಗಳಲ್ಲಿ ಅದು ಯಾಂತ್ರಿಕವಾಗಿ, ಆಕರ್ಷಣೆಗಿಂತ ವಿಕರ್ಷಣೆ ಹೆಚ್ಚಾಗಿದೆ. ಕೆಲವು ಕಥೆಗಳಲ್ಲಿ ಏಕತಾನತೆಯಿದ್ದು, ವಿವಿಧ ಕಾಲಘಟ್ಟಗಳಲ್ಲಿ ಬರೆದ ಕಾರಣದಿಂದ ಕಾಲದಲ್ಲಿನ ವ್ಯತ್ಯಾಸ ಸಹಜವಾಗಿ ಮೂಡಿಬಂದಿದೆ. ಅಂದಿನ ಬದುಕು ಇಂದಿನದಲ್ಲ; ಇಂದಿನದು ಮುಂದಿನದಲ್ಲವಾದರೂ ಮೌಲ್ಯಗಳು ಶಾಶ್ವತವಾಗಿ ಉಳಿಯುವಂಥವೆಂದು ಮನಗಾಣುತ್ತೇವೆ. ಲೇಖಕರು ಇದುವರೆಗೆ ಇನ್ನೂರಕ್ಕೂ ಮಿಕ್ಕಿ ಕಥೆಗಳನ್ನು ಬರೆದಿದ್ದಾರಾದರೂ ಹತ್ತು ಕಥೆಗಳ ಒಂದು ಸಂಕಲನ ಹಿಂದೆ ಪ್ರಕಟವಾಗಿದ್ದು ಇದೀಗ ೨೨ ಕಥೆಗಳ ಈ ಪುಸ್ತಕ ಮಾತ್ರ ಪ್ರಕಟವಾಗಿವೆ.

**– ಇಂದಿರಾಕುಮಾರಿ**
*೩೪/೧೧, ೨ನೇ ಕ್ರಾಸ್, ಬಾಂಬೆ ಡೈಯಿಂಗ್ ಸಮೀಪ, ಯಶವಂತಪುರ, ಬೆಂಗಳೂರು - ೨೨*

## ಸಾದರ ಸ್ವೀಕಾರ

**ಬುದ್ಧ ನಗುತ್ತಿಲ್ಲ** (ಕಥನ ಕವನಗಳು) ಎಸ್. ಟಿ. ಬಾಲರಾಜು
**ಪುಟ : ೧೨೦** **ಬೆಲೆ : ರೂ. ೮೦**
**ಯಂಜಲಗೆರೆ ಪ್ರಕಾಶನ,** ಸೊಂಡೇಕೆರೆ - ೫೭೭ ೫೩೨, ಚಿತ್ರದುರ್ಗ ಜಿಲ್ಲೆ, ಕರ್ನಾಟಕ

**ಇನ್ನು ಸಾಕು ಬದುಕಿದ್ದು... !?!** (ಕವನ ಸಂಕಲನ) ಅಭಿಜಾತ
**ಪುಟ : ೬೪** **ಬೆಲೆ : ರೂ. ೬೦**
**ಸವಿ-ಸವಿ ಪ್ರಕಾಶನ,** ಚನ್ನರಾಯಪಟ್ಟಣ - ೫೭೩ ೧೧೬, ಹಾಸನ ಜಿಲ್ಲೆ

**ಬರವನ್ನೇ ಮಣಿಸಿದ ಮಲ್ಲಣ್ಣ** ಶ್ರೀ ಪಡ್ರೆ
**ಪುಟ : ೩೬** **ಬೆಲೆ : ರೂ. ೨೫**
**ಕೃಷಿ ಮಾಧ್ಯಮ ಕೇಂದ್ರ,** ೧೧೯, ೨ನೇ ಮುಖ್ಯರಸ್ತೆ, ೪ನೇ ಅಡ್ಡರಸ್ತೆ, ನಾರಾಯಣಪುರ, ಧಾರವಾಡ - ೫೮೦ ೦೦೮

**ಸಂಪಾದಕರಿಗೆ ಪತ್ರಗಳು** ಎಂ. ವಿ. ಭಟ್
**ಪುಟ : ೭೧೮** **ಬೆಲೆ : ರೂ. ೪೦೦**
**ಯುಗಪುರುಷ ಪ್ರಕಟನಾಲಯ,** ಕಿನ್ನಿಗೋಳಿ - ೫೭೪ ೧೫೦, ದಕ್ಷಿಣ ಕನ್ನಡ

**ಮಹಲಿಂಗರಂಗ** (ಒಂದು ಅಧ್ಯಯನ)
ಡಾ॥ ಗುರುಪಾದ ಫಿವಾರಿ
**ಪುಟ : ೨೪೦** **ಬೆಲೆ : ರೂ. ೨೦೦**
**ಕಿಕ್ಕೇರಿ ಪಬ್ಲಿಕೇಷನ್ಸ್,** ನಂ. ೭೦೩, ೧೪ನೇ ಅಡ್ಡರಸ್ತೆ, ಚಂದ್ರಾ ಲೇಔಟ್, ಬೆಂಗಳೂರು - ೫೬೦ ೦೭೨

**ಹರ್ಲಾಪೂರದ ಹಠಯೋಗಿ** (ಜೀವನ ಚರಿತ್ರ)
ಕೆ.ಎಸ್. ಕೊಂಡ್ಲಿವಾಡ (ಕೆಎಸ್ಕೆ)
**ಪುಟ : ೨೦೮** **ಬೆಲೆ : ರೂ. ೧೦೦**
**ಶ್ರೀಗುರು ಕೊಟ್ಟೂರೇಶ್ವರ ಮಠ,** ಹರ್ಲಾಪೂರ, ಜಿಲ್ಲೆ: ಗದಗ

**ಶ್ರೀ ಗುಬ್ಬಿ ತೋಟದಪ್ಪನವರು** (ಜೀವನ ಪರಿಚಯ)
ಡಾ॥ ಎಸ್. ವಿದ್ಯಾಶಂಕರ್
**ಪುಟ : ೨೦೪** **ಬೆಲೆ : ರೂ. ೧೦೦**
**ರಾ॥ ಬ॥ ಧರ್ಮಪ್ರವರ್ತ ಗುಬ್ಬಿ ತೋಟದಪ್ಪನವರ ಧರ್ಮಸಂಸ್ಥೆ,** ಗುಬ್ಬಿ ತೋಟದಪ್ಪ ರಸ್ತೆ, ಬೆಂಗಳೂರು - ೨೩

**ಓಶೋ ಎಂಬ ವಿದ್ರೋಹಿಯ ಕಥೆ**
ಡಾ॥ ರಾಜಶೇಖರ ಮಠಪತಿ (ರಾಗಂ)
**ಪುಟ : ೧೯೬** **ಬೆಲೆ : ರೂ. ೧೨೫**
**ತನು ಮನು ಪ್ರಕಾಶನ,** 'ಕಾವ್ಯಲೋಕ', ಎಚ್ಐಜಿ. ೧೨೬೭, ೧ನೇ ಕ್ರಾಸ್, ಶ್ರೀರಾಂಪುರ ಬಡಾವಣೆ, ೨ನೇ ಹಂತ, ಮೈಸೂರು - ೫೭೦ ೦೨೩

**ಚರಿತ್ರೆ ಬರವಣಿಗೆ ಕ್ರಮಗಳು ಮತ್ತು ಸಂಶೋಧನಾ ವಿಧಾನ** (ಸಂಪುಟ - ೧) ಸಂ.: ವಿಜಯ್ ಪೂಣಚ್ಚ ತಂಬಂಡ, ವಿರೂಪಾಕ್ಷಿ ಪೂಜಾರಹಳ್ಳಿ
**ಪುಟ : ೬೦೨** **ಬೆಲೆ : ರೂ. ೩೫೦**

**ಭಾರತ ಉಪಖಂಡದ ಆಧುನಿಕಪೂರ್ವ ಚರಿತ್ರೆ** (ವಿವಿಧ ಆಯಾಮಗಳು, ಸಂ. ೨) ಪ್ರಧಾನ ಮತ್ತು ಸಂಪುಟ ಸಂಪಾದಕ : ವಿಜಯ್ ಪೂಣಚ್ಚ ತಂಬಂಡ
**ಪುಟ : ೫೮೮** **ಬೆಲೆ : ರೂ. ೩೫೦**

**ಭಾರತ ಉಪಖಂಡದ ಆಧುನಿಕ ಚರಿತ್ರೆ** (ಸಂಪುಟ - ೩)
ಸಂ.: ವಿಜಯ್ ಪೂಣಚ್ಚ ತಂಬಂಡ
**ಪುಟ : ೭೯೦** **ಬೆಲೆ : ರೂ. ೩೫೦**

**ಏಷ್ಯಾ ಚರಿತ್ರೆಯ ವಿವಿಧ ಆಯಾಮಗಳು** (ಸಂಪುಟ - ೪)
ಪ್ರ. ಸಂ.: ವಿಜಯ್ ಪೂಣಚ್ಚ ತಂಬಂಡ
ಸಂಪುಟ ಸಂ. : ಕೆ. ಮೋಹನಕೃಷ್ಣ ರೈ
**ಪುಟ : ೬೧೬** **ಬೆಲೆ : ರೂ. ೩೫೦**

**ಯೂರೋಪ್ ಚರಿತ್ರೆಯ ವಿವಿಧ ಆಯಾಮಗಳು** (ಸಂಪುಟ - ೫) ಪ್ರ. ಸಂ.: ವಿಜಯ್ ಪೂಣಚ್ಚ ತಂಬಂಡ
ಸಂಪುಟ ಸಂ. : ಕೆ. ಮೋಹನಕೃಷ್ಣ ರೈ
**ಪುಟ : ೬೦೮** **ಬೆಲೆ : ರೂ. ೩೫೦**

**ಸಮಕಾಲೀನ ಕರ್ನಾಟಕ ಚರಿತ್ರೆಯ ವಿವಿಧ ಆಯಾಮಗಳು** (ಸಂಪುಟ - ೬) ಪ್ರ. ಸಂ.: ವಿಜಯ್ ಪೂಣಚ್ಚ ತಂಬಂಡ
ಸಂಪುಟ ಸಂ. : ಎನ್. ಚೆನ್ನಸ್ವಾಮಿ ಸೋಸಲೆ
**ಪುಟ : ೭೮೮** **ಬೆಲೆ : ರೂ. ೪೦೦**

**ಆಫ್ರಿಕಾ ಚರಿತ್ರೆಯ ವಿವಿಧ ಆಯಾಮಗಳು** (ಸಂಪುಟ - ೭)
ಪ್ರ. ಸಂ.: ವಿಜಯ್ ಪೂಣಚ್ಚ ತಂಬಂಡ
ಸಂಪುಟ ಸಂ. : ಎನ್. ಚೆನ್ನಸ್ವಾಮಿ ಸೋಸಲೆ
**ಪುಟ : ೩೬೨** **ಬೆಲೆ : ರೂ. ೨೦೦**

**ಅಮೆರಿಕಾ ಚರಿತ್ರೆಯ ವಿವಿಧ ಆಯಾಮಗಳು** (ಸಂಪುಟ - ೮)
ಪ್ರ. ಸಂ.: ವಿಜಯ್ ಪೂಣಚ್ಚ ತಂಬಂಡ
ಸಂಪುಟ ಸಂ. : ವಿರೂಪಾಕ್ಷಿ ಪೂಜಾರಹಳ್ಳಿ
**ಪುಟ : ೪೨೬** **ಬೆಲೆ : ರೂ. ೨೦೦**

ಮೇಲಿನ ಎಂಟು ಚರಿತ್ರೆ ಸಂಪುಟಗಳ ಪ್ರಕಾಶಕರು
**ಪ್ರಸಾರಾಂಗ,** ಕನ್ನಡ ವಿಶ್ವವಿದ್ಯಾನಿಲಯ, ಹಂಪಿ, ವಿದ್ಯಾರಣ್ಯ - ೫೮೩ ೨೭೬




# ಮಂಗಳದ ಆಗಮನ

ಡಾ|| ಬಿ. ಎಸ್. ಶೈಲಜಾ
ಜವಾಹರ್‌ಲಾಲ್ ನೆಹರೂ ತಾರಾಲಯ, ಹೈಗ್ರೌಂಡ್ಸ್, ಬೆಂಗಳೂರು - ೫೬೦ ೦೦೧

**ಈ** ತಿಂಗಳ ಸಂಜೆಯ ಆಕಾಶದಲ್ಲಿ ಬೆಳಗುವ ಪ್ರಕಾಶಮಾನ ಚುಕ್ಕೆ ಶುಕ್ರ. ಅದರ ಮುಂದೆ ಕುಂದು ಎನಿಸುವ ಚುಕ್ಕೆ ಗುರು. ಪೂರ್ವದಲ್ಲಿರುವ ಅತಿ ಪ್ರಖರ ಸಿರಿಯಸ್ (ಲುಬ್ಧಕ) ನಕ್ಷತ್ರವೂ ಕೂಡ ಮಂಕು ಎನ್ನಿಸುವುದು. ಈಗ ಇದಕ್ಕೆ ಪ್ರತಿಸ್ಪರ್ಧಿಯಾಗಿ ಬರಲಿದೆ ಮಂಗಳ. ತಿಂಗಳ ಕೊನೆಗೆ ಸುಮಾರು ಎಂಟುಗಂಟೆಯ ಹೊತ್ತಿಗೆ ಪೂರ್ವದಲ್ಲಿ ಕಾಣಿಸಿಕೊಳ್ಳಲಿದೆ. ಬೆಳಗಿನ ಜಾವದ ವರೆಗೂ ಕಾಣ ಸಿಗುವ ಇದು ೧೦ರಂದು ಚಂದ್ರನ ಪಕ್ಕದಲ್ಲಿರುವುದು.

ಬುಧಗ್ರಹ ತಿಂಗಳ ಕೊನೆಗೆ ಸಂಜೆ ಕಾಣುವುದು. ೨೫ರಿಂದ ೨೭ರವರೆಗೆ ಸಂಜೆಯಲ್ಲಿ ಬುಧ, ಶುಕ್ರ, ಗುರು ಗ್ರಹಗಳನ್ನು ಚಂದ್ರ ಒಂದೊಂದಾಗಿ ದಾಟಿ ಹೋಗುವುದನ್ನು ಫೋಟೋ ತೆಗೆಯಲು ಒಳ್ಳೆಯ ಅವಕಾಶವಿದೆ.

ಶನಿಗ್ರಹ ಬೆಳಗಿನ ಜಾವ ಕಾಣುತ್ತದೆ. ಎಂಟರಂದು ಅದರ ಹಿನ್ನಡೆ ಆರಂಭ. ಅಂದರೆ ಸದ್ಯದಲ್ಲೇ ಅದು ರಾತ್ರಿ ಇಡೀ ನೋಡಲು ಸಿಗುವುದು ಎಂದರ್ಥ. ಚಂದ್ರ ೧೩ರ ಮುಂಜಾವು ಶನಿ ಮತ್ತು ಚಿತ್ರಾ ನಕ್ಷತ್ರಗಳ ಜೊತೆಗೂಡುವುದು.

ಈ ತಿಂಗಳಲ್ಲಿ ಸಾಧಾರಣವಾಗಿ ಆಕಾಶ ಶುಭ್ರವಾಗಿ ಇರುವುದರಿಂದ ನಕ್ಷತ್ರಗಳ ಪರಿಚಯಕ್ಕೆ ಒಳ್ಳೆಯ ಅವಕಾಶವಿದೆ. ಸುಂದರ ಪುಂಜಗಳಾದ ಕುಂತಿ (ಕೆಸಿಯೋಪಿಯಾ), ದ್ರೌಪದಿ (ಆಂಡ್ರೊಮಿಡಾ), ಪಾರ್ಥ (ಪರ್ಸಿಯುಸ್) ಇವುಗಳು ನೆತ್ತಿಯ ಮೇಲೆಯೇ ಕಾಣುತ್ತವೆ. ಈಶಾನ್ಯದಲ್ಲಿ ಹೊಳೆಯುವ ಪ್ರಖರ ನಕ್ಷತ್ರ ಬ್ರಹ್ಮ ಹೃದಯ (ಕಪೆಲ್ಲಾ). ಇದು ವಿಜಯಸಾರಥಿ (ಆರಿಗಾ) ಪುಂಜಕ್ಕೆ ಸೇರಿದ್ದು. ಅದರ ಪಕ್ಕದಲ್ಲಿ ಮಿಥುನ, ನೆತ್ತಿಯ ಮೇಲೆ ಕಂಗೊಳಿಸುವ ಮಹಾವ್ಯಾಧ (ಒರೈಯನ್). ಒಟ್ಟಿನಲ್ಲಿ ರಾಶಿ ಚಕ್ರದ ಮೇಷ, ವೃಷಭ, ಮಿಥುನಗಳು ಕಾಣುವುವು. ಕಟಕ ಬಹಳ ಕ್ಷೀಣವಾದ ಪುಂಜ. ಪೂರ್ವದ ಅಂಚಿನಲ್ಲಿ ಕಾಣುವ ಸಿಂಹರಾಶಿಯ ಮಘ ನಕ್ಷತ್ರದ ಪಕ್ಕ ಹುಣ್ಣಿಮೆಯಂದು ಚಂದ್ರ ಕಾಣುವುದು.




### ಖಗೋಳ ದಿನಚರಿ

ಫೆಬ್ರುವರಿ ೨ ಚಂದ್ರ-ರೋಹಿಣಿ ಜೋಡಿ
೮ ಹುಣ್ಣಿಮೆ ಮುಂಜಾವು ೦೩:೨೪ಕ್ಕೆ; ಚಂದ್ರನ ಪಕ್ಕ ಮಘ ನಕ್ಷತ್ರ
೧೦ ಮುಂಜಾವು ಪಶ್ಚಿಮದಲ್ಲಿ ಚಂದ್ರ ಮತ್ತು ಮಂಗಳ
೧೧ ಚಂದ್ರ - ಭೂಮಿ ನಡುವೆ ಕನಿಷ್ಠ ಅಂತರ
೧೨ ಚಿತ್ರಾ ಚಂದ್ರ ಜೋಡಿ
೧೩ ಚಿತ್ರಾ - ಶನಿ - ಚಂದ್ರ ಪುಟ್ಟತ್ರಿಕೋಣ
೧೪ ಚಾಂದ್ರಮಾಸದ ಕೊನೆಯ ಪಾದ – ಚಂದ್ರೋದಯ ನಡುರಾತ್ರಿಗೆ
೨೨ ಅಮಾವಾಸ್ಯೆ ಮುಂಜಾವು ೪:೦೫ಕ್ಕೆ
೨೩ ೨೩ರ ಸಂಜೆ ಪಶ್ಚಿಮದಲ್ಲಿ ಬುಧ ಮತ್ತು ಚಂದ್ರ
೨೫ ೨೫ರ ಸಂಜೆ ಪಶ್ಚಿಮದಲ್ಲಿ ಶುಕ್ರ ಮತ್ತು ಚಂದ್ರ
೨೬ ೨೬ರ ಸಂಜೆ ಶುಕ್ರ ಮತ್ತು ಗುರು ನಡುವೆ ಚಂದ್ರ
೨೭ ೨೭ರ ಸಂಜೆ ಶುಕ್ರ ಗುರು ಮತ್ತು ಚಂದ್ರ
ಚಂದ್ರ - ಭೂಮಿ ನಡುವೆ ಗರಿಷ್ಠ ಅಂತರ
೨೯ ೨೯ರ ಸಂಜೆ ಕೃತ್ತಿಕಾ ಮತ್ತು ರೋಹಿಣಿ ನಡುವೆ ಚಂದ್ರ



೨೫ರ ಸಂಜೆ ಪಶ್ಚಿಮದಲ್ಲಿ ಶುಕ್ರ ಮತ್ತು ಚಂದ್ರ | ೨೬ರ ಸಂಜೆ ಪಶ್ಚಿಮದಲ್ಲಿ ಶುಕ್ರ ಮತ್ತು ಗುರು ನಡುವೆ ಚಂದ್ರ | ೨೭ರ ಸಂಜೆ ಶುಕ್ರ, ಗುರು ಮತ್ತು ಚಂದ್ರ

# ಮಂತ್ರ ಕವಿತೆ

**ಓಂ** ಶಬ್ದವೇ ಬ್ರಹ್ಮ
ಓಂ ಶಬ್ದ ಮತ್ತು ಶಬ್ದ ಹಾಗೂ ಶಬ್ದ ಮತ್ತು ಇನ್ನೂ ಶಬ್ದ
ಓಂ ಪ್ರಣವ ಓಂ ಗದ್ದಲ ಓಂ ಸನ್ನೆ
ಓಂ ಹೇಳಿಕೆ ಓಂ ಅಚ್ಚರಿ ಓಂ ಘೋಷಣೆ
ಓಂ ಭಾಷಣ...
ಓಂ ಪ್ರವಚನ...

ಓಂ ಘರ್ಜನೆ  ಓಂ ಭೀಮಾರಿ ಓಂ ಕೂಗಾಟ
ಓಂ ಪಿಸುಗುಟ್ಟು ಓಂ ಬುಸುಗುಟ್ಟು  ಓಂ ಚೀತ್ಕಾರ
ಓಂ ಬೊಬ್ಬೆ ಓಂ ಸುಳಿವು ಓಂ ಪುಸಲಾವಣೆ
ಓಂ ಘೋಷಣೆ ಮತ್ತು ಘೋಷಣೆ ಹಾಗೂ ಘೋಷಣೆ
ಮತ್ತು ಇನ್ನೂ ಘೋಷಣೆ

ಓಂ ಸಕಲ ಸಕಲ ಸಕಲ
ಓಂ ಶೂನ್ಯ ಶೂನ್ಯ ಶೂನ್ಯ
ಓಂ ಶಿಲೆಯ ಮೇಲಣ ತೃಣ ಮೊಲದ ಶಿರದ ಕೊಂಬು
ಓಂ ಲವಣ -ತೈಲ -ಆಮ್ಲ - ಜೀರಿಗೆ - ಇಂಗು

ಓಂ ಇಲಿ ಹಿಕ್ಕೆ ಚೇಪೆಯ ಎಲೆ
ಓಂ ಮಾಟಗಾತಿಯ ಆಕ್ರಂದನ ಮಂತ್ರವಾದಿಯ ಮೂರ್ಖತನ
ಓಂ ಕಲ್ಲಿದ್ದಿಲು -ಉಕ್ಕು-ಇಂಧನ
ಓಂ ನಾವು ಮಾತ್ರ ಗಟ್ಟಿ ಉಳಿದವರು ರಂಧ್ರವಿರುವ ವಾದ್ಯ

ಓಂ ಇದಮನ್ನಂ ಇಮಾ ಆಪಃ ಇದಮಾಜ್ಯಂ ಇದಂ ಹವಿಃ
ಓಂ ಯಜ್ಞಮಾನ್ ಓಂ ಪುರೋಹಿತ್ ಓಂ ಚಕ್ರವರ್ತಿಗಳು ಓಂ
ಕವಿಗಳು
ಓಂ ಕ್ರಾಂತಿಃ ಕ್ರಾಂತಿಃ ಕ್ರಾಂತಿಃ ಪೂರ್ಣ ಕ್ರಾಂತಿ
ಓಂ ಶಾಂತಿಃ ಶಾಂತಿಃ ಸರ್ವೇ ಶಾಂತಿ

ಓಂ ಭ್ರಾಂತಿ ಭ್ರಾಂತಿ ಭ್ರಾಂತಿ ಸರ್ವೇ ಭ್ರಾಂತಿ
ಓಂ ಸಮರ್ಥನೆ ಸಮರ್ಥನೆ ಸಮರ್ಥನೆ ಸಮರ್ಥನೆ
ಓಂ ವಜಾ ವಜಾ ವಜಾ ವಜಾ
ಓಂ ಮುತ್ತಿಗೆ ಮುತ್ತಿಗೆ ಮುತ್ತಿಗೆ ಮುತ್ತಿಗೆ
ಓಂ ಹೊಂದಾಣಿಕೆ ಹೊಂದಾಣಿಕೆ ಹೊಂದಾಣಿಕೆ ಹೊಂದಾಣಿಕೆ

ಓಂ ಎಲ್ಲ ಪಕ್ಷಗಳಿಗಿಂತ ನನ್ನ ಪಕ್ಷ ಮಾತ್ರ ಪಕ್ಷ ಓಂ
ಓಂ ವಿಲೀನ ಶುದ್ಧೀಕರಣ ರಾಷ್ಟ್ರೀಕರಣ
ಓಂ ಅನುಮೋದನ ಉಪಶಮನ ಬಲವರ್ಧನ
ಓಂ ಆಕ್ಷೇಪಣೆ ಟೀಕೆ ಶಿಸ್ತು
ಓಂ ಆಯುಃಪೂರಾ ಸಿಂಹಾಸನದ ಮೇಲೆ ವಜ್ರಾಸನ
ಓಂ ನ್ಯಾಯಮಂಡಲಿ ಓಂ ಆಶ್ವಾಸನೆ
ಓಂ ತಟಸ್ಥ ಶಕ್ತ ಸಂಚು
ಓಂ ಗುಪ್ತಪಿತೂರಿ ಓಂ ಮಿಥ್ಯೆ ಓಂ ಸ್ಪರ್ಧೆ
ಓಂ ಬೂಟಾಟಿಕೆ ಓಂ ಉದ್ಘಾಟನೆ
ಓಂ ಮಾರನ್ ಮೋಹನ್ ಉಚ್ಚತನ್ ವಧೆ ವರ್ಚಸ್ಸು ನಾಶ

ಓಂ ಕಾಳಿ ಕಾಳಿ ಕಾಳಿ ಮಾಂಕಾಳಿ ಮಾಂಕಾಳಿ
ಓಂ ಕೊಲ್ಲು ಕೊಲ್ಲು ಕೊಲ್ಲು  ಯಾವ ಏಟೂ ವಿಫಲವಾಗಕೂಡದು
ಓಂ ನಮ್ಮ ಸಮೃದ್ಧಿ
ಓಂ ಶತ್ರುಗಳ ನಾಶ
ಓಂ ಕೊಲ್ಲು ಕೊಲ್ಲು ಕೊಲ್ಲು ಕೊಲ್ಲು ಕೊಲ್ಲು ಕೊಲ್ಲು ಕೊಲ್ಲು
ಓಂ ವಿರೋಧಿಗಳ ತಲೆಬುರುಡೆ ನಿಮ್ಮ ಕೊರಳಿಗೆ ಆಭರಣವಾಗಲಿ

ಓಂ ಅಯ್ನ್ ಹಿನ್ ವಲಿನ್ ಹುನ್ ಅದು
ಓಂ ನಾವು ತಿಲಕ್ ಮತ್ತು ಗಾಂಧಿಯ ಪಾದಗಳ ಚೀಪುವೆವು
ಓಂ ಪೋರಿಯರ ನೆರೆಗೊಂಡ ಕಣ್ದೆರೆಯ ನೇತ್ರಗಳು
ಓಂ ತುಳಸೀದಳ ಮರಸೇಬಿನ ಎಲೆ ಚಂದನ ಕುಂಕುಮ ನೈವೇದ್ಯ  ಗಂಗಾಜಲ

ಓಂ ಸಿಂಹದಂಷ್ಟ್ರ ಭಲ್ಲೂಕನಖ ಮರ್ಕಟ ವೃಷಣ
ಓಂ ನನ್ನ ಮೊಮ್ಮಗ ಆಳುವನು ನಿರಂತರ ನಿರಂತರ
ಓಂ ಚುಹ್ ಚುಹ್ ಫೂಹ್ ಫೂಹ್ ಫುಟ್ ಫೀಟ್ ಫೂಟ್
ಓಂ ವಿರೋಧಿಗಳೆದೆಯ ಮಾಡು ಛಿದ್ರ

ಓಂ ಭೈರೋ ಭೈರೋ ಭೈರೋ ಓಂ ಭಜರಂಗ ಬಲಿ
ಓಂ ಖಾಲಿ ಸಿಡಿಮದ್ದು ಟುಬಾಕಿಯ ಬಂದೂಕಿನ ನಳಿಗೆ
ಓಂ ಡಾಲರ್ ಓಂ ರೂಬಲ್ ಓಂ ಪೌಂಡ್
ಓಂ ಗದ್ದಲ ಓಂ ಸದ್ದು ಓಂ ಗಲಾಟೆ.

ಓಂ ಓಂ ಓಂ
ಓಂ ಭೂಮಿ ಭೂಮಿ ಭೂಮಿ ಸ್ವರ್ಗ ಸ್ವರ್ಗ ಸ್ವರ್ಗ
ಓಂ ಅಷ್ಟಲೋಹಗಳ ಇಟ್ಟಿಗೆಯ ಗೂಡು (ಆವಿಗೆ)
ಓಂ ಘನತೆವೆತ್ತರು ಮಹಿಮಾವಂತರು ಗೂಬೆಕುಮಾರರು
ಓಂ ದುರ್ಗ ದುರ್ಗ ದುರ್ಗ ತಾರಾ ತಾರಾ ತಾರಾ
ಓಂ ಈ ಗಟಾರಕ್ಕೆ ಪಾಮರರು ಬಾರ
ಹರಿಃ ಓಂ ತತ್ಸತ್ ಹರಿಃ ಓಂ ತತ್ಸತ್


ಮೂಲ : ಹಿಂದಿ ಕವಿ - **ನಾಗಾರ್ಜುನ**
ಆಧಾರ : ಇಂಗ್ಲಿಷ್ ಭಾಷಾಂತರ -
**ಅರುಣ್ ಕಮಲ್**
ಕನ್ನಡಾನುವಾದ :
**ಕೆ. ಎಸ್. ಮಧುಸೂದನ**
೧೫೫ - ವೈ, ೩ನೇ ಮೈನ್, ೭ನೇ ಬ್ಲಾಕ್
೪ನೇ ಫೇಸ್. ಬನಶಂಕರಿ, ೩ನೇ ಸ್ಟೇಜ್
ಬೆಂಗಳೂರು -೫೬೦ ೦೮೫






# ಜಾಗತೀಕರಣದ ಕಾಲದಲ್ಲೂ ಜಾತಿ ವ್ಯವಸ್ಥೆ ಕರಗುತ್ತಿಲ್ಲ

"ಭಾರತ ಸದ್ಯದ ಸಂದರ್ಭದಲ್ಲಿ ತನ್ನ ಅತ್ಯಲ್ಪ ಜನಸಂಖ್ಯೆಯ ಬುದ್ಧಿಮತ್ತೆ ಮತ್ತು ಪ್ರತಿಭೆಯನ್ನು ಮಾತ್ರ ಬಳಸಿಕೊಳ್ಳುತ್ತಿದೆ. ಇದರಿಂದಾಗಿ ಅಪಾರ ಪ್ರಮಾಣದ ಮಾನವ ಸಂಪನ್ಮೂಲ ಪೋಲಾಗುವುದು ಮಾತ್ರವಲ್ಲ, ಇದು ಸರಿಯಾದ ಕ್ರಮವೂ ಅಲ್ಲ." – ಎಮ್. ಎನ್. ಶ್ರೀನಿವಾಸ

**ಭಾ**ರತ ದೇಶದ ಒಟ್ಟು ಸಾಂಸ್ಕೃತಿಕ ಹಾಗೂ ಸಾಮಾಜಿಕ ಪರಿಸರದ ಆಗುಹೋಗುಗಳನ್ನು ಇಂದಿಗೂ 'ಜಾತಿ' ಎನ್ನುವ ಅಮೂರ್ತ ಸಂಸ್ಥೆಯೊಂದು ನಿರ್ಧರಿಸುತ್ತದೆ, ಆಳುತ್ತದೆ ಎನ್ನುವುದೇ ಒಂದು ದೊಡ್ಡ ವಿಷಾದದ ಸಂಗತಿ. ಕೆ. ಎಂ. ಪಣಿಕ್ಕರ್‌ರಂಥ ಚಿಂತಕರು ಭಾರತೀಯ ಸಮಾಜದ ಆಧಾರಸ್ತಂಭಗಳಾಗಿ ಅವಿಭಕ್ತ ಕುಟುಂಬ, ಗ್ರಾಮಗಳ ಜೊತೆಯಲ್ಲಿ ಜಾತಿಪದ್ಧತಿಯನ್ನು ಗುರುತಿಸಿ ಒಂದು ತಥ್ಯವನ್ನು ಹೊರಗೆಡಹಿದ್ದಾರೆ. ಪರೋಕ್ಷವಾಗಿ ಗ್ರಾಮಗಳು ಹಾಗೂ ಅವಿಭಕ್ತ ಕುಟುಂಬಗಳೆರಡೂ ಹಲವು ಮೌಲ್ಯಗಳನ್ನ ಸಂಪೋಷಿಸುವುದರ ಜೊತೆಜೊತೆಯಲ್ಲಿಯೇ ಜಾತಿ ಪದ್ಧತಿಯನ್ನು ತುಂಬ ಅಚ್ಚುಕಟ್ಟಾಗಿ ಸಂಪೋಷಿಸಿಕೊಂಡು ಬರುವಲ್ಲಿ ತಮ್ಮದೇ ಆದ ಪಾತ್ರವನ್ನು ವಹಿಸಿವೆ.

ಜಾತೀಯತೆಯ ಭಾವನೆಗಳು ಹಿಂದೆಂದಿಗಿಂತಲೂ ಇಂದು ಹೆಚ್ಚು ಗಡುಸಾಗತೊಡಗಿವೆ. ಹಿಂದಿನ ಕಾಲದಲ್ಲಿ ಸಹ್ಯವೋ ಅಸಹ್ಯವೋ... ಜಾತಿಪದ್ಧತಿಯ ಕರಾಳ ಮುಖಮಾಟದ ಮುಖಾಮುಖಿ ದರ್ಶನ ಸಾಧ್ಯವಾಗುತ್ತಿತ್ತು. ಆದರೆ ಇಂದಿನ ಜಾಗತೀಕರಣ, ವಿಶ್ವವ್ಯಾಪಕ ಮಿಡಿತ, ಜಾತ್ಯತೀತತೆ, ಮಾನವ ಕುಲವೆಲ್ಲಾ ಒಂದು ಎನ್ನುವ ಡೈಲಾಗ್‌ಗಳ ನಡುವೆ 'ಜಾತಿ' ಎನ್ನುವದು ಒಂದು ನಾಜೂಕಾದ ರಾಸಾಯನಿಕದಂತೆ ಗಾಳಿಯಲ್ಲಿಯೇ ಸುತ್ತಿ ಕಂಡರೂ ಕಾಣದೆ ಸುಳಿದಾಡುವಷ್ಟರಮಟ್ಟಿಗೆ ಅದು ಇಂದು ಸರ್ವಾಂತರ್ಯಾಮಿಯಾಗಿದೆ. ಜಾತಿಯ ಬಂಧುಗಳನ್ನು ಮೂಗಿನಿಂದಲೇ ಮೂಸಿ ಗುರುತಿಸುವಷ್ಟು ಚಾಲಾಕಿತನ ಇಂದಿನ ಆಧುನಿಕ ಸುಶಿಕ್ಷಿತ ಜಾತಿವಾದಿಗಳಿಗೆ ಇದೆ. ಇಂಥ ಒಂದು ನಿರ್ಬಂಧಿತ ಸಂಸ್ಥೆ ಸಾವಿರಾರು ವರ್ಷಗಳಿಂದಲೂ ತನ್ನ ಕಬಂಧಬಾಹುಗಳಿಂದ ಬುದ್ಧಿಜೀವಿಯಾದ ಮನುಷ್ಯನ ಸರ್ವಚಟುವಟಿಕೆಗಳನ್ನು ನಿಯಂತ್ರಿಸುವ ಸಂಗತಿಯಾಗಿ ಇಂದಿಗೂ ಉಳಿದಿರುವುದು ಆಧುನಿಕತೆಯ ಬಹು ದೊಡ್ಡ ಅಣಕವಲ್ಲದೆ ಮತ್ತೇನು..?

'ದಲಿತ್ ವಾಯ್ಸ್' ಪತ್ರಿಕೆಯ ಸಂಪಾದಕರಾದ ವಿ. ಟಿ. ರಾಜಶೇಖರ ಅವರು (ಕಾಸ್ಟ್; ಎ ನೇಶನ್ ವಿದಿನ್ ದಿ ನೇಶನ್, ೨೦೦೭-ಪು ೧) "ನಮ್ಮ ದೇಶದ ಬಹುತೇಕ ರಾಜಕೀಯ ಪಕ್ಷಗಳು ಅವು ರಾಷ್ಟ್ರೀಯ ಪಕ್ಷವಾಗಿರಲಿ, ಸಮತಾವಾದಿ ಪಕ್ಷವಾಗಿರಲಿ, ಮಡಿವಂತ ಭಾರತೀಯ ಮೂಲದ ನಾಝಿ ಸ್ವರೂಪದ ಪಕ್ಷವಾಗಿರಲಿ, ಜಾತಿಯನ್ನು ಖಡಾಖಂಡಿತವಾಗಿ ಬೇಡ ಎಂದು ತಿರಸ್ಕಾರದ ಧ್ವನಿ ಎತ್ತುತ್ತವೆ", ಎಂದಿದ್ದಾರೆ. ಆದರೆ ಕೆ. ಎಸ್. ಸಿಂಗ್ ಅವರ ನೇತೃತ್ವದಲ್ಲಿ ನಡೆದ ಭಾರತೀಯ ಮಾನವಶಾಸ್ತ್ರೀಯ ಸಮೀಕ್ಷೆ (೧೯೯೧)ಯ ಪ್ರಕಾರ ನಮ್ಮ ದೇಶದಲ್ಲಿ ಸುಮಾರು ೨೮೦೦ ಜಾತಿಗಳಿವೆ. ಅವುಗಳಲ್ಲಿ ೪೫೦ ಪರಿಶಿಷ್ಟ ಜಾತಿಗಳಿದ್ದು, ೪೬೧ ಪರಿಶಿಷ್ಟ ಪಂಗಡಗಳಿವೆ. ಸುಮಾರು ೭೬೬ ಹಿಂದುಳಿದ ಜಾತಿಗಳಿರುವ ಬಗ್ಗೆ ವರದಿಯಾಗಿದೆ. ಸಾರ್ವಜನಿಕ ವಲಯದಲ್ಲಿರುವ ಪ್ರತಿಯೊಬ್ಬ ಅಧಿಕಾರಿ, ಸಂಘ-ಸಂಸ್ಥೆಗಳು ಜಾತಿಯನ್ನು ವಿರೋಧಿಸಿ ಮಾತನಾಡುತ್ತಾರಾದರೂ ಖಾಸಗಿಯಾಗಿ ತಮ್ಮ ತಮ್ಮ ಜಾತಿಗಳನ್ನು ಸುರಕ್ಷಿತವಾಗಿ ಕಾಪಾಡಿಕೊಂಡು ಹೋಗಲು ಒಂದು ಆಪ್ತ ರಕ್ಷಾಕವಚವನ್ನು ನಿರ್ಮಿಸಿಕೊಂಡಿರುತ್ತಾರೆ. ಮಹಾತ್ಮ ಜ್ಯೋತಿರಾವ್ ಫುಲೆ "ನಮ್ಮಲ್ಲಿ ಹೊರಗಿನಿಂದ ಬಂದ ಆರ್ಯ ಬ್ರಾಹ್ಮಣರು ಈ ಜಾತಿಯ ಆವಿರ್ಭಾವಕ್ಕೆ ಕಾರಣರು. ತಮ್ಮ ಸ್ವಹಿತಾಸಕ್ತಿಯ ರಕ್ಷಣೆಯಲ್ಲಿ ಮುಗ್ಧ ಶೂದ್ರರ ತಲೆಯಲ್ಲಿ ಜಾತಿಯ ಬೀಜ ಬಿತ್ತಿದರು", ಎನ್ನುತ್ತಾರೆ. ಇತಿಹಾಸಕಾರರು, ಮಾನವಶಾಸ್ತ್ರಜ್ಞರು ಹಾಗೂ ಸಮಾಜಶಾಸ್ತ್ರಜ್ಞರು ಹೇಳುವಂತೆ ವಾಯವ್ಯ ದಿಕ್ಕಿನಿಂದ ನಮ್ಮಲ್ಲಿಗೆ ಬಂದರೆಂದು ಹೇಳಲಾಗುವ (ಕ್ರಿ.ಪೂ. ೨೦೦೦) ಆರ್ಯರ ಹಿಕಮತ್ತಿನಿಂದಾಗಿಯೇ ಈ ಜಾತಿಪದ್ಧತಿಯೆನ್ನುವದು ಉಗಮವಾಯಿತೆಂದು ಹೇಳಲಾಗುತ್ತದಾದರೂ ಸಾವಿರಾರು ವರ್ಷಗಳಿಂದಲೂ ಜಾತಿ ನಮ್ಮ ಮಧ್ಯೆ ಉಳಿದಿರುವಲ್ಲಿ ಎರಡು ಮುಖ್ಯ ಕಾರಣಗಳಿವೆ. ಒಂದನೆಯದು, ಅದೊಂದು ಪ್ರಬಲ ಸಂಸ್ಥೆ ಎಂದು ಜಾತಿಯ ಏಣಿಶ್ರೇಣಿಯಲ್ಲಿ ಇರುವ ಎಲ್ಲ ಶ್ರೇಣಿಗಳು ಒಪ್ಪಿಕೊಂಡಿರುವುದು (ಅದರಲ್ಲೂ ಮೇಲಿನ ಶ್ರೇಣಿಗಳು), ಎರಡನೆಯದು ಇದನ್ನು ಹಾಗೆ ಒಪ್ಪಿಕೊಳ್ಳುವಂತೆ ಮಾಡುವ ಹುನ್ನಾರ. ಪರಿಣಾಮ, ಜಾತಿ ಎನ್ನುವದು ದೈವ ನಿರ್ಮಿತ ಎಂಬಂತಾದ ಮಾನಸಿಕ ಹಾಗೂ ಸಾಮಾಜಿಕ ಸ್ಥಿತಿಗತಿ. ಭಾರತದಂತಹ ಬಲಾಢ್ಯ ರಾಷ್ಟ್ರದಲ್ಲಿ ಬುಡ ಕೊರೆಯುವ ಹುಳದಂತೆ ಜಾತಿಯು ಮುಗಮ್ಮಾಗಿ ಕುಳಿತು ಒಳಗೊಳಗೇ ಕೆಲಸ ಮಾಡುತ್ತದೆ. ಪ್ರತಿಯೊಂದು ಜಾತಿಯೂ ಒಂದು ಪುಟ್ಟ ನಡುಗಡ್ಡೆಯಂತೆ ಗೋಚರವಾಗುವ ಜೊತೆಯಲ್ಲಿಯೇ ತನ್ನ ತನ್ನ ಜಾತಿಯ ಜನರ ಉದ್ಧಾರವೇ ತನ್ನ ಸಮಾಜದ ಸುಧಾರಣೆ ಎನ್ನುವಂತಹ ಹಿತಾಸಕ್ತಿಯನ್ನು ಹುದುಗಿಸಿಕೊಂಡಿದೆ. ರಾಷ್ಟ್ರದ ಹಿತಕ್ಕಿಂತಲೂ ತನ್ನ ಸ್ವಜಾತಿ ಬಂಧುಗಳ ಹಿತವೇ ಮುಖ್ಯ ಎನ್ನುವಂತೆ ಈ ಜಾತಿಗಳು ಪರೋಕ್ಷವಾಗಿ ವರ್ತಿಸುವುದರಿಂದ ದೇಶದ ಐಕ್ಯತೆಗೂ ಈ ಬೆಳವಣಿಗೆ ಗಂಡಾಂತರಕಾರಿಯಾಗಿದೆ. ಜಾತಿಗಳ ಸಂಖ್ಯೆ ಚಿಕ್ಕದಾದಷ್ಟೂ ಒಗ್ಗಟ್ಟು ಗಟ್ಟಿಯಾಗಿರುತ್ತದೆ. ಜೊತೆಗೆ ಸಾಮೂಹಿಕ ಭೋಜನಕೂಟಗಳು, ಮದುವೆ, ಮುಂಜಿ, ಹಬ್ಬ ಹರಿದಿನಗಳಲ್ಲಿ ಭೌತಿಕ ಸಾಮೀಪ್ಯವು ಮತ್ತೆ ಮತ್ತೆ ಸಾಧ್ಯವಾಗುತ್ತದೆ. ಇದು ಆ ಜಾತಿಯ ಬೇರುಗಳನ್ನು ಗಟ್ಟಿಗೊಳಿಸುತ್ತದೆ. ಭಾರತೀಯ ಸಮಾಜದ ಏಕಮೇವ ಲಕ್ಷಣ ಇದಾಗಿದ್ದರೂ, ಸಪ್ತಸಾಗರದಾಚೆಗೂ ಸುಪ್ತವಾಗಿ ತನ್ನ ವಾಸನೆಯ ಮೂಲಕ ತನ್ನ ಸ್ವಜಾತಿಯವರ ಮೇಲೆ ಪ್ರಭಾವ ಬೀರುವ ಕೆಲಸ ಮಾಡುತ್ತಲೇ ಕೆನೆಯಾಗುವ, ಹೆಪ್ಪುಗಟ್ಟುವ, ಗಟ್ಟಿಯಾಗುವ ಮಾರ್ಗವನ್ನು ಕಂಡುಕೊಳ್ಳುತ್ತಿರುತ್ತದೆ.

ಕಳೆದ ಸಾವಿರಾರು ವರ್ಷಗಳಿಂದ ತನ್ನ ಪ್ರಾಬಲ್ಯ ಹಾಗೂ ಗಡಸುತನವನ್ನು ಮೆರೆಯುತ್ತಾ ಬಂದ ಜಾತಿಪದ್ಧತಿಯನ್ನು ಟಿ. ಎನ್. ಮದನ್ ಮತ್ತು ಮಜುಮ್ದಾರ್ ಎನ್ನುವ ಚಿಂತಕರು, "ಇದೊಂದು ನಿರ್ಬಂಧಿತ ಸಮೂಹ", ಎಂದಿದ್ದಾರೆ. ನಮ್ಮ ಆಹಾರ, ಭಾಷೆ, ಮನೆಗಳ ಅಲಂಕಾರ, ವಿವಾಹ, ಆರಾಧನೆ... ಹೀಗೆ ಬದುಕಿನ ಪ್ರತಿಯೊಂದು ಸಂಗತಿಯನ್ನೂ ಪ್ರಭಾವಿಸುತ್ತಾ ಬಂದಿರುವ ಜಾತಿಪದ್ಧತಿ ತನ್ನನ್ನು ವಿರೋಧಿಸಿದಾಗಲೆಲ್ಲಾ ಊಸರವಳ್ಳಿಯ ಹಾಗೆ ಕೇವಲ ಮಗ್ಗಲು ಹೊರಳಿಕೊಳ್ಳುವ, ಇಲ್ಲವೆ ಪೊರೆ ಕಳಚಿಕೊಳ್ಳುವ ಯತ್ನ ಮಾಡಿದ್ದಿದೆಯೇ ಹೊರತು ತನ್ನ ಹುಟ್ಟುಗುಣವನ್ನು ಬಿಟ್ಟುಕೊಡಲಿಲ್ಲ. "ಕೆಳಜಾತಿಗಳು" ಎನ್ನಲಾದವರು ಸಾಮಾಜಿಕ ಸಂಚಲನೆಯಲ್ಲಿ ಮೇಲ್ಮುಖವಾಗಿ ಚಲಿಸಿದರೂ ಪೂರ್ವನಿರ್ಧರಿತವಾದ ಅಂತಸ್ತು ಹಾಗೂ ಸ್ಥಾನಮಾನಗಳು ಮಾತ್ರ ಹೇಳಿಕೊಳ್ಳಬಹುದಾದ ರೀತಿಯಲ್ಲಿ ಬದಲಾಗಲಿಲ್ಲ.

ಆಧುನಿಕ ಸಂದರ್ಭದಲ್ಲಿ ಜಾತಿಪದ್ಧತಿಯಲ್ಲಿ ಉಂಟಾದ ಪ್ರಮುಖ ಬದಲಾವಣೆಯೆಂದರೆ ಹೊಸ ಹೊಸ ಜಾತಿಯ ಸಂಘಟನೆಗಳ ಉಗಮ, ಅದರ ಬೆನ್ನಲ್ಲೇ ಒಂದು ಮಠ ಹಾಗೂ ಒಬ್ಬ ಸ್ವಾಮೀಜಿ ತಲೆ ಎತ್ತುವುದು ಮಾಮೂಲಿನ ವಿಷಯ. ಆನಂತರ ತಮ್ಮ ತಮ್ಮ ಜಾತಿಗಳ ಸಭೆ, ಸಮಾರಂಭ ಹಾಗೂ ಶಕ್ತಿ ಪ್ರದರ್ಶನ. ಇಲ್ಲಿಯೂ ಆಯಾ ಜಾತಿಗಳಲ್ಲಿಯ ಪ್ರಬಲರೇ ಅದರ ಲಾಭ ಪಡೆಯುವುದುಂಟು. ಈ ಬಗೆಯ ಜಾತಿಯ ಸಂಘಟನೆಗಳಿಂದ ಏನಾದರೂ ತುಸು ಲಾಭವಾಗಿದೆ ಎಂತಾದರೆ ಅದು ಆಯಾ ಜಾತಿಯ ಜನರಿಗೆ ಎಲ್ಲೋ ಚೂರುಪಾರು ಸಾಮಾಜಿಕ ಸುಭದ್ರತೆಯ ಭಾವನೆ ಬಂದೊದಗಿರುವದು.

ಇಂಥ ಜಾತಿಪದ್ಧತಿಯ ನಿರ್ಮೂಲನೆಯ ಬಗ್ಗೆ ಕೇವಲ ಕನಸು ಕಾಣಬಹುದೇನೋ...? ಇಲ್ಲವೇ ಒಂದು 'ಯುಟೋಪಿಯಾ' ರಚಿಸಬಹುದೇನೋ...? ರಾಮಮನೋಹರ ಲೋಹಿಯಾ ಅವರು ತಮ್ಮ 'ಜಾತಿಪದ್ಧತಿ'(ಪು. ೧೪೧) ಎನ್ನುವ ಕೃತಿಯಲ್ಲಿ, "ಜಾತಿವಿನಾಶ ಎನ್ನುವದು ಸಾರ್ವಜನಿಕ ಜೀವನದ ಅತಿ ಮಹತ್ವದ ಅವಶ್ಯಕತೆಯಾಗಿದೆ. ಅಧುನಿಕನಾಗ ಬಯಸಿದ ಪ್ರತಿಯೊಬ್ಬನೂ ಜಾತಿವಿನಾಶ ಮಾಡಬೇಕೆನ್ನುತ್ತಾನೆ. ಆದರೆ ಹಾಗೆ ಮಾಡಲು ಯಾರೂ ಸರಿಯಾದ ಕ್ರಮ ತೆಗೆದುಕೊಳ್ಳುತ್ತಿಲ್ಲ", ಎಂದಿರುವದನ್ನು ನೋಡಿದರೆ ಲೋಹಿಯಾರನ್ನು ಕಾಡಿದ ಈ ಜಾತಿಯ ಭೂತ ಇಂದಿಗೂ ಆ ಮನೋಭಾವದ ಅನೇಕರನ್ನು ಕಾಡುತ್ತಿದೆ. ಲೋಹಿಯಾ ಹೇಳುವ ಹಾಗೆ ಅಂತರ್‌ಜಾತೀಯ ಮದುವೆಗಳು ಹಾಗೂ ಸಾಮೂಹಿಕ ಭೋಜನಕೂಟಗಳು ಮಾತ್ರ ಜಾತಿ ವಿನಾಶಕ್ಕೆ ಉತ್ತರವಾಗಬಹುದೇನೋ...? ಆದರೂ ಜೀವನ ನಿರ್ಣಾಯಕ ಸಂಗತಿಯಾದ ಜಾತಿ ಭಾರತೀಯರ ಮಟ್ಟಿಗೆ ಉಸಿರಿನ ಭಾಗವೇ ಆಗಿದೆ. ಹಸಿವು, ನೀರಡಿಕೆ, ನಿದ್ರೆಗಳೆಂಬ ಸಹಜ ಪ್ರವೃತ್ತಿಗಳ ಸಾಲಿಗೆ ಅದು ಸೇರಿದಂತಿದೆ. ಜಾತಿಯನ್ನು ನಿರ್ಮೂಲ ಮಾಡುವುದಂತೂ ಸಾಧ್ಯವಿಲ್ಲವೆನಿಸುತ್ತದೆ.

ಕೊನೆಯದಾಗಿ, ಲೋಹಿಯಾರ, "ಜಾತಿವಿರೋಧಿ ಹೋರಾಟವನ್ನು ಶೂದ್ರರು ತಮ್ಮ ಹಕ್ಕುಗಳಿಗಾಗಿ ನಡೆಸಿದರೆ, ದ್ವಿಜರು ಅದನ್ನು ತಮ್ಮ ಕರ್ತವ್ಯವೆಂದು ಭಾವಿಸುತ್ತಾರೆಂಬುದು ನಿಜ. ಇದೊಂದು ತಿಳಿಗೇಡಿ ಮನೋವೃತ್ತಿ. ಯಾಕೆಂದರೆ ದ್ವಿಜರಿಗೂ ಕೂಡ ಇದೊಂದು ಹಕ್ಕುಗಳಿಗಾಗಿ ನಡೆಸುವ ಹೋರಾಟವಾಗಿದೆ. ಕೊನೆಗೂ ಹಕ್ಕು, ಕರ್ತವ್ಯಗಳಲ್ಲಿ ಭೇದವೆಣಿಸುವ ಅವಶ್ಯಕತೆಯೇ ಇರಲಾರದು", ಎಂಬ ಮಾತುಗಳು ಅರ್ಥಪೂರ್ಣವಾಗಿವೆ.

ಇಂದಿನ ಜಾಗತೀಕರಣದ ಸಂದರ್ಭದಲ್ಲಿ ಜಾತಿ ಎನ್ನುವುದು ಹಿಂದಿನಂತೆ ಒಂದು ಕಿರಿಕಿರಿಯಾಗಿ ಕಾಡದೆ ವ್ಯವಸ್ಥೆಯ ನಡುವೆ ಸೈಲೆಂಟ್ ಆಗಿ ಉಳಿದುಕೊಂಡೇ ನಮ್ಮ ಅರಿವಿಗೇಬಾರದಂತೆ ತನ್ನ ಕರಾಮತ್ತನ್ನು ಮಾಡುತ್ತಲೇ ಇದೆ, ಇರುತ್ತದೆ. ಇದು ಒಂದು ರೀತಿಯಲ್ಲಿ ವಿರೋಧಿಗಳೊಂದಿಗೆ ರಾಜಿಯಾಗಿಯೇ ಅವರನ್ನು ಬಗ್ಗುಬಡಿಯುವ ತಂತ್ರವಿದ್ದಂತೆ, ಜಾತ್ಯತೀತತೆಯ ಮಾತುಗಳನ್ನು ಆಡುತ್ತಲೇ ದವಡೆಯ ಕೆಳಗೆ ಜಾತಿಯ ಸೋಂಕನ್ನು ಹುದುಗಿಸಿಕೊಂಡಿರುವ ಅಪಾಯವಿದ್ದಂತೆ.

**ಎಸ್. ಬಿ. ಜೋಗುರ**
೧ನೇ ಮುಖ್ಯರಸ್ತೆ, ೨ನೇ ಅಡ್ಡರಸ್ತೆ, ಶ್ರೀ ನಗರ, ಧಾರವಾಡ - ೩

Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Editor : Dr. G. Ramakrishna

**HOSATHU** Kannada Monthly / February 2012 / Rs. 12
RNI Regd. KARKAN / 1999 / 614. Karnataka Regd. KRNA/BGE/7/2012-14
Licenced to post without prepayment. WPP No.14.
Posted at MBC, Bangalore GPO-560001 on the 28th of every month. (No. of Pages 64)